# ಹಂಪಿ ಪರಿಸರದ ವಸತಿನೆಲೆಗಳು

(ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ಇಂಚಲ ಶಶಿಕಲಾ ರಾಘವೇಂದ್ರ

ಮಾರ್ಗದರ್ಶಕರು
ಡಾ. ಸಿ.ಎಸ್.ವಾಸುದೇವನ್
ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ 583 276

೨೦೧೭

# ಹಂಪಿ ಪರಿಸರದ ವಸತಿನೆಲೆಗಳು

(ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

**ಇಂಜನಿ ಶಶಿಕಲಾ ರಾಘವೇಂದ್ರ**



ಮಾರ್ಗದರ್ಶಕರು

**ಡಾ. ಸಿ.ಎಸ್.ವಾಸುದೇವನ್**

ಪ್ರಾಧ್ಯಾಪಕರು




ಸಮಾಜವಿಜ್ಞಾನಗಳ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೭




## ಮಾರ್ಗದರ್ಶಕರ ದೃಢೀಕರಣ ಪತ್ರ

**ಇಂಜನಿ ಶಶಿಕಲಾ ರಾಘವೇಂದ್ರ** ಅವರು ಪಿಹೆಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಹಂಪಿ ಪರಿಸರದ ವಸತಿನೆಲೆಗಳು** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು, ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

C. S. Vasudevan

**ಡಾ ಸಿ ಎಸ್. ವಾಸುದೇವನ್**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೨.೯.೨೦೧೭

## ಸಂಶೋಧಕರ ಘೋಷಣಾ ಪತ್ರ

**ಹಂಪಿ ಪರಿಸರದ ವಸತಿನೆಲೆಗಳು** ಎಂಬ ಈ ಮಹಾಪ್ರಬಂಧವನ್ನು ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ.ಸಿ.ಎಸ್. ವಾಸುದೇವನ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು, ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

I. R. Shashikala

**ಇಂಜನಿ ಶಶಿಕಲಾ ರಾಘವೇಂದ್ರ**
ಸಂಶೋಧಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೨.೯.೨೦೧೭

# ಕೃತಜ್ಞತೆಗಳು.....

ಭಾರತದ ಕೆಲವೊಂದು ಸಾಂಸ್ಕೃತಿಕ ಕಾಲಘಟ್ಟಗಳಿಗೆ ಸಂಬಂಧಿಸಿದಂತೆ ವಸತಿನೆಲೆಗಳ ಕುರಿತು ಅಧ್ಯಯನಗಳು ನಡೆದಿವೆ. ಆದರೆ ದಕ್ಷಿಣ ಭಾರತದಲ್ಲಿ ಅದರಲ್ಲಿಯೂ ಕರ್ನಾಟಕದಲ್ಲಿ ವಸತಿನೆಲೆಗಳ ಕುರಿತ ಪೂರ್ಣ ಪ್ರಮಾಣದ ಅಧ್ಯಯನಗಳು ಬೆರಳೆಣಿಕೆಯಷ್ಟು ಮಾತ್ರವೇ ನಡೆದಿವೆಯಾದರೂ ಪುರಾತತ್ವೀಯ ದೃಷ್ಟಿಕೋನಗಳಿಂದ ಮತ್ತು ಪ್ರಾಕ್ತನ ಅವಶೇಷಗಳನ್ನು ಆಧರಿಸಿ ವಸತಿನೆಲೆಗಳ ಅಧ್ಯಯನಗಳು ನಡೆದಿಲ್ಲವಾದ್ದರಿಂದ ಪ್ರಸ್ತುತ ಪ್ರದೇಶದ ಅಧ್ಯಯನ ಕೈಗೊಳ್ಳಲಾಗಿದೆ. ಈ ನಿಟ್ಟಿನಲ್ಲಿ **ಹಂಪಿ ಪರಿಸರದ ವಸತಿನೆಲೆಗಳು** ಕುರಿತು ಸಂಶೋಧನೆಯನ್ನು ಕೈಗೊಂಡು ಮಹಾಪ್ರಬಂಧವನ್ನು ರಚಿಸಲಾಗಿದೆ.

ನನ್ನ ಆಲೋಚನೆಗಳಿಗೆ ಹೊಸದಾದ ರೂಪವನ್ನು ಕೊಟ್ಟ ಹಾಗೂ ಈ ಮಹಾಪ್ರಬಂಧದ ಮಾರ್ಗದರ್ಶಕರಾಗಿ ಅಧ್ಯಯನದ ಪ್ರತಿ ಹಂತದಲ್ಲೂ ತಿದ್ದಿ-ತೀಡಿ ಮಾರ್ಗದರ್ಶನ ಮಾಡಿದ ನನ್ನ ಗುರುಗಳಾದ ಡಾ. ಸಿ.ಎಸ್. ವಾಸುದೇವನ್ ಅವರಿಗೆ ಗೌರವ ಪೂರಕವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೆಯೇ ವಿಭಾಗದ ಮುಖ್ಯಸ್ಥರಾದ ಡಾ. ವಾಸುದೇವ ಬಡಿಗೇರ, ಪ್ರಾಧ್ಯಾಪಕರುಗಳಾದ ಡಾ. ಸಿ ಮಹಾದೇವ, ಡಾ. ರಮೇಶ ನಾಯಕ್ ಮತ್ತು ಡಾ. ಎಸ್.ವೈ. ಸೋಮಶೇಖರ್ ಇವರೆಲ್ಲರನ್ನೂ ಆತ್ಮೀಯವಾಗಿ ನೆನೆಯುವೆ.

ನನ್ನ ಶ್ರೇಯಸ್ಸಿಗಾಗಿ ತಮ್ಮ ಕಷ್ಟ-ಸುಖಗಳನ್ನು ಮರೆತು, ಸದಾ ನನ್ನ ಬೆನ್ನೆಲುಬಾಗಿ ನಿಂತು ನನಗೆ ಪ್ರೇರಣೆ ನೀಡುತ್ತಿರುವ ನನ್ನ ಪೂಜ್ಯನೀಯ ತಂದೆಯಾದ ಶ್ರೀ ರಾಘವೇಂದ್ರ ಇಂಜನಿ, ತಮ್ಮ ಶ್ರೀಶೈಲೇಶ ಮತ್ತು ತಂಗಿ ಕಾಂಚನಾ ಅವರುಗಳನ್ನು ಪ್ರೀತಿಯಿಂದ ಸ್ಮರಿಸುತ್ತೇನೆ. ಪಿಹೆಚ್.ಡಿ. ಅಧ್ಯಯನದ ಪ್ರಾರಂಭದಲ್ಲಿ ಪ್ರೇರಣೆ ನೀಡಿದ ಪೂಜ್ಯನೀಯ ತಾಯಿಯಾದ ದಿ. ಶ್ರೀಮತಿ ಅನುಸೂಯಾ ಹಾಗೂ ಕೊನೆಯ ಹಂತದಲ್ಲಿ ನಮ್ಮೆಲ್ಲರನ್ನು ಅಗಲಿದ ಪ್ರೀತಿಯ ತಮ್ಮನಾದ ದಿ. ಹರೀಶರನ್ನು ನೆನಪಿಸಿಕೊಳ್ಳುತ್ತೇನೆ.

ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿ ಒದಗಿಸಿಕೊಟ್ಟು, ನನಗೆ ಸಲಹೆ–ಸೂಚನೆಗಳನ್ನು ನೀಡಿದ ಡಾ. ಅ. ಸುಂದರ, ಡಾ. ಕೆ.ಜಿ. ಭಟ್ಟಸೂರಿ, ಡಾ. ಕೆ. ಮೋಹನ್‌ಕೃಷ್ಣ ರೈ ಮತ್ತು ಡಾ. ಮಾಧವ ಪೆರಾಜೆ, ಇವರೆಲ್ಲರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅಧ್ಯಯನಕ್ಕೆ ಸಹಾಯ ಮಾಡಿದ ಅಕ್ಷರ ಗ್ರಂಥಾಲಯ, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಕಮಲಾಪುರ, ರಾಜ್ಯ ಪುರಾತತ್ವ, ವಸ್ತುಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಕಮಲಾಪುರ ಮತ್ತು ಹಂಪಿ ವಿಶ್ವಪರಂಪರೆ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆಯ ಎಲ್ಲಾ ಸಿಬ್ಬಂದಿಗಳನ್ನು ಪ್ರೀತಿಯಿಂದ ಸ್ಮರಿಸುವೆ.

ನನ್ನ ಅಧ್ಯಯನಕ್ಕೆ ಸಹಕರಿಸಿದ ನನ್ನ ಸ್ನೇಹಿತರಾದ ಸಬಿಹ ನಾಜ್, ಶ್ರೀಮತಿ ಸೌಮ್ಯ ಸುನೀಲ್ ಸಜ್ಜನ್, ಡಾ. ಪದ್ಮಜಾ ದೇಸಾಯಿ, ಪದ್ಮ ಬಿ.ಎಸ್, ರೇವ್ಯಾಗೋವಿಂದ ನಾಯಕ, ಗೀತಾ ಪೋಲಿಸ್ ಪಾಟಿಲ್, ರವಿ, ಸುಮಾ ಎಚ್.ಎಸ್, ಗೀತಾ ಬಡಿಗೇರ, ಗೀತಾ ಸಿ, ಮತ್ತು ನನ್ನ ವಿಭಾಗದ ಎಲ್ಲಾ ಪಿಹೆಚ್.ಡಿ. ಮತ್ತು ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿಗಳನ್ನು ಹಾಗೂ ಇತರೆ ಎಲ್ಲಾ ಸ್ನೇಹಿತರನ್ನು ಸ್ಮರಿಸುತ್ತೇನೆ. ಡಿ.ಟಿ.ಪಿ ಮಾಡಿ ಸಹಕರಿಸಿದ ಸುಮಾ ಅವರಿಗೂ ಹಾಗೂ ಈ ಅಧ್ಯಯನಕ್ಕೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನಾನು ಋಣಿಯಾಗಿದ್ದೇನೆ.

**ಇಂಜನಿ ಶಶಿಕಲಾ ರಾಘವೇಂದ್ರ ....**

## ಪರಿವಿಡಿ

**ಅಧ್ಯಾಯ ೧ ಪ್ರಸ್ತಾವನೆ** – ೧

೧.೧ ಪ್ರಸ್ತಾವನೆ
೧.೨ ಅಧ್ಯಯನದ ಉದ್ದೇಶ
೧.೩ ಅಧ್ಯಯನದ ವ್ಯಾಪ್ತಿ
೧.೪ ಈವರೆಗಿನ ಅಧ್ಯಯನ
೧.೫ ಅಧ್ಯಯನದ ವಿಧಾನ
೧.೬ ಅಧ್ಯಯನದ ಸ್ವರೂಪ

**ಅಧ್ಯಾಯ ೨ ವಸತಿ ನೆಲೆಗಳ ಹುಟ್ಟು ಮತ್ತು ಬೆಳವಣಿಗೆ** – ೩೩

೨.೧ ವಸತಿ ನೆಲೆಗಳ ಹುಟ್ಟು ಮತ್ತು ಬೆಳವಣಿಗೆ
೨.೨ ವಸತಿ ನೆಲೆಗಳ ಲಕ್ಷಣಗಳು
೨.೩ ವಸತಿ ನೆಲೆಗಳ ರಚನಾ ವಿನ್ಯಾಸ

**ಅಧ್ಯಾಯ ೩ ಹಂಪಿ ಪರಿಸರದ ವಸತಿನೆಲೆಗಳು** – ೯೭

೩.೧ ಹಂಪಿ ಪರಿಸರದ ಭೌಗೋಳಿಕ ಹಿನ್ನಲೆ
೩.೨ ಹಂಪಿ ಪರಿಸರದ ವಸತಿನೆಲೆಗಳು
೩.೩ ವಿದೇಶಿ ಪ್ರವಾಸಿಗರ ಸಾಹಿತ್ಯದಲ್ಲಿನ ಉಲ್ಲೇಖಗಳು

**ಅಧ್ಯಾಯ ೪ ಹಂಪಿ ಪರಿಸರದ ವಸತಿನೆಲೆಗಳ ವಿಶ್ಲೇಷಣೆ** – ೨೨೯

**ಅಧ್ಯಾಯ ೫ ಸಮಾರೋಪ** – ೨೪೫

**ಅನುಬಂಧಗಳು** – ಆಕರ ಗ್ರಂಥಗಳು – ೨೫೪
ನಕ್ಷೆಗಳು

# ಸಂಕೇತ ಸೂಚಿ

| | | |
|---|---|---|
| *IAR* | – | *Indian Archaeology - A Review* |
| *IA* | – | *Indian Antiquary* |
| *AI* | – | *Ancient India* |
| *VPR* | – | *Vijayanagara Progress of Research* |
| *KUES* | – | *Kannada University Epigraphical Series* |
| *SII* | – | *South Indian Inscription* |
| *QJMS* | – | *Quarterly Journal of the Mythic Society* |
| *ಇದ* | – | *ಇತಿಹಾಸ ದರ್ಶನ* |
| *ವಿಅ* | – | *ವಿಜಯನಗರ ಅಧ್ಯಯನ* |

# ಅಧ್ಯಾಯ – ೧

## ಪ್ರಸ್ತಾವನೆ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ವ್ಯಾಪ್ತಿ

೧.೪ ಈವರೆಗಿನ ಅಧ್ಯಯನ

೧.೫ ಅಧ್ಯಯನದ ವಿಧಾನ

೧.೬ ಅಧ್ಯಯನದ ಸ್ವರೂಪ

# ಅಧ್ಯಾಯ ೧

# ಹಂಪಿ ಪರಿಸರದ ವಸತಿ ನೆಲೆಗಳು

## ೧.೧: ಪ್ರಸ್ತಾವನೆ

ಶಿಲಾಯುಗ ಕಾಲದಿಂದ ಆರಂಭಗೊಳ್ಳುವ ಭಾರತದ ಇತಿಹಾಸವು ಎರಡು ಲಕ್ಷ ವರ್ಷದಷ್ಟು ಪ್ರಾಚೀನವಾಗಿದೆ. ಹಳೇಶಿಲಾಯುಗ ಕಾಲದಲ್ಲಿ ಅಲೆಮಾರಿಯಾಗಿದ್ದ ಮಾನವನು ನೈಸರ್ಗಿಕ ಗುಹೆ ಮತ್ತು ಕಲ್ಲಾಸರೆಗಳಲ್ಲಿ ಆಶ್ರಯ ಪಡೆಯುತ್ತಿದ್ದನು. ತನ್ನ ಅಲೆಮಾರಿ ಜೀವನ ಕ್ರಮವನ್ನು ಬಿಟ್ಟು ಒಂದೆಡೆ ನೆಲೆ ನಿಲ್ಲಲು ಪ್ರಾರಂಭಿಸಿದ್ದು ಅವನ ಜೀವನ ಕ್ರಮದಲ್ಲಿ ಆದ ಮಹತ್ತರ ಬದಲಾವಣೆಯು ಮಾನವನ ಇತಿಹಾಸದಲ್ಲಿ ಕ್ರಾಂತಿಕಾರಕ ಎಂದು ವರ್ಣಿಸಲಾಗಿದೆ. ಪುರಾತತ್ವಜ್ಞರು ಈ ಕಾಲಘಟ್ಟವನ್ನು ನವಶಿಲಾಯುಗ ಕಾಲವೆಂದು ಗುರುತಿಸಿರುವರು. ಇಲ್ಲಿಂದ ಆರಂಭಗೊಂಡ ಮಾನವನ ಬೆಳವಣಿಗೆಯು ನಾಗರೀಕ ಸಮಾಜದವರೆಗೆ ಅಡೆತಡೆಯಿಲ್ಲದೆ ಸಾಗಿ ಬಂದಿತು. ಭಾರತದ ವಾಯವ್ಯ ಭಾಗದಲ್ಲಿ ದೊರಕಿರುವ ಪ್ರಾಕ್ತನ ಆಧಾರಗಳಿಂದ ಭಾರತ–ಆಫ್ಘಾನ್ ಪ್ರದೇಶಗಳಲ್ಲಿ ಮಾನವನು ಒಂದಡೆ ನೆಲೆನಿಂತು ವಾಸಕ್ಕೆ ಯೋಗ್ಯವಾದ ಮನೆಗಳನ್ನು ನಿರ್ಮಿಸಿಕೊಂಡು ಮೃತ್ಪಾತ್ರೆಗಳನ್ನು ಹಾಗೂ ಕಲ್ಲಿನ ಪಾತ್ರೆಗಳನ್ನು ಬಳಸತೊಡಗಿದನೆಂಬುದಕ್ಕೆ ಪುರಾವೆಗಳು ದೊರಕಿವೆ. ಮಾನವನ ಸಾಂಸ್ಕೃತಿಕ ವಿಕಸನದ ಕಾಲಾನುಕ್ರಮಣಿಕೆಯ ಹಂತಗಳನ್ನು ಮೆಹರ್‌ಘರ್‌ನಲ್ಲಿ ಗುರುತಿಸಲಾಗಿದೆ. ಈ ಹಂತದಲ್ಲಿ ಮಾನವನು ನೆಲೆ ನಿಲ್ಲುವುದರೊಂದಿಗೆ ಕೃಷಿ ಚಟುವಟಿಕೆಯನ್ನು ಪ್ರಾರಂಭಿಸಿರುವುದು ಗಮನಾರ್ಹ ಸಂಗತಿಯಾಗಿದೆ.

ಶಿಲೆ ಅಥವಾ ಕಲ್ಲನ್ನು ಆಯುಧಕ್ಕಿಂತ ಮಿಗಿಲಾಗಿ ಉಪಕರಣವಾಗಿ ಬಳಸಿರುವುದು ಸಹ ವಿಶೇಷವಾಗಿದೆ. ಆದ್ದರಿಂದ ಈ ಕಾಲಘಟ್ಟವನ್ನು ನವಶಿಲಾಯುಗ ಎಂದು ಗುರುತಿಸಲಾಗುತ್ತದೆ. ಲೋಹದ ಜ್ಞಾನವು ನವಶಿಲಾಯುಗ ಕಾಲಘಟ್ಟದಲ್ಲಿ ಇರಲಿಲ್ಲವಾದರೂ ಅದರ ಮುಂದಿನ ಹಂತದ ತಾಮ್ರಶಿಲಾಯುಗದಲ್ಲಿ ಲೋಹವನ್ನು ಬಳಕೆಗೆ ತರಲಾಗುತ್ತದೆ. ಹಿಂದಿನ ಸಾಂಸ್ಕೃತಿಕ ಕಾಲಘಟ್ಟದಲ್ಲಿ ವ್ಯವಸ್ಥಿತವಾದ ಮನೆ ಮತ್ತು ಮನೆಗಳ ಸಮೂಹ/ಗುಂಪು ಕಾಣಸಿಗುವುದಿಲ್ಲ. ತಾಮ್ರಶಿಲಾಯುಗದಲ್ಲಿ ವ್ಯವಸ್ಥಿತ ಮನೆಗಳು ಮತ್ತು ಗ್ರಾಮ ಹಾಗೂ ನಗರಗಳ ಉಗಮವನ್ನು ಕಾಣಬಹುದು. ಈ ಕಾಲಘಟ್ಟಕ್ಕೆ ಸೇರಿದ ಅಂತಹ ಸಾಂಸ್ಕೃತಿಕ ಕಾಲಘಟ್ಟವನ್ನು ಹರಪ್ಪ/ಸಿಂಧೂ ನಾಗರೀಕತೆ ಎಂದು ಹೆಸರಿಸಲಾಗಿತ್ತು. ಭಾರತದಲ್ಲಿ ನಡೆದ ಇತ್ತೀಚಿನ ಶೋಧಗಳಿಂದ ಈ ಕಾಲಘಟ್ಟವನ್ನು ಸರಸ್ವತಿ ನದಿ ಸಂಸ್ಕೃತಿ ಎಂದು ಕರೆಯಲಾಗಿದೆ. ಇದು ನಾಗರೀಕತೆ ಮತ್ತು ನಗರೀಕರಣದ ಪ್ರಥಮ ಹೆಜ್ಜೆಯಾಗಿರುವುದರಿಂದ ಇದನ್ನು ಪ್ರಥಮ ನಗರೀಕರಣ ಎಂದು ಸಹ ಗುರುತಿಸಲಾಗುತ್ತದೆ. ಇದರ ನಂತರ ಶೋಧ ಮತ್ತು ಪ್ರಾಕ್ತನ ಅಧ್ಯಯನಗಳಿಂದ ವಿವಿಧ ಚಾರಿತ್ರಿಕ ಕಾಲಘಟ್ಟಗಳು ಮತ್ತು ಸಾಂಸ್ಕೃತಿಕ ಅಂಶಗಳಿಂದ ದ್ವಿತೀಯ ಮತ್ತು ತೃತೀಯ ನಗರೀಕರಣವನ್ನು ಭಾರತದಲ್ಲಿ ಗುರುತಿಸಲಾಗಿದೆ.

ಎರಡನೆಯ ಹಂತದ ನಗರೀಕರಣದ ಕುರುಹುಗಳು ಕ್ರಿ.ಪೂ. ಮೂರನೇ ಮತ್ತು ಎರಡನೇ ಶತಮಾನದ ಕಾಲಘಟ್ಟದಲ್ಲಿ ಮೌರ್ಯರ ಹಾಗು ಬರವಣಿಗೆಯ ಕಾಲವನ್ನು ಮುಖ್ಯವಾಗಿ ಭಾರತದ ಗಂಗಾನದಿ ಕೊಳ್ಳದಲ್ಲಿ ಗುರುತಿಸಲಾಗಿದೆ. ಮೂರನೆಯ ಹಂತದ ನಗರೀಕರಣ ಪ್ರಕ್ರಿಯೆಯು ಎರಡನೆಯ ನಗರೀಕರಣದ ನಂತರ ಅಂದರೆ ಸುಮಾರು ಒಂದು ಸಾವಿರ ವರ್ಷದ ನಂತರ, ಮಧ್ಯಕಾಲೀನ ಯುಗದಲ್ಲಿ ಸರಿ ಸುಮಾರು ಕ್ರಿ.ಶ. ೧೨–೧೩ನೇ ಶತಮಾನದಲ್ಲಿ ಪ್ರಚಲಿತಗೊಂಡಿತೆಂಬುದನ್ನು ಭಾರತದಲ್ಲಿ ದೊರಕಿರುವ ಕೆಲವು ಪ್ರಮುಖ ವಸತಿನೆಲೆಗಳ ಅಧ್ಯಯನದಿಂದ ದೃಢಪಟ್ಟಿವೆ. ಪ್ರಸ್ತುತ ನಾಲ್ಕನೆಯ ನಗರೀಕರಣದ ಹೊಸ್ತಿಲಲ್ಲಿ ೨೧ನೇ ಶತಮಾನದ ಮಾನವನಿದ್ದಾನೆ. ಮಾನವನು ಒಂದೆಡೆ ನೆಲೆ ನಿಲ್ಲಲು ಪ್ರಾರಂಭಿಸಿದ ಕಾಲದಿಂದ ಇಂದಿನವರೆಗಿನ ಅವನ ಇತಿಹಾಸದಲ್ಲಿ ಮೂರು ನಗರೀಕರಣ ಹಂತಗಳು ಆಗುಹೋಗಿವೆ. ಮೂರು ನಗರೀಕರಣ ಹಂತಗಳು ಮಾನವನ ವಸತಿಗೆ ಸಂಬಂಧಿಸಿದ ಏಳು–ಬೀಳುಗಳು ಹಾಗೂ ವಿಕಾಸವು ಕುತೂಹಲಕಾರಿಯಾಗಿರುವುದಲ್ಲದೇ ಅವನ ಪ್ರಗತಿಯನ್ನು ತೋರುತ್ತದೆ. ವಸತಿನೆಲೆಗಳು ಎಲ್ಲಿ ಮತ್ತು ಹೇಗೆ ನಿರ್ಮಾಣವಾಗುತ್ತಿತ್ತು ಎಂಬಿತ್ಯಾದಿ ವಿಷಯಗಳು ವಿವಿಧ ಸಾಂಸ್ಕೃತಿಕ ಕಾಲಘಟ್ಟಗಳ ಮೇಲೆ ಬೆಳಕನ್ನು ಚೆಲ್ಲುತ್ತದೆ.

ನವಶಿಲಾಯುಗ ಮತ್ತು ತಾಮ್ರಶಿಲಾಯುಗ ಕಾಲಘಟ್ಟಗಳಿಗೆ ಸಂಬಂಧಿಸಿದಂತೆ ಪುರಾತತ್ವ ಅವಶೇಷಗಳು ಪ್ರಮುಖ ಆಕರವಾಗಿ ನಮಗೆ ದೊರಕುತ್ತವೆ. ಭಾರತದಲ್ಲಿ ನಡೆದಿರುವ ಉತ್ಖನನಗಳು ನವಶಿಲಾಯುಗ ಮತ್ತು ತಾಮ್ರಶಿಲಾಯುಗಕ್ಕೆ ಸಂಬಂಧಿಸಿದ ಅವಶೇಷಗಳನ್ನು ನೀಡಿವೆ. ಒಂದು ಮನೆ ಅಥವಾ ವಸತಿಗೃಹ ಮತ್ತು ವಸತಿ ನೆಲೆಯ ರಚನಾ ವಿನ್ಯಾಸವು ಪ್ರಮುಖವಾಗಿ ವಿಸ್ತೃತ ಉತ್ಖನನದ ಮೂಲಕ ಅರಿಯಲು ಸಹಕಾರಿಯಾಗಿವೆ. ಭಾರತದಲ್ಲಿ ನವಶಿಲಾಯುಗ ಮತ್ತು ತಾಮ್ರಶಿಲಾಯುಗ ಕಾಲಘಟ್ಟಗಳಿಗೆ ಸಂಬಂಧಿಸಿದ ಅನೇಕ ನೆಲೆಗಳನ್ನು ಉತ್ಖನನ ಮಾಡಲಾಗಿದೆ. ದಕ್ಷಿಣ ಭಾರತಕ್ಕಿಂತ ಉತ್ತರ ಭಾರತದಲ್ಲಿನ ಅನೇಕ ನೆಲೆಗಳು ಉತ್ಖನನಗೊಂಡಿವೆ. ಆದಿಇತಿಹಾಸ ಕಾಲಘಟ್ಟದಲ್ಲಿ ಬರವಣಿಗೆಯು ಪ್ರಾರಂಭಗೊಂಡಿದ್ದರಿಂದ ಪ್ರಾಚ್ಯಾವಶೇಷಗಳೊಂದಿಗೆ ಸಾಹಿತ್ಯಿಕ ಆಕರಗಳು ವಸತಿ ನೆಲೆಯ ಕುರಿತು ದಾಖಲೆಗಳನ್ನು ನೀಡುತ್ತವೆ. ನಗರ, ನಗರೀಕರಣ ಮತ್ತು ನಾಗರೀಕ ಮಂತಾದ ಪದಗಳ ವ್ಯಾಖ್ಯೆ ಮತ್ತು ವಿವರಣೆಗಳು ಸಾಹಿತ್ಯ ಕೃತಿಗಳಲ್ಲಿ ದಾಖಲಾಗಿವೆ. ಇಲ್ಲಿ ಉದಾಹರಿಸುವುದಾದರೆ ಮೌರ್ಯರ ಕಾಲದ ನಗರ, ಗ್ರಾಮ, ಕುಗ್ರಾಮ, ಮುಂತಾದ ಶ್ರೇಣಿಕೃತ ವಸತಿನೆಲೆಗಳ ವಿವರಗಳನ್ನು ಕೌಟಿಲ್ಯನ 'ಅರ್ಥಶಾಸ್ತ್ರ'ವು ನೀಡುತ್ತದೆ. ವಸತಿನೆಲೆಗಳನ್ನು ನಗರ, ಸಕನಗರ (ಉಪನಗರ) ಪುರ, ಎಂದು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿಂಗಡಿಸಿ ವಿವರಿಸಲಾಗಿದೆ. ಇವುಗಳೆಲ್ಲವು ಸೇರಿ ಒಂದು ದೊಡ್ಡ ನಗರವಾಗುತ್ತಿತ್ತು. ನಗರವನ್ನು ಕೇಂದ್ರವಾಗಿಟ್ಟುಕೊಂಡು ಆಡಳಿತ, ವಾಣಿಜ್ಯ ಮತ್ತು ವ್ಯಾಪಾರ ನಡೆಯುತ್ತಿದ್ದವು. ಅಂತಹ ಕೆಲವು ನಗರಗಳಿಗೆ ಹೊಂದಿಕೊಂಡಂತೆ ಸಕನಗರಗಳಿದ್ದವು (ಉಪನಗರಗಳು) ಇವುಗಳು ನಗರಕ್ಕೆ ಬೇಕಾಗುವ ವಸ್ತುಗಳ ಪೂರೈಕೆ ಹಾಗೂ ಸರಕು ಸಾಗಾಣಿಕೆಯ ಕಾರ್ಯಗಳನ್ನು ಪೂರಕವಾಗಿ ಮಾಡುತ್ತಿದ್ದವು. ಪುರಗಳು ಸಕನಗರಗಳಿಗೆ ಪೂರಕವಾಗಿತ್ತು.

ನಗರ, ಸಕನಗರ ಮತ್ತು ಪುರ ಇವುಗಳು ವಿವಿಧ ಗ್ರಾತ್ರದಲ್ಲಿದ್ದವು ಮತ್ತು ಒಂದೊಕ್ಕೊಂದು ಪೂರಕವಾಗಿ ಕಾರ್ಯನಿರ್ವಹಿಸುತ್ತಿತ್ತು ಎಂದು ಅರಿಯಬಹುದು. ಅಲ್ಲಿನ ವಿವರಣೆಯಂತೆ ನಗರವನ್ನು ಪಟ್ಟಣವೆಂದು ಕರೆಯಲಾಗುತ್ತಿದ್ದು ಅದಕ್ಕೆ ಸಹಾಯಕವಾಗಿ ನಿಗಮಗಳಿದ್ದವು. ಗ್ರಾಮಗಳು ನಿಗಮಗಳಿಗೆ ಹೊಂದಿಕೊಂಡಿದ್ದವು. ಗ್ರಾಮಗಳಲ್ಲಿ ಒಂದೇ ಗುಡಿಸಲು ಅಥವಾ ಒಂದಕ್ಕಿಂತ ಅಧಿಕ ಗುಡಿಸಲುಗಳಿರಬಹುದು. ಈ ಗುಡಿಸಲುಗಳನ್ನು ಕಟ್ಟಿಗೆಯಿಂದ ಕಟ್ಟಿ ಛಾವಣಿಗೆ ಹುಲ್ಲಿನ ಹೊದಿಕೆಯನ್ನು ಹಾಸಲಾಗುತ್ತಿತ್ತು. ನಗರ ಅಥವಾ ಪಟ್ಟಣ ಹಾಗೂ ನಿಗಮಗಳಲ್ಲಿ ಮನೆಗಳನ್ನು ಕಲ್ಲು ಮತ್ತು ಇಟ್ಟಿಗೆಗಳಿಂದ ಕಟ್ಟಲಾಗುತ್ತಿತ್ತು. ಈ ಮೇಲಿನ ವಿವರಣೆಗಳಿಂದ ಅಂದಿನ ಕಾಲದಲ್ಲಿ ಮೌರ್ಯರ ಕಾಲದಲ್ಲಿ ಶ್ರೇಣಿಕೃತವಾದ

ವಸತಿನೆಲೆಗಳು ಅಸ್ತಿತ್ವದಲ್ಲಿದ್ದವೆಂಬುದು ದೃಢಪಡುತ್ತದೆ. ಅದನ್ನು ಈ ರೀತಿಯಾಗಿ ತೋರಬಹುದು. ನಗರ > ಸಕನಗರ (ಉಪನಗರ) > ಪುರ ಅಥವಾ ನಗರ ಅಥವಾ ಪಟ್ಟಣ್ಣ > ನಿಗಮ > ಗ್ರಾಮ > ಗುಡಿಸಲುಗಳು ಪಟ್ಟಣ್ಣ ಮತ್ತು ಗ್ರಾಮಗಳಲ್ಲಿನ ಮನೆ ಮತ್ತು ಕಟ್ಟಡದ ಸಾಮಗ್ರಿಗಳ ವಿವರಣೆಯನ್ನು ನೀಡಿರುವುದು ಕುತೂಹಲಕರ.

ದಕ್ಷಿಣ ಭಾರತದಲ್ಲಿ ಆದಿಇತಿಹಾಸ ಕಾಲಕ್ಕೆ ಸಂಬಂಧಿಸಿದಂತೆ ಸಾಹಿತ್ಯಿಕ ಮತ್ತು ಪ್ರಾಕ್ತನ ಅವಶೇಷಗಳ ದೊರಕಿವೆ. ತಮಿಳಿನ ಸಂಗಮ್ ಸಾಹಿತ್ಯವು ಕ್ರಿಸ್ತಶಕ ಆರಂಭ ಕಾಲದಲ್ಲಿ ರಚನೆಯಾಗಿದ್ದು ಅಂದಿನ ಜನಜೀವನವನ್ನು ಕುರಿತು ವಿಸ್ತೃತವಾಗಿ ತಿಳಿಸುತ್ತದೆ. ಅದರಲ್ಲಿ ಪ್ರಮುಖವಾಗಿ ಅಂದಿನ ನಗರ, ಗ್ರಾಮ, ರಾಜಧಾನಿ, ಬಂದರು ಪಟ್ಟಣಗಳು ಹಾಗೂ ಶವಸಂಸ್ಕಾರ ಪದ್ಧತಿಗಳ ಕುರಿತು ಮಾಹಿತಿಯನ್ನು ಒದಗಿಸುತ್ತವೆ. ಆಂಧ್ರಪ್ರದೇಶ, ತಮಿಳುನಾಡು, ಕೇರಳ ಮತ್ತು ಕರ್ನಾಟಕಗಳಲ್ಲಿ ನಡೆಸಲಾದ ಅನೇಕ ಪ್ರಾಕ್ತನ ನೆಲೆಗಳಲ್ಲಿ ಸಂಗಮ್ ಸಾಹಿತ್ಯಿಕ ಉಲ್ಲೇಖಿತ ಮಾಹಿತಿಗಳಿಗೆ ಪೂರಕವಾದ ಪ್ರಾಚ್ಯಾವಶೇಷಗಳು ದೊರಕಿವೆ. ಉದಾಹರಣೆಗೆ ತಮಿಳುನಾಡಿನ ಕಾವೇರಿಪೂಂಪಟ್ಟಿಣಂ, ಅರಿಕಮೇಡು, ಉರೈಯೂರ್, ಕೀಳಡಿ, ಆಂಧ್ರಪ್ರದೇಶದ ಘಂಟಸಾಲ, ವಡ್ಡಮಾನು, ಕರ್ನಾಟಕದ ಬ್ರಹ್ಮಗಿರಿ (ಇಸಿಲಾ), ಸನ್ನತಿ, ವಡಗಾಂ–ಮಾಧವಪುರ, ಕೇರಳದ ಪಟ್ಟಿಣಂ, ಇತ್ಯಾದಿಗಳು. ಚಾರಿತ್ರಿಕ ಕಾಲಘಟ್ಟಕ್ಕೆ ಸಂಬಧಿಸಿದಂತೆ ಅನೇಕ ಅರಸುಮನೆತಗಳ ರಾಜಧಾನಿಪಟ್ಟಣ ಮತ್ತು ಪ್ರಮುಖ ನಗರ ಹಾಗೂ ಸ್ಥಳಗಳ ಉಲ್ಲೇಖಗಳು ಸಮಕಾಲೀನ ಸಾಹಿತ್ಯ ಮತ್ತು ಶಾಸನಗಳಲ್ಲಿ ಉಲ್ಲೇಖವಾಗಿದೆ. ವ್ಯಾಪಕ ಉತ್ಖನನಗಳು ಅಂತಹ ಉಲ್ಲೇಖಿತ ಸ್ಥಳಗಳಲ್ಲಿ ನಡೆಯದೇ ಇರುವುದರಿಂದ ನಮಗೆ ವಸ್ತು ಅವಶೇಷಗಳು, ನಗರ ರಚನಾ ವಿನ್ಯಾಸಗಳು ಅಷ್ಟಾಗಿ ತಿಳಿದುಬಂದಿಲ್ಲ. ಬನವಾಸಿಯಲ್ಲಿ ನಡೆದ ಉತ್ಖನನವು ಅಂದಿನ ರಾಜಧಾನಿಪಟ್ಟಣದ ಸ್ಥೂಲ ರಚನಾ ವಿನ್ಯಾಸ ಕುರಿತು ಮಾಹಿತಿಯನ್ನು ಒದಗಿಸಿದೆ.

ಆದಿಇತಿಹಾಸ ಕಾಲಘಟ್ಟದಲ್ಲಿ ಆರಂಭಗೊಂಡ ನಗರೀಕರಣ ಹಾಗೂ ವಸತಿನೆಲೆಗಳ ನಿರ್ಮಾಣ ಪ್ರಕ್ರಿಯೆಯು ಏಳು ಬೀಳುಗಳನ್ನು ಹೊಂದಿದರೂ ಅವಿರತವಾಗಿ ಚಾರಿತ್ರಿಕ ಕಾಲಘಟ್ಟದಲ್ಲಿ ಮಧ್ಯಯುಗೀನ ಕಾಲದವರೆಗೂ ಸಾಗಿಬಂದಿರುವುದು ವಿಶೇಷ ಹಾಗೂ ಗಮನಾರ್ಹ. ಮಧ್ಯಯುಗೀನ ಕಾಲದಲ್ಲಿ ಭಾರತದ ವಿವಿದೆಡೆ ದೊಡ್ಡ ಸಾಮ್ರಾಜ್ಯಗಳು ತಲೆ ಎತ್ತಿದ ಪರಿಣಾಮವಾಗಿ ಬೃಹತ್ ನಗರಗಳು ಮತ್ತು ರಾಜಧಾನಿಪಟ್ಟಣಗಳು ನಿರ್ಮಾಣವಾದವು. ಉತ್ತರ ಭಾರತದಲ್ಲಿ ಫತೇಪುರಸಿಕ್ರಿ, ಚಂಪಾನೇರ್ ಮತ್ತು ದಕ್ಷಿಣದಲ್ಲಿ ವಿಜಯನಗರಪಟ್ಟಣವು ಗಮನಾರ್ಹವಾದವುಗಳಾಗಿವೆ. ವಿಜಯನಗರಪಟ್ಟಣವು ವಿಜಯನಗರ ಸಾಮ್ರಾಜ್ಯದ ರಾಜಧಾನಿ ಪಟ್ಟಣವಾಗಿ ಹಂಪಿಯಲ್ಲಿ ನಿರ್ಮಾಣವಾಯಿತು. ಹಂಪಿಯ ನೆಲದಲ್ಲಿ ನಡೆದ ಮೂರನೆಯ

ನಗರೀಕರಣವು ಹಲವಾರು ವಿದ್ವಾಂಸರ ಗಮನ ಸೆಳೆದಿದೆ. ವಿಜಯನಗರ ಸಾಮ್ರಾಜ್ಯದ ರಾಜಧಾನಿ ಪಟ್ಟಣವು ಪ್ರಾರಂಭದಲ್ಲಿ ತುಂಗಭದ್ರಾ ನದಿಯ ಎಡದಂಡೆಯಲ್ಲಿರುವ ಆನೆಗೊಂದಿಯಲ್ಲಿದ್ದು ನಂತರ ಬಲದಂಡೆಯಲ್ಲಿರುವ ಇಂದಿನ ಹಂಪಿಗೆ ವರ್ಗಾವಣೆಗೊಂಡಿತು. ವಿಜಯನಗರದ ರಾಜಧಾನಿ ನಿರ್ಮಾಣದ ಪೂರ್ವದಲ್ಲಿ ಹಂಪಿ–ಆನೆಗೊಂದಿ ಪ್ರದೇಶವು ನವಶಿಲಾಯುಗ ಕಾಲದಿಂದ ಮಾನವನ ವಸತಿ ನೆಲೆಯಾಗಿತ್ತೆಂಬುದು ಗಮನಾರ್ಹ. ಇದೇ ಪ್ರದೇಶವು ನವಶಿಲಾಯುಗ ಕಾಲದಿಂದ ಪ್ರಾರಂಭಿಸಿ ಆದಿಇತಿಹಾಸ ಕಾಲ ಮತ್ತು ಮಧ್ಯಯುಗೀನ ಕಾಲದವರೆಗೆ ಮೂರು ನಗರೀಕರಣ ಪ್ರಕ್ರಿಯೆಗೆ ಸಾಕ್ಷಿಯಾಗಿದೆ. ಈ ಪ್ರದೇಶದ ವಿವಿಧ ವಸತಿನೆಲೆಗಳು ಆ ನಂತರ ಕಾಲದಲ್ಲಿಯೂ ಮುಂದುವರಿದು ಇಂದಿನ ಕಾಲದವರೆಗೆ ಉಳಿದುಬಂದಿವೆ. ವಸತಿನೆಲೆಗಳ ಸುದೀರ್ಘ ಕಾಲದ ವಿವಿಧ ಅಧ್ಯಯನ ಹಂತಗಳು ಕುತೂಹಲಕಾರಿ ಸಂಗತಿಗಳನ್ನು ಒಳಗೊಂಡಿವೆ.

ಕರ್ನಾಟಕದ ವಡಗಾಂ–ಮಾಧವಪುರದಲ್ಲಿ ನಡೆಸಿದ ಉತ್ಖನನವು ಆದಿಇತಿಹಾಸ ಕಾಲಕ್ಕೆ ಸೇರಿದ ಪ್ರಾಕ್ತನ ಅವಶೇಷಗಳು ಮತ್ತು ರಸ್ತೆಯ ಭಾಗವು ಅಂದಿನ ಕಾಲದ ನಗರ ರಚನಾವಿನ್ಯಾಸ ಕುರಿತ ಮಾಹಿತಿಯನ್ನು ನೀಡಿದೆ. ಕಾವೇರಿ ನದಿಯ ಎಡದಂಡೆಯ ಮೇಲಿರುವ ತಲಕಾಡು ಕ್ರಿ.ಶ. ಏಳು–ಎಂಟನೇ ಶತಮಾನದ ಗಂಗರ ಕಾಲದ ವಸತಿನೆಲೆಯಾಗಿದ್ದು ಅಲ್ಲಿ ಜಲ ಸಂಗ್ರಾಹಕ ತೊಟ್ಟಿ, ನೀರಿನ ನಾಲೆ, ಸ್ನಾನದ ಕೊಳಗಳು, ನಾಣ್ಯಗಳು, ನಾಣ್ಯದ ಅಚ್ಚುಗಳು, ಮುದ್ರಿಕೆಗಳು ಮತ್ತು ಸುಡಾವೆ ಮಣ್ಣಿನ ವಸ್ತುಗಳು ಮತ್ತು ವ್ಯವಸ್ಥಿತ ನಗರೀಕರಣದ ಪುರಾವೆಗಳು ದೊರತಿವೆ.

ಹಂಪಿಯ ಮಹಾನವಮಿ ದಿಬ್ಬದ ಪಶ್ಚಿಮ ಭಾಗದಲ್ಲಿ ನಡೆಸಲಾದ ಉತ್ಖನನದಲ್ಲಿ ಸುಣ್ಣದಕಲ್ಲಿನ ಬೌದ್ಧ ಧರ್ಮದ ಕಥಾ ನಿರೂಪಕ ಶಿಲಾಫಲಕ ದೊರೆತಿದೆ. ಅದರಲ್ಲಿ ಶಾತವಾಹನರ ಕಾಲದ ಬ್ರಾಹ್ಮಿ ಲಿಪಿಯಲ್ಲಿರುವ ಪ್ರಾಕೃತ ಭಾಷೆಯ ಶಾಸನವಿದೆ. ಆ ನಂತರದಲ್ಲಿ ವಿವಿಧ ಅರಸುಮನೆತನಗಳ ಕುರುಹುಗಳು ಈ ಪ್ರದೇಶದಲ್ಲಿ ದೊರಕಿರುವುದರಿಂದ ಇದು ಪ್ರಮುಖ ವಸತಿನೆಲೆಯ ಕೇಂದ್ರವಾಗಿತ್ತೆಂದು ಗಣಿಸಬಹುದು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾದ ಬಳಿಕ ಅಲ್ಲಿ ವ್ಯಾಪಕ ಮತ್ತು ಬೃಹತ್ ನಗರ ನಿರ್ಮಾಣವಾಯಿತು ಎಂಬುದರಲ್ಲಿ ಸಂಶಯವಿಲ್ಲ.

ವಿಜಯನಗರದ ಅರಸರು ರಾಜಧಾನಿಗೆ ವಿಜಯನಗರಪಟ್ಟಣ ಎಂದು ಹೆಸರಿಸಿದರು. ರಾಜಧಾನಿಯಲ್ಲಿ ಅರಮನೆಗಳು, ಉನ್ನತ ವರ್ಗದವರ ಮನೆಗಳು ಹಾಗೂ ಸಾಮಾನ್ಯ ಜನರ ಮನೆಗಳು ನಿರ್ಮಾಣಗೊಂಡವು. ಪಟ್ಟಣಕ್ಕೆ ಹೊಂದಿಕೊಂಡು ಅನೇಕ ಉಪನಗರಗಳು

ಬೆಳೆಯಿತು. ಅವುಗಳೆಂದರೆ ವಿರೂಪಾಕ್ಷಪುರ, ಕೃಷ್ಣಾಪುರ, ಅಚ್ಯುತಾಪುರ, ವಿಠಲಾಪುರ, ಇತ್ಯಾದಿಗಳು. ಅಂದಿನ ಉಪನಗರಗಳು ವಾಣಿಜ್ಯ, ವ್ಯಾಪಾರ, ವಸ್ತುಗಳ ಉತ್ಪಾದನೆ ಹಾಗೂ ಆಮದು ರಫ್ತುಗಳ ಕಾರ್ಯಗಳನ್ನು ನಿರ್ವಹಿಸುತ್ತಿದ್ದವು. ಪಟ್ಟಣಗಳಿಗೆ ಉಪನಗರಗಳು ಅಗತ್ಯ ವಸ್ತುಗಳನ್ನು ಪೂರೈಸುತ್ತಿದ್ದವು.

ಅವುಗಳಲ್ಲಿ ಕಮಲಾಪುರ, ಮಲಪನಗುಡಿ ಅನಂತಶಯನಗುಡಿ, ಅನಂತಾಪುರ, ವೆಂಕಟಾಪುರ, ಆನೆಗೊಂದಿ, ನಿಂಬಾಪುರ ನಾಗಲಾಪುರ, ಈ ಪುರಗಳು ಉಪನಗರಗಳಿಗೆ ಹಾಗೂ ಪಟ್ಟಣಗಳಿಗೆ ಬೇಕಾಗುವ ವ್ಯವಸಾಯ, ನೀರಿನ ಸೌಕರ್ಯ, ವಾಣಿಜ್ಯ ಹೀಗೆ ಮುಂತಾದ ಸೌಲಭ್ಯಗಳನ್ನು ಒದಗಿಸುವ ಕಾರ್ಯವನ್ನು ಮಾಡುತ್ತಿದ್ದವು.

## ೧.೨ ಅಧ್ಯಯನದ ಉದ್ದೇಶ

ಮಾನವನು ಒಂದೆಡೆ ನೆಲೆನಿಂತು ತನ್ನ ಜೀವನವನ್ನು ರೂಪಿಸಿಕೊಂಡ ಇತಿಹಾಸವು ರೋಚಕವಾಗಿದೆ. ಭಾರತದಲ್ಲಿ ಮಾನವನು ನೆಲೆನಿಂತ ಅಂತಹ ಪ್ರದೇಶಗಳನ್ನು ಪುರಾತತ್ವಜ್ಞರು ಗುರುತಿಸಿ ಅದರ ಕುರಿತು ಆಳವಾದ ಸಂಶೋಧನೆಗಳನ್ನು ನಡೆಸಿದ್ದಾರೆ. ನವಶಿಲಾಯುಗ ಕಾಲಕ್ಕೆ ಸೇರಿದ ಅನೇಕ ನೆಲೆಗಳ ಉತ್ಖನನ, ಸರ್ವೇಕ್ಷಣ ಮತ್ತು ಅಧ್ಯಯನಗಳಿಂದ ಅವನ ವಸತಿ ಕ್ರಮದ ಬಗೆಗೆ ಅನೇಕಾನೇಕ ವಿಚಾರಗಳು ಬೆಳಕಿಗೆ ಬಂದಿವೆ. ಈ ರೀತಿ ನೆಲನಿಂತ ಬಳಿಕ ತನ್ನ ವಸತಿನೆಲೆಯ ವಿಕಾಸಕ್ಕೆ ಸಹ ಕಾರಣೀಭೂತನಾದನು ಹಾಗು ಅದನ್ನು ಅಭಿವೃದ್ಧಿಪಡಿಸುತ್ತಾ ದೊಡ್ಡ ನಗರ ಅಥವಾ ಪಟ್ಟಣಗಳಾಗಿ ರೂಪಿಸುವಲ್ಲಿ ಯಶಸ್ವಿಯಾದನು. ಇದರ ಪರಿಣಾಮವಾಗಿ ಮೂರು ನಗರೀಕರಣ ಪ್ರಕ್ರಿಯೆಗಳು ವಿವಿಧ ಕಾಲಘಟ್ಟಗಳಲ್ಲಿ ಮತ್ತು ಅಂತರಗಳಲ್ಲಿ ಜರುಗಿವೆ. ಒಂದೇ ಪ್ರದೇಶದಲ್ಲಿ ಅಂತಹ ಪ್ರಕ್ರಿಯೆಗಳು ನಡೆದಿರುವುದು ಅತ್ಯಂತ ವಿರಳ.

ಹಂಪಿ ಪರಿಸರದಲ್ಲಿ ಮೂರು ನಗರೀಕರಣ ಪ್ರಕ್ರಿಯೆಗಳು ನಡೆದಿರುವುದು ಗಮನಾರ್ಹ. ಮೂರು ನಗರೀಕರಣಗಳು ನವಶಿಲಾಯುಗ, ಆದಿಇತಿಹಾಸ ಮತ್ತು ಮಧ್ಯಯುಗೀನ ಕಾಲಘಟ್ಟಗಳಲ್ಲಿ ನಡೆದಿದ್ದು ಈ ಪರಿಸರವು ಅಗತ್ಯ ಅನುಕೂಲತೆಗಳನ್ನು ಒದಗಿಸಿವೆ. ಈ ಪರಿಸರದಲ್ಲಿ ಮೂರು ಕಾಲಘಟ್ಟಗಳಿಗೆ ಸೇರಿದ ವಿವಿಧ ನೆಲೆಗಳು ಪತ್ತೆಯಾಗಿದೆ ಹಾಗೂ ಕೆಲವೊಂದು ನೆಲೆಗಳಲ್ಲಿ ಉತ್ಖನನಗಳು ಸಹ ನಡೆದಿದೆ. ಆದ್ದರಿಂದ ಪ್ರಾಚೀನ ಮಾನವನ ವಸತಿ ಮತ್ತು ವಸತಿನೆಲೆಗಳ ಉಗಮ, ವಿಕಾಸ ಮತ್ತು ಬೆಳವಣಿಗೆಗಳ ಹಂತಗಳನ್ನು ಗುರುತಿಸಿ ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಇದರೊಂದಿಗೆ ಈ ಪ್ರದೇಶವು

ಮಾನವನು ನೆಲೆ ನಿಲ್ಲಲು ಆಕರ್ಷಿಸಿದ ಮತ್ತು ಭೌಗೋಳಿಕ ಅಂಶಗಳು ಹೇಗೆ ಪರಸ್ಪರ ಪೂರಕವಾಗಿದ್ದವು ಎಂಬುದನ್ನು ಅಧ್ಯಯನಕ್ಕೆ ಒಳಪಡಿಸುವುದು ಇನ್ನೊಂದು ಉದ್ದೇಶವಾಗಿದೆ. ತುಂಗಭದ್ರಾ ನದಿಯ ಎಡ ಮತ್ತು ಬಲದಂಡೆಗಳಲ್ಲಿ ಉತ್ಖನನವಾಗಿದ್ದು ಅವುಗಳು ಮಹತ್ವದ ವಿಚಾರಗಳನ್ನು ಬೆಳಕಿಗೆ ತಂದಿವೆ. ಆ ಉತ್ಖನನಗಳಲ್ಲಿ ದೊರಕಿರುವ ಸಾಂಸ್ಕೃತಿಕ ಮತ್ತು ಪ್ರಾಚ್ಯಾವಶೇಷಗಳನ್ನು ಆಧರಿಸಿ ಈ ಪ್ರದೇಶದ ವಸತಿನೆಲೆಯನ್ನು ವಿಶ್ಲೇಷಿಸುವುದು ಅಧ್ಯಯನದ ಮಗದೊಂದು ಉದ್ದೇಶ.

ಭಾರತದ ಕೆಲವೊಂದು ಸಾಂಸ್ಕೃತಿಕ ಕಾಲಘಟ್ಟಗಳಿಗೆ ಸಂಬಂಧಿಸಿದಂತೆ ವಸತಿನೆಲೆಗಳ ಕುರಿತ ಅಧ್ಯಯನಗಳು ನಡೆದಿವೆ. ಆದರೆ ದಕ್ಷಿಣ ಭಾರತದಲ್ಲಿ ಅದರಲ್ಲಿಯೂ ಕರ್ನಾಟಕದಲ್ಲಿ ವಸತಿನೆಲೆಗಳ ಕುರಿತ ಪೂರ್ಣ ಪ್ರಮಾಣದ ಅಧ್ಯಯನಗಳು ಬೆರಳೆಣಿಕೆಯಷ್ಟು ಮಾತ್ರವೇ ನಡೆದಿವೆ. ನಗರೀಕರಣ ಕುರಿತ ಅಧ್ಯಯನಗಳು ನಡೆದಿವೆಯಾದರೂ ಪುರಾತತ್ವೀಯ ದೃಷ್ಟಿಕೋನಗಳಿಂದ ಮತ್ತು ಪ್ರಾಕ್ತನ ಅವಶೇಷಗಳನ್ನು ಆಧರಿಸಿ ವಸತಿನೆಲೆಗಳ ಅಧ್ಯಯನಗಳು ನಡೆದಿಲ್ಲವಾದ್ದರಿಂದ ಪ್ರಸ್ತುತ ಪ್ರದೇಶದ ಅಧ್ಯಯನ ಕೈಗೊಳ್ಳಲಾಗುವುದು. ಈ ನಿಟ್ಟಿನಲ್ಲಿ ಇದು ಪ್ರಥಮ ಪ್ರಯತ್ನವಾಗಿದೆ.

ಅಧ್ಯಯನಕ್ಕೆ ಒಳಪಡಿಸಲಾಗುವ ಪ್ರದೇಶವು ಹಂಪಿ ಪರಿಸರವಾಗಿದೆ. ಹಂಪಿಯು ವಿಶ್ವಾಪಾರಂಪರಿಕ ಪಟ್ಟಿಯಲ್ಲಿ ಸೇರ್ಪಡೆಯಾದ ಬಳಿಕ ತನ್ನ ಮಹತ್ವವನ್ನು ಹೆಚ್ಚಿಸಿಕೊಂಡಿತು. ವಿಶ್ವಪಾರಂಪರಿಕ ಪಟ್ಟಿಯ ಹಂಪಿಯನ್ನು ಸೇರಿಸಲು ಪ್ರಮುಖ ಮಾನದಂಡವೆಂದರೆ ಅದು ವಿಜಯನಗರ ಅರಸರ ಕಾಲದ ಕೊಡುಗೆಗಳು ಮತ್ತು ಅವರ ಕಾಲದ ನಿರ್ಮಿತಿಗಳಾಗಿವೆ. ಈ ಕಾರಣದಿಂದಾಗಿಯೂ ಸಹ ಸಾಮಾನ್ಯ ಜನ ಮತ್ತು ವಿದ್ವಾಂಸರ ಗಮನವು ವಿಜಯನಗರ ಕಾಲದ ನಿರ್ಮಿತಿಗಳ ಮೇಲೆ ಕೇಂದ್ರಿಕೃತವಾಗಿರುತ್ತದೆ. ೧೯೮೦ರ ದಶಕದ ಪೂರ್ವದಲ್ಲಿ ವಿಜಯನಗರ ಕುರಿತ ಅಧ್ಯಯನಗಳು ಮಂದಗತಿಯಲ್ಲಿ ನಡೆಯುತ್ತಿದ್ದವು ಹಂಪಿಗೆ ಯುನೆಸ್ಕೋ ಮಾನ್ಯತೆ ದೊರೆತ ಬಳಿಕ ವಿಜಯನಗರ ಮತ್ತು ಹಂಪಿ ಎಂದರೆ ವಿಜಯನಗರ ಎನ್ನುವಷ್ಟರ ಮಟ್ಟಿಗೆ ಆಗಿದೆ. ವಿಜಯನರ ಕುರಿತಾದ ಅಧ್ಯಯನಗಳಿಗೆ ಹೆಚ್ಚಿದ ಒಲವಿನಿಂದ ವಿಜಯನಗರ ಪೂರ್ವ ಮತ್ತು ವಿಜಯನಗರೋತ್ತರ ಕಾಲಕ್ಕೆ ಸಂಬಂಧಿಸಿದ ಅಧ್ಯಯನಗಳು ಗೌಣವಾಗಿವೆ. ಮತ್ತೊಂದು ಅಂಶವೆಂದರೆ ಇಂದಿನ ದಿನಗಳಲ್ಲಿ ಹಂಪಿಯು ದೇವಾಲಯಗಳು ಮತ್ತು ಲೌಕಿಕ ಸ್ಮಾರಕಗಳಿಗೆ ಪ್ರಸಿದ್ಧಿಯೆಂದು ಗುರುತಿಸಿ ಅಧ್ಯಯನ ನಡೆಸಲಾಗುತ್ತಿದೆ. ಇದರ ಫಲವಾಗಿ ಹಂಪಿ ಪರಿಸರದ ವಿಜಯನಗರ ಕಾಲವನ್ನು ಪ್ರಧಾನವಾಗಿ ಆಯ್ದುಕೊಂಡು ಅನೇಕ ಅಧ್ಯಯನಗಳು ನಡೆದಿವೆ ಹಾಗೂ ನಡೆಯುತ್ತಲಿವೆ. ಉದಾಹರಣೆಗೆ ಹಂಪಿ ಬಜಾರುಗಳು, ಹಂಪಿ ಪರಿಸರದ

ಕೆರೆಗಳು, ರಾಮಚಂದ್ರ ಟೆಂಪಲ್ ಅಟ್ ವಿಜಯನಗರ, *Religious Tradition at Vijayanagara, Virupaksha Tample,* ಹಂಪಿ ಪರಿಸರದ ಶೈವ ಶಿಲ್ಪಗಳು, ಹಂಪಿ ಪರಿಸರದ ವೈಷ್ಣವ ಶಿಲ್ಪಗಳು, ಹಂಪಿ ಪರಿಸರದ ಲೌಕಿಕ ಶಿಲ್ಪಗಳು, ವಿಜಯನಗರ ಕಾಲದ ವಿನೋದಾವಳಿಗಳು, ವಿಜಯನಗರ ಕಾಲದ ವಸ್ತ್ರಾಭರಣಗಳು, ವಿಜಯನಗರ ಕಾಲರ ಸೈನಿಕ ವ್ಯವಸ್ಥೆ ಇತ್ಯಾದಿ.

ಹಂಪಿ ಪರಿಸರದ ವಿಜಯನಗರ ಕಾಲದ ನಗರಗಳು ಅಥವಾ ಪಟ್ಟಣಗಳ ಬೆಳವಣಿಗೆ ಕುರಿತು ಅಲ್ಪ ಪ್ರಮಾಣದಲ್ಲಿ ಲೇಖನಗಳಿವೆ. ಹೀಗಾಗಿ ನಿರ್ಲಕ್ಷಕ್ಕೆ ಒಳಗಾದ ಹಂಪಿ ಪರಿಸರದ ವಿವಿಧ ಕಾಲಘಟ್ಟದ ವಿವಿಧ ಬಗೆಯ ವಸತಿನೆಲೆಗಳನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡುವ ದೃಷ್ಟಿಯಿಂದ ಹಂಪಿ ಪರಿಸರದ ವಸತಿನೆಲೆಗಳು ಕುರಿತು ಅಧ್ಯಯನ ನಡೆಸುವುದು ಇನ್ನೊಂದು ಉದ್ದೇಶವಾಗಿದೆ. ಮಧ್ಯಯುಗೀನ ಕಾಲದ ಹಂಪಿ ಪರಿಸರದಲ್ಲಿ ಕಂಡುಬರುವ ವಸತಿನೆಲೆಗಳ ರಚನಾ ವಿನ್ಯಾಸವನ್ನು ಅರಿಯುವುದು ಅಧ್ಯಯನ ಉದ್ದೇಶಗಳಲ್ಲಿ ಒಂದು.

## ೧.೩ ಅಧ್ಯಯನದ ವ್ಯಾಪ್ತಿ

ಪ್ರತಿಯೊಂದು ಅಧ್ಯಯನಕ್ಕೆ ನಿರ್ದಿಷ್ಟ ಚೌಕಟ್ಟು ಮುಖ್ಯವಾಗಿದೆ. ಚೌಕಟ್ಟಿಲ್ಲದೆ ಅಧ್ಯಯನ ನಡೆಸಿದರೆ ಯವುದೇ ಅಧ್ಯಯನವನ್ನು ಪೂರ್ಣಗೊಳಿಸುವುದು ಕಷ್ಟ. ಹಂಪಿ ಪರಿಸರದ ವಸತಿನೆಲೆಗಳಿಗೆ ಸಂಬಂಧಪಟ್ಟ ಪ್ರಸ್ತುತ ಅಧ್ಯಯನಕ್ಕೆ ಭೌಗೋಳಿಕ ಪರಿಸರ, ಕಾಲ ಮತ್ತು ವಸ್ತುವಿನ ಹಿನ್ನೆಲೆಯಲ್ಲಿ ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದ ಶೀರ್ಷಿಕೆಯ ಪ್ರಕಾರ ಹಂಪಿ ಪರಿಸರಕ್ಕೆ ಸಂಬಂಧಪಟ್ಟಿರುವ ಅಧ್ಯಯನವಾಗಿದೆ. ಹಂಪಿಯನ್ನು ವಿಶ್ವಪರಂಪರೆ ತಾಣ ಎಂದು ಘೋಷಿಸಿದ ಹಂಪಿ ಪರಿಸರದ ೨೩೬ ಚದುರ ಕಿಲೋಮಿಟರ್ ಪ್ರದೇಶವು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ. ಅಂದರೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ೧೪ ಗ್ರಾಮಗಳು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ೧೫ ಗ್ರಾಮಗಳು ಸೇರಿ ಒಟ್ಟು ೨೯ ಗ್ರಾಮಗಳು ಅಧ್ಯಯನ ವ್ಯಾಪ್ತಿಗೆ ಸೇರಿವೆ.

ಪ್ರಸ್ತುತ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ಹಂಪಿ, ಕಡ್ಡಿರಾಂಪುರ, ಕಮಲಾಪುರ, ಮಲಪನಗುಡಿ, ಕೊಂಡನಾಯಕನಹಳ್ಳಿ, ಕಾಳಘಟ್ಟ, ಸಿಂಗನಾಯನ ಹಳ್ಳಿ, ನಾಗೇನ ಹಳ್ಳಿ, ಗುಡಿಓಬಳಾಪುರ, ಡಣಾಪುರ, ಕೃಷ್ಣಾಪುರ, ನಿಂಬಾಪುರ, ವೆಂಕಟಾಪುರ, ಬುಕ್ಕಸಾಗರ ಮತ್ತು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಲ್ಲಿರುವ ಆನೆಗೊಂದಿ, ಅಂಜನಹಳ್ಳಿ,

ಬಸವನದುರ್ಗ, ಚಿಕ್ಕರಾಂಪುರ, ಸಿಂಗನಗೊಂಡ, ಸಾಣಾಪುರ, ತಿರುಮಲಾಪುರ, ಹನುಮನಹಳ್ಳಿ, ಕೃಷ್ಣಾಪುರ, ಲಕ್ಷ್ಮಿಪುರ, ಮಲ್ಲಾಪುರ, ರಾಂಪುರ, ರಾಮದುರ್ಗ, ರಂಗಾಪುರ ಮತ್ತು ವಿರುಪಾಪುರಗಡ್ಡೆ ಗ್ರಾಮಗಳು ಪ್ರಸ್ತುತ ಅಧ್ಯಯದ ವ್ಯಾಪ್ತಿಯಲ್ಲಿವೆ. ಇವುಗಳ ಜೊತೆಗೆ ಹಂಪಿಯ ಹೊರವಲಯದಲ್ಲಿರುವ ಅನಂತಶಯನಗುಡಿ, ಹೊಸಪೇಟೆ, ಜಂಬುನಾಥಬೆಟ್ಟ ಮತ್ತು ತಿಮ್ಮಲಾಪುರ ಗ್ರಾಮಗಳಲ್ಲಿನ ಅವಶೇಷಗಳನ್ನು ಸಹ ಪ್ರಸ್ತುತ ಅಧ್ಯಯನಕ್ಕೆ ಮಿತಿಯನ್ನು ಹಾಕಿಕೊಳ್ಳಲಾಗಿದೆ. ಆದಿಇತಿಹಾಸ ಕಾಲದಿಂದ ವಿಜಯನಗರ ಕಾಲದವರೆಗೆ ಹಂಪಿ ಪರಿಸರದ ಉತ್ಖನನದಲ್ಲಿ ದೊರೆತ ಅವಶೇಷಗಳು ಹಾಗೂ ನೆಲೆಗಳ ಅವಶೇಷಗಳು ಜೊತೆಗೆ ವಿಷಯಕ್ಕೆ ಅನುಗುಣವಾಗಿ ಇಂದಿನ ವಸತಿ ನೆಲೆಯನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

## ೧.೪ ಈವರೆಗಿನ ಅಧ್ಯಯನದ ಸಮೀಕ್ಷೆ

ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳು ಕಡಿಮೆಯಿದ್ದು ಅದರಿಂದ ದೊರಕುವ ಮಾಹಿತಿಯು ಸಹ ಅಲ್ಪ ಪ್ರಮಾಣದಲ್ಲಿದೆ. ಹಂಪಿ ಪರಿಸರದಲ್ಲಿ ನಡೆಸಲಾಗಿರುವ ಉತ್ಖನನಗಳು ಮತು ಸರ್ವೇಕ್ಷಣ ಕಾರ್ಯಗಳನ್ನು ವರದಿಯ ರೂಪದಲ್ಲಿ ಪುರಾತತ್ವ ಇಲಾಖೆಯು ಪ್ರಕಟಿಸಿದೆ. ಹಲವು ಬಿಡಿ ಲೇಖನಗಳು, ವಿಶ್ವವಿದ್ಯಾಲಯಗಳಿಗೆ ಸಲ್ಲಿಸಿರುವ ಎಂ.ಫಿಲ್ ಮತ್ತು ಪಿಎಚ್.ಡಿ. ಸಂಶೋಧನಾ ಪ್ರಬಂಧಗಳು ಅಧ್ಯಯನಕ್ಕೆ ಆಯ್ದುಕೊಂಡಿರುವ ವಿಷಯಕ್ಕೆ ಮಾಹಿತಿಗಳನ್ನು ಒದಗಿಸುತ್ತವೆ. ಅಂತಹ ಕೆಲವು ಮುಖ್ಯ ಆಕರಗಳನ್ನು ಕುರಿತು ಈ ಕೆಳಗೆ ಚರ್ಚಿಸಲಾಗಿದೆ. *Indian Archaeology – A Review, Vijayangara Progress of Research, Report on the Excavation at Hampi-1991-2010,. Annual Report on Indian Archaeology*, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ, ಎಫಿಗ್ರಾಫಿಯ ಕರ್ನಾಟಿಕ, ಎಫಿಗ್ರಾಫಿಯಾ ಇಂಡಿಕಾ ಸಂಪುಟಗಳು ಪ್ರಾಥಮಿಕ ಆಕರಗಳನ್ನು ಒಳಗೊಂಡಿದ್ದು ಅವುಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಆನುಷಂಗಿಕ ಆಕರಗಳು ಸಹ ಅಧ್ಯಯನಕ್ಕೆ ಪೂರಕ ಮಾಹಿಯನ್ನು ಒದಗಿಸುವಲ್ಲಿ ನೆರವಾಗಿದೆ.

Sundar A ಅವರ '*Hampi the Ancient Kishkinda-Vanara's Capital*, ಪುಸ್ತಕದಲ್ಲಿ ಹಂಪಿ–ಆನೆಗೊಂದಿ ಪ್ರದೇಶದ ಪ್ರಾಗಿತಿಹಾಸಿಕ ಕಾಲವನ್ನು ಕುರಿತು ಚರ್ಚಿಸಿದ್ದಾರೆ. ಮಹಾಕಾವ್ಯ ರಾಮಾಯಣದಲ್ಲಿ ಉಲ್ಲೇಖವಿರುವ ಸ್ಥಳಗಳೊಂದಿಗೆ ಇಲ್ಲಿನ ಕೆಲವು ಪ್ರದೇಶಗಳನ್ನು ಗುರುತಿಸಿದ್ದಾರೆ. ಅದರನ್ವಯ ಈ ಪ್ರದೇಶವು ರಾಮಾಯಣದ ಕಿಷ್ಕಿಂದ ಆಗಿತ್ತೆಂದು ಅವರು

ಅಭಿಪ್ರಾಯಪಡುತ್ತಾರೆ. ಆನೆಗೊಂದಿ ಪರಿಸರದಲ್ಲಿನ ಪ್ರಾಗಿತಿಹಾಸ ಕಾಲದ ಗೀರುಚಿತ್ರಗಳು ಮತ್ತು ಆ ಕಾಲದ ನೆಲೆಗಳನ್ನು ಅಲ್ಲಿ ದೊರೆಯುವ ಅವಶೇಷಗಳ ಆಧಾರಗಳಿಂದ ಗುರುತಿಸುತ್ತಾರೆ. ಈ ಪ್ರದೇಶದಲ್ಲಿ ನವಶಿಲಾಯುಗ ಕಾಲದಿಂದ ಇಂದಿನವರೆಗೂ ಜನವಸತಿ ಮುಂದುವರೆದುಕೊಂಡು ಬಂದಿರುವುದನ್ನು ವಿವರಿಸಿದ್ದಾರೆ.[೧]

ಶ್ರೀನಿವಾಸ್. ಎಲ್, ಅವರ "ಹಂಪಿ ಪರಿಸರದ ಆದಿಮಾನವನ ನೆಲೆಗಳು" ಕೃತಿಯಲ್ಲಿ ಹಂಪಿ ಪರಿಸರದ ಆದಿಮಾನವನ ನೆಲೆಗಳ ಮಾಹಿತಿಯನ್ನು ಸಂಗ್ರಹಿಸಿ ಈ ಕೃತಿಯಲ್ಲಿ ನೀಡಿರುತ್ತಾರೆ. ಅಂದಿನ ಜನರ ಜೀವನ ಶೈಲಿ ಮತ್ತು ಸಂಸ್ಕೃತಿಯನ್ನು ವಿವರಿಸಿದ್ದಾರೆ ಹಾಗೂ ಹಂಪಿ ಪರಿಸರದಲ್ಲಿರುವ ಬಂಡೆಗಳ ಮೇಲೆ ರಚಿಸಿದ ಗೀರುಚಿತ್ರಗಳು, ನೆಲೆಯಲ್ಲಿ ದೊರೆತ ಕಲ್ಲಿನ ಆಯುಧಗಳು ಮತ್ತು ಮಡಿಕೆ ಚೂರುಗಳಿಂದ ಅಂದಿನ ಕಾಲದ ಸಂಸ್ಕೃತಿಯನ್ನು ಕುರಿತು ವಿವರಿಸಿದ್ದಾರೆ.[೨]

Venkata Ramanayya N., ಅವರ *Vijayanagara Origin of the city and the Empire* ಪುಸ್ತಕದಲ್ಲಿ ವಿಜಯನಗರದ ಆರಂಭಿಕ ಅರಸರು ಹೊಯ್ಸಳರ ಬಳಿ ಅಧೀನರಾಗಿದ್ದು ಸಂಗಮ ವಂಶದವರು ಸ್ವತಂತ್ರವಾಗಿ ರಾಜ್ಯವನ್ನು ಸ್ಥಾಪಿಸಿದರೆಂದು ತಿಳಿಸುವುದರೊಂದಿಗೆ ಅವರ ಕಾಲದ ಆಡಳಿತ ವಿಷಯಗಳನ್ನು ಮಾತ್ರ ಉಲ್ಲೇಖಿಸುತ್ತದೆ. ಈ ಪುಸ್ತಕದಲ್ಲಿ ಹಂಪಿ ಪರಿಸರದ ಅಥವಾ ರಾಜ್ಯದ ನೆಲೆಗಳ ಮತ್ತು ಕಟ್ಟಡಗಳ ಉಲ್ಲೇಖಗಳು ಇಲ್ಲದಿದ್ದರೂ ಹೊಯ್ಸಳರ ಮೂರನೇ ವೀರಬಲ್ಲಾಳನು 'ಹೊಸಪಟ್ಟಣ ಅಥವಾ ವಿರೂಪಾಕ್ಷಪಟ್ಟಣವನ್ನು ಹಂಪಿಯಲ್ಲಿ ನಿರ್ಮಿಸಿದನೆಂದು ತಿಳಿಸುತ್ತದೆ.[೩]

Mahalingam, T.V. ಅವರ "*Administration and Social Life Under Vijayanagara*" ಪುಸ್ತಕದಲ್ಲಿ ಸಾಮಾಜಿಕ ಜೀವನವನ್ನು ಶಾಸನಗಳ ಉಲ್ಲೇಖಗಳೊಂದಿಗೆ ವಿವರಿಸಿದ್ದಾರೆ. ಆದರೆ ಹಂಪಿಯ ಕುರಿತ ಉಲ್ಲೇಖವು ಗೌಣವಾಗಿದೆ.[೪] ವಿಜಯನಗರಪಟ್ಟಣವು ಏಳು ಸುತ್ತಿನ ಕೋಟೆಗಳಿಂದ ಸುತ್ತವರೆದಿತ್ತು. ಕೋಟೆಯ ಒಳ ಪ್ರದೇಶದಲ್ಲಿ ರಾಜ ಮತ್ತು ಅವರ ಪರಿವಾರದವರ ಮನೆಗಳು, ಸೈನಿಕರ ಮನೆಗಳು ಹಾಗೂ ಸಾಮಾನ್ಯ ಜನರ ಮನೆಗಳು, ಮುಂತಾದ ಕಟ್ಟಡಗಳು ಈ ಕೋಟೆ ಒಳಭಾಗದಲ್ಲಿ ಇದ್ದ ಬಗೆಗೆ ಮಾಹಿತಿಯನ್ನು ನೀಡಿದ್ದಾರೆ. ರಾಜನ ಅರಮನೆಗಳನ್ನು ಭವ್ಯವಾಗಿ ರಚಿಸಿ ಶೃಂಗರಿಸಲಾಗಿತ್ತೆಂದು ಅವರು ಪುಸ್ತಕದಲ್ಲಿ ವಿವರಿಸಿದ್ದಾರೆ.

Kathleen D. Morrison ಅವರು ರಚಿಸಿರುವ *Fields of Victory, Vijayanagara and the Course of Intensification* ಕೃತಿಯು ಹಂಪಿ ಪರಿಸರದ ಸುತ್ತಲೂ ಪ್ರಾಗಿತಿಹಾಸಿಕ ಕಾಲದಿಂದ ವಿಜಯನಗರ ಕಾಲದವರೆಗೆ ಆಡಳಿತ, ಸಾಮಾಜಿಕ, ಇತ್ಯಾದಿ ವಿಷಯಗಳನ್ನು ಕ್ರೋಢೀಕರಿಸಿ ವಿವರಿಸಿದ್ದಾರೆ.[೫] ಪ್ರಾಗಿತಿಹಾಸ ಕಾಲದಲ್ಲಿ ದೊರೆತ ಕಲ್ಲಿನ ಉಪಕರಣ, ಬೂದಿದಿಬ್ಬ, ನಂತರದ ಕಾಲಘಟ್ಟದಲ್ಲಿ ಆಳ್ವಿಕೆಗೆ ಬಂದ ರಾಜಮನೆತನಗಳು ನಿರ್ಮಾಣ ಮಾಡಿದ ಕಾಲುವೆಗಳು, ದೇವಾಲಯಗಳು, ಅನೇಕ ಕಟ್ಟಡಗಳು ಹೀಗೆ ಮುಂತಾದ ಉಪಯುಕ್ತ ಮಾಹಿತಿಗಳು ಇವರ ಪುಸ್ತಕದಲ್ಲಿದೆ.

ಸೋಮಶೇಖರ ಎಸ್.ವೈ. ಅವರ 'ಹಂಪಿ ಬಜಾರಗಳು' ಕೃತಿಯು ವಿಜಯನಗರಪಟ್ಟಣ ಹಂಪಿ ಪ್ರದೇಶದಲ್ಲದ್ದ ಬಜಾರುಗಳನ್ನು ಗುರುತಿಸುವುದರೊಂದಿಗೆ ಅವುಗಳನ್ನು ವಿಂಗಡಿಸಿ ಉದ್ದ, ಅಗಲ ಅಳತೆಯ ಮೂಲಕ ವಿವರಣೆಯನ್ನು ನೀಡಿದ್ದಾರೆ.[೬] ಇದು ನನ್ನ ಅಧ್ಯಯನಕ್ಕೆ ಪೂರಕವಾಗಿದೆ. ಪಟ್ಟಣದ ಜನರಿಗೆ ಬೇಕಾಗುವ ಎಲ್ಲಾ ವಸ್ತುಗಳು ಈ ಬಜಾರುಗಳಲ್ಲಿ ಸಿಗುತ್ತಿದ್ದವು. ಹಾಗೂ ವ್ಯಾಪಾರ ವಾಹಿವಾಟಿನ ಕುರಿತಾದ ಮಾಹಿತಿಯು ನಗರೀಕರಣ ವ್ಯವಸ್ಥೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ ಎಂದು ಲೇಖಕರು ವಿವರಿಸಿದ್ದಾರೆ.

ವಾಸುದೇವನ್ ಸಿ ಎಸ್, ಅವರ 'ಹಂಪಿ ಪರಿಸರದ ಕೆರೆಗಳು' ಎನ್ನುವ ಕೃತಿಯು ಹಂಪಿ ಪರಿಸರದ ವಿಜಯನಗರ ಕಾಲದ ಕೆರೆಗಳ ಕುರಿತಾಗಿದ್ದಾಗಿದೆ.[೭] ಈ ಕೆರೆಗಳನ್ನು ರಾಜರು, ಅಧಿಕಾರಿಗಳು, ಜನ ಸಾಮಾನ್ಯರು ಕೂಡ ನಿರ್ಮಾಣ ಮಾಡಿದ್ದಾರೆಂಬುದನ್ನು. ಶಾಸನಗಳ ಉಲ್ಲೇಖದ ಮೂಲಕ ಹೇಳಿದ್ದಾರೆ. ವಿಜಯನಗರ ಕಾಲದ ನೀರಾವರಿ ಪದ್ಧತಿ, ನಿರ್ಮಾಣದಲ್ಲಿ ಬಳಸಿದ ಸಾಮಗ್ರಿಗಳು, ತಂತ್ರಗಾರಿಕೆ, ಕ್ರಮ, ತೂಬು ನಿರ್ಮಾಣದ ವ್ಯವಸ್ಥೆಯನ್ನು ವಿವರಿಸಿದ್ದಾರೆ.

ಆನೆಗೊಂದಿ-ಕಡೆಬಾಗಿಲು ಪ್ರದೇಶದ ಉತ್ಖನನದಲ್ಲಿ ದೊರೆತ ಲೋಹದ ವಸ್ತುಗಳು ಬ್ರಹ್ಮಗಿರಿ ಮತ್ತು ಮಸ್ಕಿಯಲ್ಲಿ ದೊರೆತ ವಸ್ತುಗಳು ಒಂದೇ ಆಗಿರುವುದರಿಂದ ಹಾಗೂ ಇಲ್ಲಿನ ಜನರು ಬೇರೆ ಸ್ಥಳಗಳೊಂದಿಗೆ ಹೊಂದಿದ ಆರ್ಥಿಕ ಸಂಬಂಧವನ್ನು ಆಧರಿಸಿ ಅಂದಿನ ಕಾಲದ ವಸ್ತುಗಳ ವಿನಿಮಯ ಮತ್ತು ಉತ್ಪಾದನೆಯ ಕುರಿತು Mathew D Gallon, ಅವರು *"The Political Economy to Iron in Late Prehistoric South India,"* ಎಂಬ ಲೇಖನದಲ್ಲಿ ವಿವರಿಸಿದ್ದಾರೆ.[೮]

ಕಡೇಬಾಗಿಲು ಪ್ರದೇಶದಲ್ಲಿ ೨೦೦೩ ಮತ್ತು ೨೦೦೫ನೇ ಸಾಲಿನಲ್ಲಿ ನಡೆದ ಉತ್ಖನನದಲ್ಲಿ ದೊರೆತ ಪ್ರಾಣಿಯ ಮೂಳೆಯ ಅವಶೇಷ ಮತ್ತು ಮಣ್ಣಿನಲ್ಲಿ ಹಲವಾರು ಪ್ರಾಣಿಗಳ ಸಗಣಿಯ ಅವಶೇಷದಿಂದ ಅದರ ಕಾಲಮಾನ ಗುರುತಿಸುವುದರೊಂದಿಗೆ ಯಾವ ವರ್ಗದ ಪ್ರಾಣಿಗಳು ಕಂಡುಬರುತ್ತವೆ ಎಂಬತ್ಯಾದಿ ವಿಷಯಗಳು ಮತ್ತು ಅಂದಿನ ಜನರ ಸಾಮಾಜಿಕ ಜೀವನವನ್ನು Radhika, La, Bauer, ಅವರು *"Social Distinctions and Animals Use in the South Indian Iron Age: Archaealogical Evidence from Kadebekale, Northern Karnataka,* ಎಂಬ ಲೇಖನದಲ್ಲಿ ವಿವರಿಸಿದ್ದಾರೆ.[೯]

ಕಡೇಬಾಗಿಲು ಪ್ರದೇಶದ ಉತ್ಖನನದಲ್ಲಿ ದೊರೆಕಿರುವ ಅವಶೇಷಗಳು ಒಂದನೇ ಶತಮಾನಕ್ಕೆ ಸೇರುತ್ತಿದ್ದು ಅವುಗಳು ತುಂಗಭದ್ರಾ ನದಿಯ ದಕ್ಷಿಣಕ್ಕೆ ಸುಮಾರು ೬೦ ಹೆಕ್ಟೇರ್ ಪ್ರದೇಶದವರೆಗೆ ವ್ಯಾಪಿಸಿರುವುದನ್ನು ವಿವರಿಸಲಾಗಿದೆ. ಕ್ರಿ.ಪೂ. ಒಂದನೇ ಶತಮಾನದ ಅವಶೇಷಗಳಲ್ಲಿ ಮಡಿಕೆ ಚೂರುಗಳು, ಮಣಿಗಳು, ಜನವಸತಿಯ ಪ್ರಕ್ರಿಯೆಗಳು ಅಡಗಿವೆ. ಎಂಬುದನ್ನು Carl M. Sinapoli, Kathleen D Morrisin, Gopal R. ಅವರು *"Late Prehistoric and Early Historic South India : Recent Research Along the Tungabhadra River, Karnataka"*, ಎಂಬ ಲೇಖನದಲ್ಲಿ ವಿವರಿಸಿದ್ದಾರೆ.[೧೦]

ಕಡೇಬಾಗಿಲು ಉತ್ಖನನದಲ್ಲಿ ದೊರೆತ ಅವಶೇಷಗಳ ಆಧಾರದಿಂದ ಆದಿಇತಿಹಾಸ ಕಾಲದ ನೆಲೆಯು ಎಷ್ಟು ಪ್ರದೇಶದವರೆಗೆ ವ್ಯಾಪಿಸಿತ್ತು ಎಂಬುದನ್ನು[೧೧] Namita Sugandhi, ಅವರ *"Networks of Intention in a Peripheral Landscape."* ಲೇಖನವು ದಾಖಲಿಸಿದೆ. ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದೆಗೋಳಂನಲ್ಲಿರುವ ಅಶೋಕನ ಶಾಸನಗಳು ಹಾಗೂ ಅದರ ಸುತ್ತಲೂ ನವಶಿಲಾಯುಗ ಮತ್ತು ಬೃಹತ್ ಶಿಲಾಯುಗದ ನೆಲೆಗಳು ಕಂಡುಬಂದಿವೆ. ಈ ಹಿನ್ನಲೆಯಲ್ಲಿ ತೆಕ್ಕಲಕೋಟೆ ಪ್ರದೇಶದಲ್ಲಿ ನವಶಿಲಾಯುಗ ಮತ್ತು ಕೆಂಪು, ಕಪ್ಪು ಬಣ್ಣದ ಮಡಿಕೆ ಚೂರು, ರಸೆಟ್‌ಕೋಟೆಡ್ ಬಣ್ಣದ ಮಡಿಕೆಗಳು, ಸೂಕ್ಷ್ಮ ಶಿಲಾ ಆಯುಧಗಳು ಕುರಿತು ವಿವರಿಸಿದ್ದಾರೆ. ಈ ಅವಶೇಷಗಳು ಕಡೇಬಾಗಿಲು ಪ್ರದೇಶದಲ್ಲಿ ದೊರೆತ ವಸ್ತುಗಳಿಂದ ಆದಿಇತಿಹಾಸ ಕಾಲದಲ್ಲಿ ಅವರು ವ್ಯಾಪಾರ ಸಂಪರ್ಕ ಹೊಂದಿದ್ದರು ಎಂಬ ವಿಷಯವನ್ನು ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ.

ವಾಸುದೇವನ್ ಸಿ.ಎಸ್., ಅವರ 'ಕಡೆಬಾಗಿಲು-ಪ್ರಾಗಿತಿಹಾಸ ಕಾಲದ ನೆಲೆ' ಎಂಬ ಲೇಖನದಲ್ಲಿ ಆನೆಗೊಂದಿ-ಕಡೇಬಾಗಿಲು ಪ್ರದೇಶದಲ್ಲಿ ನವಶಿಲಾಯುಗದಿಂದ ವಿಜಯನಗರ

ಕಾಲದವರೆಗಿನ[೧೨] ಬೂದಿದಿಬ್ಬ, ಸಾಕು ಪ್ರಾಣಿಗಳ ಪಳಯುಳಿಕೆಗಳು, ಆದಿಇತಿಹಾಸ ಕಾಲದ ಕಪ್ಪು-ಕೆಂಪು ಬಣ್ಣದ ಮಡಿಕೆ-ಕುಡಿಕೆ ಮತ್ತು ಇತಿಹಾಸ ಕಾಲದ ಕಟ್ಟಡಗಳ ಅವಶೇಷಗಳ ಕುರುಹುಗಳು ಇದ್ದ ಬಗೆಗೆ ಚರ್ಚಿಸಿದ್ದಾರೆ.

ಇದೇ ಲೇಖಕರ ಇನ್ನೊಂದು ಲೇಖನ 'ವಿಜಯನಗರಪಟ್ಟಣ ಮತ್ತು ಅದರ ಉಪನಗರಗಳು', ಇದರಲ್ಲಿ ವಿಜಯನಗರ ಕಾಲದ ಪಟ್ಟಣ[೧೩] ಮತ್ತು ಪುರಗಳ ಬೆಳವಣಿಗೆ ವಿನ್ಯಾಸ ಮತ್ತು ಗಾತ್ರ ಕುರಿತು ವಿವರಿಸಿ ಅವುಗಳಲ್ಲಿ ಇದ್ದಿರಬಹುದಾದ ಜನಸಂಖ್ಯೆಯ ಪ್ರಮಾಣವನ್ನು ಕುರಿತು ಚರ್ಚಿಸಿದ್ದಾರೆ. ಅವರ ಮತ್ತೊಂದು ಲೇಖನ 'ವಿಜಯನಗರಪಟ್ಟಣದ ಪ್ರಮುಖರ ಮನೆಗಳು' ಈ ಲೇಖನದಲ್ಲಿ ವಿಜಯನಗರ ಕಾಲದ ಪ್ರಮುಖರ ಮನೆಗಳ[೧೪] ವಿನ್ಯಾಸ ಹಾಗೂ ಅಗತ್ಯ ನೀರಿನ ಸೌಕರ್ಯ, ಗಾಳಿ, ಬೆಳಕಿನ ವ್ಯವಸ್ಥೆಯ ಕುರಿತು ವಿವರಿಸಿದ್ದಾರೆ. ಪ್ರಮುಖರ ವಸತಿ ಮನೆಗಳ ವಿನ್ಯಾಸ ತಿಳಿಯಲು ಈ ಲೇಖನವು ಮುಖ್ಯವಾಗಿದೆ.

ಚಂದ್ರಶೇಖರಶಾಸ್ತ್ರಿ ಎಚ್.ಎಂ, ಅವರ 'ವಿಜಯನಗರದಲ್ಲಿ ಪುರಗಳು', ಎನ್ನುವ ಲೇಖನದಲ್ಲಿ ವಿಜಯನಗರ ಕಾಲದ ಹಂಪಿ ಪ್ರದೇಶದಲ್ಲಿನ[೧೫] ಪುರಗಳು ಕೋಟೆಗೋಡೆಯಿಂದ ಸುತ್ತುವರೆದಿದ್ದು ವ್ಯವಸ್ಥಿತವಾದ ಕಾಲುವೆ, ತೋಟ, ಗಿಡ, ಮರಗಳಿಂದ ಕೂಡಿದ್ದವೆಂದು ವಿವರಿಸುತ್ತಾ ದೇವಾಲಯಗಳ ಸುತ್ತಲೂ ಮಾರುಕಟ್ಟೆಯನ್ನು ಹಾಗೂ ವಾಣಿಜ್ಯ ಚಟುವಟಿಕೆಗಳು ಇದ್ದ ಮಾಹಿತಿ ನೀಡಿರುವರು.

ನಾಗರಾಜ್ ಬಿ.ಎಸ್., ಅವರ "ವಿಜಯನಗರ ಸಾಮ್ರಾಜ್ಯದಲ್ಲಿ ನಗರ ಬೆಳವಣಿಗೆ'. ಲೇಖನದಲ್ಲಿ ವಿಜಯನಗರ ಕಾಲದ ನಗರ ಬೆಳವಣಿಗೆಯನ್ನು ಮಾತ್ರವಲ್ಲದೇ ಕರ್ನಾಟಕದಲ್ಲಿ ದೊರೆತ ಶಾಸನಗಳ ಮಾಹಿತಿಯನ್ನು ಆಧರಿಸಿ[೧೬] ವಿಜಯನಗರ ಸಾಮ್ರಾಜ್ಯದಲ್ಲಿನ ವಿವಿಧ ನಗರಗಳ ಬೆಳವಣಿಗೆಯನ್ನು ಗುರುತಿಸಿದ್ದಾರೆ. ಅದರಂತೆ ಅನೇಕ ಅಗ್ರಹಾರಗಳು ನಿರ್ಮಾಣವಾದವು ಹಾಗೂ ಅವುಗಳಲ್ಲಿನ ಕೆಲವನ್ನು ಪುರಗಳನ್ನಾಗಿ ಪರಿವರ್ತಿಸಲಾಗಿತ್ತು ಎಂದು ಗಮನ ಸೆಳೆಯುತ್ತಾರೆ.

ನರಸಿಂಹಮೂರ್ತಿ ಎ.ವಿ., ಅವರ "ಪ್ರಾಚೀನ ಕರ್ನಾಟಕದ ನಗರಗಳ ವಿನ್ಯಾಸ". ಎಂಬ ಲೇಖನದಲ್ಲಿ ಶಾಸನಗಳ ಮೂಲಕ ಪ್ರಾಚೀನ ಕಾಲದ ನಗರಗಳ ಹಾಗೂ ಪಟ್ಟಣಗಳ ವಿವಿಧ ಮುಖಗಳನ್ನು ಚರ್ಚಿಸುತ್ತಾ ಆರ್ಥಿಕ, ಸಾಮಾಜಿಕ ಮತ್ತು ವಿದ್ಯಾಕೇಂದ್ರಗಳಾಗಿ ನಗರ, ಪಟ್ಟಣಗಳು ಹೇಗೆ ಬೆಳೆಯಿತು ಎಂಬುದನ್ನು ವಿವರಿಸಿದ್ದಾರೆ.[೧೭]

ಮೋಹನಕೃಷ್ಣ ಕೆ. ರೈ., ಅವರ "ಮದ್ಯಕಾಲೀನ ಕರ್ನಾಟಕದಲ್ಲಿ ನಗರಗಳು ಮತ್ತು ಜನಜೀವನ" ಎಂಬ ಲೇಖನದಲ್ಲಿ ಕೃಷಿ, ಕೃಷಿಯೇತರ ಚಟುವಟಿಕೆ ಮೂಲಕ ಪೇಟೆ ಮತ್ತು ಪಟ್ಟಣಗಳು ಬೆಳೆಯಲು ಆರಂಭಗೊಳ್ಳಲು ವರ್ತಕರು ಮತ್ತು ವ್ಯಾಪಾರ ಸಂಘಗಳ ಪ್ರಕ್ರಿಯೆ ಅಡಕವಾಯಿತೆಂದು ಚರ್ಚಿಸಿದ್ದಾರೆ.[೧೮]

ಶರಣಬಸಪ್ಪ ಪಿ, ಅವರ "ಕೊಪ್ಪಳ–ಹಂಪಿ ಪ್ರದೇಶ ಪ್ರಾಗಿತಿಹಾಸ ಕಾಲದ ಕಲೆ (ವಿಶೇಷವಾಗಿ ಗವಿವರ್ಣ ಹಾಗೂ ಬಯಲುಬಂಡೆ ಚಿತ್ರಗಳನ್ನು ಅನುಲಕ್ಷಿಸಿ)". ಪಿಎಚ್.ಡಿ. ಪ್ರಬಂಧದಲ್ಲಿ ಕೊಪ್ಪಳ–ಹಂಪಿ ಪ್ರದೇಶದಲ್ಲಿರುವ ಪ್ರಾಗಿತಿಹಾಸಿಕ ಕಾಲದ ಬಂಡೆಗಳ ಮೇಲೆ ಚಿತ್ರಿಸಿದ ವರ್ಣಚಿತ್ರಗಳನ್ನು ಕುರಿತು ವಿವರಿಸಿ ಅವುಗಳನ್ನು ಆಧರಿಸಿ ಆಧಾರದ ಮೂಲಕ ಅಂದಿನ ಕಾಲದ ಜನರ ಜೀವನ ಶೈಲಿಯನ್ನು ಚರ್ಚಿಸಿದ್ದಾರೆ.[೧೯]

Nagaraja B.S, ಅವರ "Urban Centres and Urbanzation Under the Vijayanagara Empire". ಪಿಎಚ್.ಡಿ. ಮಹಾಪ್ರಬಂಧದಲ್ಲಿ ವಿಜಯನಗರ ಕಾಲದ ನಗರಗಳ ಹುಟ್ಟು ಬೆಳವಣಿಗೆ, ನಗರದ ಸಾಮಾಜಿಕ ಜೀವನ ಮತ್ತು ಆರ್ಥಿಕ ವ್ಯವಸ್ಥೆಗಳನ್ನು ಕುರಿತು ಚರ್ಚಿಸಿದ್ದಾರೆ. ಕೆಲವು ಗ್ರಾಮಗಳ, ಹಾಗೂ ಪುರಗಳ ಬೆಳವಣಿಗೆಯ ಮಾಹಿತಿಯನ್ನು ಕೆಲವು ಶಾಸನಗಳು ಹಾಗೂ ವಿದೇಶಿ ಪ್ರವಾಸಿಗರ ದಾಖಲೆಗಳನ್ನು ಆಧರಿಸಿ ವಿವರಿಸಿದ್ದಾರೆ.[೨೦]

Chandrashekhar Shasthri, H.M., ಅವರ "The Vijayanagara Urbanity". ಪಿಎಚ್.ಡಿ. ಪ್ರಬಂಧದಲ್ಲಿ ವಿಜಯನಗರ ಸಾಮ್ರಾಜ್ಯದ ಹುಟ್ಟು ಬೆಳವಣಿಗೆ ಮತ್ತು ಉಪನಗರಗಳ ವಿಸ್ತರಣೆಯ ನಗರ ಆಡಳಿತ, ಕೈಗಾರಿಕೆ, ವ್ಯಾಪಾರ, ಸಾಮಾಜಿಕ ಜೀವನವನ್ನು ಕುರಿತು ಚರ್ಚಿಸಿರುವರು.[೨೧]

ಮಹದೇವ ಸಿ, ಅವರ "ವಿಜಯನಗರದಲ್ಲಿ ಅರ್ದೆಗೆಮಾ ಅಥವಾ ಒಂದೆಗೆಮಾ ಪಟ್ಟಣ ಯಾವುದು?" ಎಂಬ ಲೇಖನದಲ್ಲಿ ವಿದೇಶಿ ಪ್ರವಾಸಿಗರು ದಾಖಲಿಸಿರುವಂತೆ ಅರ್ದೆಗೆಮಾವು ವರದರಾಜಮ್ಮನಪಟ್ಟಣ ಎಂದು ಗುರುತಿಸಿರುತ್ತಾರೆ.[೨೨] ಈ ಪ್ರದೇಶವು ವಿಜಯನಗರ ಅರಮನೆಯ ಪೂರ್ವಕ್ಕೆ ಅರ್ದೆಗೆಮಾ ಪಟ್ಟಣ ಇತ್ತೆಂದು ಗುರುತಿಸಿದ್ದಾರೆ. ಇಂದು ಆ ಪಟ್ಟಣವು ಸಾಮಾನ್ಯವಾಗಿ ಅಸ್ತಿತ್ವದಲ್ಲಿ ಇಲ್ಲ. ಕೆಲವು ಕಟ್ಟಡಗಳ ಅವಶೇಷ ಹಾಗೂ ಪಟ್ಟಾಭಿರಾಮ ದೇವಾಲಯ ಮಾತ್ರ ಉಳಿದು ಬಂದಿದೆ.

ಮಧು ಎಂ.ಎನ್, ಅವರ 'ಹೊಸಪೇಟೆ ಪ್ರದೇಶದ ಚಾರಿತ್ರಿಕ ಅಧ್ಯಯನ : ಎಂಬ ಎಂ.ಫಿಲ್ ಪ್ರಬಂಧದಲ್ಲಿ ಪ್ರಾಚೀನ ಕಾಲದಿಂದ ಕರ್ನಾಟಕ ಏಕೀಕರಣ ಕಾಲದವರೆಗಿನ ಹೊಸಪೇಟೆ ಪ್ರದೇಶದ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ.[೨೩]

ಶಿವಲೀಲಾ ಕೆ. ಅವರ "ಕಮಲಾಪುರದ ಶಾಸನಗಳು ಮತ್ತು ದೇವಾಲಯಗಳು". ಎಂ.ಫಿಲ್. ಪ್ರಬಂಧದಲ್ಲಿ ಇವರು ಶಾಸನಗಳ ಆಧಾರದಿಂದ ಕಮಲಾಪುರ ಗ್ರಾಮ ಮತ್ತು ದೇವಾಲಯಗಳನ್ನು ಕುರಿತು ಅಧ್ಯಯನ ಮಾಡಿರುತ್ತಾರೆ. ಈ ಗ್ರಾಮದ ಬೆಳವಣಿಗೆಯನ್ನು ಪ್ರಾಗಿತಿಹಾಸ ಕಾಲದಿಂದ ವಿಜಯನಗರ ಕಾಲದವರೆಗೆ ಶಾಸನಗಳ ಆಧಾರಗಳ ಮೂಲಕ ವಿವರಿಸಿದ್ದಾರೆ.[೨೪]

ಅಕ್ತರ್ ಖಾನಂ ಹೆಚ್.ಎಸ್, ಅವರು ತಮ್ಮ ಎಂ.ಫಿಲ್. ಪ್ರಬಂಧದ 'ವಿಜಯನಗರ ಪಟ್ಟಣದಲ್ಲಿ ಮುಸ್ಲಿಮ್ ಸಂಸ್ಕೃತಿಯಲ್ಲಿ ವಿಜಯನಗರ ಕಾಲದ ಹಂಪಿ ಪರಿಸರದಲ್ಲಿನ ಮುಸ್ಲಿಂ ವರ್ತಕರ ಪಾತ್ರ, ಇಸ್ಲಾಂ ಧಾರ್ಮಿಕ ಕಟ್ಟಡಗಳು ಇಸ್ಲಾಮಿಕ್ ಕಲೆ, ವಾಸ್ತುಶಿಲ್ಪ, ಜೀವನ ಶೈಲಿ, ಅಧಿಕಾರಿಗಳು, ಇತ್ಯಾದಿಗಳನ್ನು ಚರ್ಚಿಸಿದ್ದಾರೆ.[೨೫]

ಶಿವಲೀಲಾ ಕೆ. ಲೋಕೇಶ್, ಅವರ "ಕಮಲಾಪುರ : ಒಂದು ಸಾಂಸ್ಕೃತಿಕ ಅಧ್ಯಯನ". ಎಂಬ ಪಿಎಚ್.ಡಿ. ಪ್ರಬಂಧದಲ್ಲಿ ಕಮಲಾಪುರ ಗ್ರಾಮವು ವಿಜಯನಗರ ಕಾಲದಲ್ಲಿ ಯಾವ ರೀತಿ ಬೆಳವಣಿಗೆ ಹೊಂದಿತ್ತು ಮತ್ತು ಅಂದಿನ ಸಾಮಾಜಿಕ ಸ್ಥಿತಿ ಹಾಗೂ ಇಲ್ಲಿನ ಲೌಕಿಕ ಮತ್ತು ಅಲೌಕಿಕ ಕಟ್ಟಡಗಳನ್ನು ಕುರಿತು ಚರ್ಚಿಸಿರುತ್ತಾರೆ.[೨೬]

Narasimhaiah B., ಅವರ *"A Decade of Excavation at Vijayanagara (Hampi),* ಹಂಪಿ ಪ್ರದೇಶದ ರಾಜಪ್ರಾಂಗಣ ಉತ್ಖನನದಲ್ಲಿ ದೊರೆತ ಅವಶೇಷಗಳ ಮಾಹಿತಿಯನ್ನು ಈ ಲೇಖನದಲ್ಲಿ ಕೊಡಲಾಗಿದೆ.[೨೭] ಉತ್ಖನನದಲ್ಲಿ ವಿಜಯನಗರ ಕಾಲದ ರಾಜಪ್ರಾಂಗಣದ ೫೯,೪೦೦ ಚ.ಮೀ, ವಿಸ್ತಾರವಾಗಿದ್ದು. ಅದರಲ್ಲಿ ಉತ್ತರಕ್ಕೆ ಮತ್ತು ಪಶ್ಚಿಮಕ್ಕೆ ಎರಡು ದ್ವಾರಗಳಿವೆ. ಈ ರಾಜಪ್ರಾಂಗಣ ವಾಯವ್ಯಕ್ಕೆ ಅರಮನೆ ಸಂಕೀರ್ಣವಿದೆ. ಈ ಸಂಕೀರ್ಣದ ಪೂರ್ವಕ್ಕೆ ಧಾರ್ಮಿಕ ಸ್ಥಳ, ಅರಮನೆಯ ದಕ್ಷಿಣಕ್ಕೆ ಸೇವಕರ ಮನೆ, ಹೀಗೆ ವಿವಿಧ ಕಟ್ಟಡಗಳು ಉತ್ಖನನದಲ್ಲಿ ದೊರೆತಿವೆ.

Koraiah C.T.M., ಅವರ "The Metropolis of the Vijayanagara Empire" ಲೇಖನದಲ್ಲಿ ಶಾಸನದ ಮತ್ತು ವಿದೇಶಿ ಪ್ರವಾಸಿಗರ ದಾಖಲೆಯ ಕುರಿತು ವಿವರಗಳಿವೆ. ಕ್ರಿ.ಶ. ೧೩೩೬ರಲ್ಲಿ ಸಂಗಮ ವಂಶದ ಹರಿಹರ ಮತ್ತು ಬುಕ್ಕರು ಸ್ಥಾಪನೆ ಮಾಡಿದರು. ವಿದೇಶಿ ಪ್ರವಾಸಿಗ ನಿಕೊಲೊ ಡಿ ಕೊಂಟಿಯ ಹೇಳಿಕೆಯಂತೆ ಒಂದನೇ ದೇವರಾಯನ ಕಾಲದಲ್ಲಿ ವಿಜಯನಗರವು ೬೦ ಮೈಲ ದೂರದಷ್ಟು ಹರಡಿತ್ತು. ಅಬ್ದುಲ್ ರಜಾಕ್‌ನು ಎರಡನೇ ದೇವರಾಯನ ಕಾಲನ ಬಜಾರಗಳ, ಕೋಟೆಗಳ ಬಗೆಗೆ ವರ್ಣಿಸಿದ್ದಾನೆ. ಬಾರ್‌ಬೋಸನು ಕೃಷ್ಣದೇವರಾಯನ ಕಾಲದ ಅರಮನೆ, ಸಾಮಾನ್ಯ ಮನೆಗಳ ವಿವರಣೆಯನ್ನು ಕೊಡುತ್ತಾರೆ.[೨೮]

Joshi S.K., ಅವರ "The Defence System of Vijayanagara City" ಲೇಖನದಲ್ಲಿ ತಾವು ಕೈಗೊಂಡ ಕ್ಷೇತ್ರಕಾರ್ಯದ ಮೂಲಕ ಮತ್ತು ವಿದೇಶಿ ಪ್ರವಾಸಿಗರಾದ ಅಬ್ದುಲ್ ರಜಾಕ್, ಬಾರ್ ಬೋಸ್, ಫೆರಿಸ್ತಾ, ನ್ಯೂನಿಜ್ ದಾಖಲಿಸಿದ ಮಾಹಿತಿಯನ್ನು ವಿವರಿಸಿದ್ದಾರೆ. ವಿಜಯನಗರದ ಕೋಟೆಗೋಡೆಯು ೧೬೪ ಚದುರ ಮೀಟರ್ ಇದೆ. ಐನೂರು ಮೈಲಿಗಿಂತ ಉದ್ದವಾಗಿ ಹರಡಿಕೊಂಡಿದೆ. ಮೊದಲನೇ ಕೋಟೆಯು ವಿಜಯನಗರದ ಕೇಂದ್ರ ಭಾಗವಾದ ಹಂಪಿಯಿಂದ-ಕಮಲಾಪುರಕ್ಕೆ ಬರುವ ಪ್ರದೇಶ ಎಂಬುದನ್ನು ಗುರುತಿಸುವರು.[೨೯] ಕೇಂದ್ರ ಭಾಗದಲ್ಲಿ ಅರಮನೆಗಳು, ಆಡಳಿತ ಕಟ್ಟಡಗಳು, ರಾಣಿಯರ ಸ್ನಾನಗೃಹ, ಹೀಗೆ ಮುಂತಾದ ಕಟ್ಟಡಗಳನ್ನು ಕಾಣುತ್ತೇವೆ. ವಿದೇಶಿ ಪ್ರವಾಸಿಗ ಬಾರ್ಬೋಸ್‌ನು ಹೇಳುವ ಪ್ರಕಾರ ನಗರದಲ್ಲಿ ೪೫ ಹರದಾರಿಗಳಿದ್ದವು. ನಗರವನ್ನು ಸಮತಟ್ಟಾದ ಪ್ರದೇಶದಲ್ಲಿ ಕಟ್ಟಲಾಗಿತ್ತು. ರಾಜನು ೯೦೦ ಆನೆಗಳನ್ನು ಹೊಂದಿದ್ದನು. ಒಂದೊಂದು ಆನೆಗಳಿಗೆ ಬೇರೆ ಬೇರೆ ಕೊಠಡಿಗಳನ್ನು ಕಟ್ಟಲಾಗಿತ್ತು. ಅದರ ಎದುರಿಗೆ ಅಚ್ಚು ಹಾಕುವ (Mint) ಮನೆಯಿದೆ. ಅಲ್ಲಿ ಹನ್ನೆರಡು ಸಾವಿರ ಸೈನಿಕ ಕಾವಲುಗಾರರಿರು ಇರುತ್ತಿದ್ದರು.

Ghatapanadi S.G., ಅವರ *"Development of Towns in the Vijayanagara Times,* ಲೇಖನದಲ್ಲಿ ವಿಜಯನಗರ ಕಾಲದ ಪಟ್ಟಣದ ಬೆಳವಣಿಗೆಯ ಉಲ್ಲೇಖವನ್ನು ಶಾಸನ ಮತ್ತು ಇತರ ಪ್ರಾಚೀನ ಸ್ಥಳಗಳ ಉದಾಹರಣೆಗಳ ಮೂಲಕ ವಿವರಿಸಿದ್ದಾರೆ.[೩೦] ಹಂಪೆಯ ಆನೆಗೊಂದಿಯು ತುಂಗಭದ್ರಾ ನದಿ ದಂಡೆಯ ಮೇಲಿದೆ. ಸಾಮಾನ್ಯವಾಗಿ ನದಿ ದಂಡೆಯ ಮೇಲೆ ಇರುವ ನಗರಗಳು ವ್ಯಾಪಾರ ವಹಿವಾಟಿನಿಂದ ಅಭಿವೃದ್ಧಿ ಹೊಂದುತ್ತವೆ. ವಿಜಯನಗರ ಕಾಲದ ಉಪನಗರಗಳಾದ ತಿರುಮಲಾದೇವಿಪಟ್ಟಣ, ನಾಗಲಾಪುರ, ಕೃಷ್ಣಾಪುರ, ಇನ್ನೂ

ಮುಂತಾದ ಉಪನಗರಗಳು ಹಾಗೂ ನಗರಗಳ ಅಭಿವೃದ್ಧಿ ಮತ್ತು ಸಾಮ್ರಾಜ್ಯದ ವಿಸ್ತರಣೆಯನ್ನು ಕುರಿತು ಚರ್ಚಿಸಿರುವರು.

Krishan, K.G., ಅವರ *"A Note on the Urbanisation of Vijayanagara"* ಎಂಬ ಲೇಖನದಲ್ಲಿ ಶಾಸನ ಆಧಾರಗಳ ಮೂಲಕ ಹಂಪಿ ಪರಿಸರದ ವಿಯನಗರ ಕಾಲದ ಗ್ರಾಮಗಳನ್ನು ಮತ್ತು ವಿವಿಧ ಸ್ಥಳಗಳನ್ನು ವಿವರಿಸಿದ್ದಾರೆ.[೩೧] ಹಂಪಿ ಪ್ರದೇಶದ ಸುತ್ತ ವಿಜಯನಗರ ಕಾಲದಲ್ಲಿ ಬೆಳೆದ ಗ್ರಾಮ, ಪುರ, ಹಾಗೂ ಪಟ್ಟಣಗಳ ಮಾಹಿತಿಯನ್ನು ನೀಡಿರುತ್ತಾರೆ. ಕೃಷ್ಣದೇವರಾಯನ ಕಾಲದಲ್ಲಿ ಬೆಳೆದ ಪಟ್ಟಣಗಳ ಕುರಿತ ಮಾಹಿತಿಯೇ ಅಧಿಕವಾಗಿದೆ.

Chandrashekhara Shastri H.M., Basavaraj N. Akki, ಅವರು *"Genesis and Growth of Puras in Vijayanagara City"* ಎಂಬ ಲೇಖನದಲ್ಲಿ ವಿಜಯನಗರ ಕಾಲದ ಪುರಗಳ ಬೆಳವಣಿಗೆಯನ್ನು ಕೆಲವು ಕೃತಿಗಳು ಮತ್ತು ಶಾಸನಗಳ ಉಲ್ಲೇಖಗಳ ಮೂಲಕ ವಿವರಿಸಿದ್ದಾರೆ.[೩೨] ಅದರಂತೆ ಪುರಗಳು ದೇವಾಲಯಗಳ ಸುತ್ತ ಒಂದೊಂದು ಪುರ ಬೆಳೆದವು. ಮಾರುಕಟ್ಟೆಯನ್ನು ಹೊಂದಿ ಅದರಲ್ಲಿ  ಬೇರೆ ಬೇರೆ ಅಂಗಡಿಗಳು ಇರುತ್ತಿದ್ದವು. ದೇವಾಲಯ ಮುಂಭಾಗದಲ್ಲಿ ರಥ ಬೀದಿಯಿರುತ್ತಿತ್ತು. ಬಹುಶಃ ಎಲ್ಲಾ ಪ್ರಮುಖ ದೇವಾಲಯಗಳು ಒಂದು ವಿದ್ಯಾ ಕೇಂದ್ರವಾಗಿತ್ತು. ಪುರಗಳಲ್ಲಿ ಪುಷ್ಕರಣಿಯನ್ನು ದೇವಾಲಯದ ಎಡಭಾಗದಲ್ಲಿ ನಿರ್ಮಿಸಲಾಗಿತ್ತು.

ಹಂಪಿಯ ಎರಡು ಪ್ರದೇಶಗಳಲ್ಲಿ ಉತ್ಖನನ ನಡೆಸಿದ್ದು ಅದರ ಫಲಿತಗಳನ್ನು Nagaraja Rao, M.S. ಅವರು "*Excavations in the Sacred Centre*" ಎಂಬ ಲೇಖನದಲ್ಲಿ ನೀಡಿದ್ದಾರೆ. ವಿರೂಪಾಕ್ಷ ಬಜಾರ್‌ನ ಪೂರ್ವ ಭಾಗದಲ್ಲಿ ಮತ್ತು ರಂಗಮಹಲ್ ಪ್ರದೇಶಗಳಲ್ಲಿ ಉತ್ಖನನ ನಡೆಸಲಾಗಿದ್ದು ಮೊದಲು ಉಲ್ಲೇಖಿಸಿದ ಬಜಾರು ೭೨೦ ಮೀ. ಉದ್ದ ಮತ್ತು ೩೫ ಮೀ. ಅಗಲವಾಗಿದ್ದು ಅಲ್ಲಿ ವಿವಿಧ ಬಗೆಯ ಅಂಗಡಿಗಳು ಇದ್ದವೆಂದು ದಾಖಲಿಸಿದ್ದಾರೆ.[೩೩] ರಾಜರು ವಾಸಿಸುವ ಪ್ರದೇಶದಲ್ಲಿ ಪ್ರಮುಖ ಕಟ್ಟಡಗಳು ಕಂಡುಬರುತ್ತವೆ. ಅಲ್ಲಿ ೧೯೦ ಮೀ. X ೧೪೦ ಮೀಟರ್‌ನಷ್ಟು ಅಚ್ಚು ಹಾಕುವ ಪ್ರದೇಶ (Mint) ಇದ್ದವೆಂದು ಸೂಚಿಸಿದ್ದಾರೆ.

ಹಂಪಿಪಟ್ಟಣದ ವಿಜಯನಗರ ಕಾಲದ ಕಟ್ಟಡಗಳ ವಿನ್ಯಾಸ ಮತ್ತು ಪಟ್ಟಣದಲ್ಲಿರುವ ವ್ಯವಸ್ಥೆಯ ಬಗೆಗೆ ಒಂದು ಪ್ರಾಥಮಿಕ ಮಾಹಿತಿಯನ್ನು Kathleen D Morrison,

ಅವರ *"The Vijayanagara Metropolian Survey Preliminary Investigtion"* ಎಂಬ ಲೇಖನದಲ್ಲಿ ವಿವರಿಸಿದ್ದಾರೆ.[೩೪] ಹಂಪಿ ಪಟ್ಟಣದಲ್ಲಿರುವ ಕಟ್ಟಡಗಳ ಕಂಬಗಳು ಎತ್ತರವಾಗಿದ್ದು, ಗೋಡೆಗಳಿಗೆ ಸುಣ್ಣವನ್ನು ಹಚ್ಚುತ್ತಿದ್ದರು. ನಗರಕ್ಕೆ ಮುಖ್ಯವಾಗಿ ಬೇಕಾಗುವ ನೀರನ್ನು ನಾಲೆಯನ್ನು ಮೂಲಕ ನಗರಕ್ಕೆ ಸರಬರಾಜು ಮಾಡಲಾಗುತ್ತಿತ್ತು ಎಂಬ ವಿಷಯಗಳು ನಗರ ರಚನೆಯ ಮಾಹಿತಿ ನೀಡುತ್ತದೆ.

Channabasappa S. Patil, ಅವರ *"Further Epigraphical References to City Gates and Watch Towers of Vijayanagara."* ಎಂಬ ಲೇಖನದಲ್ಲಿ ಹಂಪಿ ಪರಿಸರದ ವಿಜಯನಗರದ ಕಾಲದ ಕೋಟೆಬಾಗಿಲು ಮತ್ತು ವಿಷ್ಣು ಗೋಪುರವನ್ನು ಕುರಿತು ಶಾಸನಗಳನ್ನು ಆಧರಿಸಿ[೩೫] ವಿವರಿಸಿದ್ದಾರೆ. ವಿಜಯನಗರ ಕಾಲದಲ್ಲಿ ನಿರ್ಮಾಣವಾದ ಕಟ್ಟಡಗಳಲ್ಲಿ ಮುಖ್ಯವಾಗಿ ಕೋಟೆ ಬಾಗಿಲು, ಕಾವಲು ಗೋಪುರ, ಒಂದೊಂದು ಬಾಗಿಲಿಗೆ ಒಂದೊಂದು ಹೆಸರುಗಳು ಇದ್ದುದ್ದನ್ನು ವಿವರಿಸಿದ್ದಾರೆ. ಇವರ ಮತ್ತೊಂದು ಲೇಖನ *"Malig –Kupa –Arama at Malapanagudi".* ಹಂಪಿ ಪರಿಸರದಲ್ಲಿನ[೩೬] ಮಲಪನಗುಡಿ ಸಮೀಪವಿರುವ ವಿಜಯನಗರ ಕಾಲದ ಅಷ್ಟಕೋನಾಕೃತಿಯ ಬಾವಿಗೆ ಮಾಳಿಗೆ–ಕೂಪ–ಆರಾಮ ಎಂದು ಹೆಸರಿತ್ತು. ಅದನ್ನು ಕ್ರಿ.ಶ. ೧೪೧೨ರಲ್ಲಿ ಒಂದನೇ ದೇವರಾಯನ ಕಾಲದಲ್ಲಿ ನಿರ್ಮಿಸಿ ಅರವಟ್ಟಿಗೆಯಾಗಿ ಬಳಸಿರುವುದನ್ನು ಕುರಿತು ವಿವರಿಸಿದ್ದಾರೆ. ಇದರ ಜೀರ್ಣೋದ್ಧಾರ ಮತ್ತು ವ್ಯವಸ್ಥಿತವಾಗಿ ನೋಡಿಕೊಳ್ಳುವ ನಿರ್ವಹಣೆಯ ವಿವರಗಳು ಲೇಖನದಲ್ಲಿದೆ.

John M. Fritz, ಅವರ *"The plan of Vijayanagara and Silpasastras".* ಲೇಖನವು ವಿಜಯನಗರಪಟ್ಟಣವನ್ನು ಶಿಲ್ಪಶಾಸ್ತ್ರಕ್ಕೆ ಅನುಗುಣವಾಗಿ ನಿರ್ಮಿಸಲಾಗಿದೆ? ಎಂಬುದನ್ನು ಚರ್ಚಿಸಿದ್ದಾರೆ.[೩೭] ಅವರು ಮುಂದುವರಿದು ಮಾನಸಾರದ ಪ್ರಕಾರ ರಾಜನ ಅರಮನೆಯು ಪಟ್ಟಣದ ಮಧ್ಯದಲ್ಲಿ ಇರುತ್ತದೆ. ಅದೇ ರೀತಿಯಾಗಿ ಮಾಯಮತದ ಪ್ರಕಾರ ರಾಜನ ಅರಮನೆ ಪಶ್ಚಿಮಕ್ಕೆ ಬಜಾರು ಇರಬೇಕು. ಆದರೆ ವಿಜಯನಗರಪಟ್ಟಣದಲ್ಲಿ ಅಂತಹ ವ್ಯವಸ್ಥೆಯು ಇರದೇ ಶಾಸ್ತ್ರಗ್ರಂಥಗಳಿಗೆ ವಿರುದ್ಧವಾಗಿ ಮನೆಗಳು, ಅಂಗಡಿಗಳು, ಮಾರುಕಟ್ಟೆ ಬಜಾರುಗಳು, ಧಾರ್ಮಿಕ ಕಟ್ಟಡಗಳು ಇತ್ಯಾದಿಗಳು ಇರುವುದನ್ನು ವಿವರಿಸಿದ್ದಾರೆ.

Bernard K. Means, ಅವರ *"A Small Settlement Near the City of Vijayanagara"* ಲೇಖನವು ಹಂಪಿ ವಿಜಯನಗರ ಕಾಲದ ಒಂದು ಗ್ರಾಮದಲ್ಲಿರುವ ಕಟ್ಟಡ

ವಿನ್ಯಾಸದ ಕುರಿತು ವಿವರಿಸುತ್ತದೆ.[೩೮] ಹಂಪಿಯ ವಾಯವ್ಯ ಭಾಗದಲ್ಲಿರುವ ವೆಂಕಟಾಪುರದಲ್ಲಿ ಕೋಟೆಗೋಡೆ ಮತ್ತು ಚೌಕಾಕಾರ ಮನೆಗಳು ಹಾಗು ಅವುಗಳಿಗೆ ಸಮತಟ್ಟಾಗಿ ಮೇಲ್ಹಾವಣೆಯನ್ನು ಕಟ್ಟಲಾಗಿದೆ ಎಂಬ ವಿವರಗಳಿವೆ.

Carla M. Sinopoli, ಅವರ *"A Vijayanagara Period Road System"*. ಹಂಪಿ ವಿಜಯನಗರ ಕಾಲದ ರಸ್ತೆಗಳ ವಿನ್ಯಾಸದ ಬಗೆಗೆ ಈ ಲೇಖನವು ತಿಳಿಸುತ್ತದೆ.[೩೯] ವಿಜಯನಗರ ರಸ್ತೆಗಳು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣವಾಗಿ ರಚಿಸಲಾಗಿದೆ. ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯ ರಸ್ತೆಗಳು ಹಾಗೂ ಅದರ ಅಳತೆಗಳು ಮತ್ತು ನಗರ ರಚನಾ ವಿನ್ಯಾಸದ ಮೇಲೆ ಲೇಖಕರು ಬೆಳಕನ್ನು ಚೆಲ್ಲಿದ್ದಾರೆ. ಕೆಲವೊಂದು ರಸ್ತೆಯಲ್ಲಿ ಕಾಲು ಹಾದಿಯ ಚಿಕ್ಕ ಚಿಕ್ಕ ಕಲ್ಲುಗಳನ್ನು ಹೊಂದಿಸಿ ನಿರ್ಮಿಸಿರುವ ವಿವರಗಳು ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ಒದಗಿಸಿವೆ.

Sundara A, ಅವರ *"New Light on Religious Trends in Anegondi Region during Vijayanagara Period"* ಈ ಲೇಖನದಲ್ಲಿ ಮಹಾಕಾವ್ಯ ರಾಮಾಯಣದಲ್ಲಿ ಉಲ್ಲೇಖಿತ ಸ್ಥಳಗಳು ಆನೆಗೊಂದಿ ಪರಿಸರದ ಸ್ಥಳಗಳೊಂದಿಗೆ ಹೋಲಿಸಿ ಗುರುತಿಸಿದ್ದಾರೆ.[೪೦] ಮುಂದೆ ಇಲ್ಲಿಯ ಆನೆಗೊಂದಿ ಪರಿಸರದಲಿರುವ್ವ ಶಬರಿ ಗುಹೆ, ಅಂಜನಾದ್ರಿಬೆಟ್ಟ, ಕಿಷ್ಕಿಂದ ಪರ್ವತ, ಚಿಂಚಲ ಕೋಟೆಯಿದೆ ಇತ್ಯಾದಿ. ಆನೆಗೊಂದಿಯಲ್ಲಿ ೭ನೇ ಶತಮಾನದ ಬಾದಾಮಿ ಚಲುಕ್ಯ ದೇವಾಲಯದ ಅವಶೇಷ ದೊರಕಿದೆ. ಕ್ರಿ.ಶ. ೧೧ನೇ ಶತಮಾನದಲ್ಲಿ ಆನೆಗೊಂದಿಯನ್ನು ಶಾಸನದಲ್ಲಿ ಕಿಷ್ಕಿಂದ ಎಂದು ಉಲ್ಲೇಖಿಸಲಾಗಿದೆ. ಈ ರೀತಿಯ ಉಲ್ಲೇಖಗಳು ನನ್ನ ಅಧ್ಯಯನಕ್ಕೆ ಪೂರಕವಾಗಿವೆ.

Vasundara Filliozat, ಅವರ *"Hampi - Vijayanagara"* ಲೇಖನದಲ್ಲಿ ಮಹಾಕಾವ್ಯ ರಾಮಾಯಣದ ವಾನರ ರಾಜರುಗಳಾದ ವಾಲಿ ಮತ್ತು ಸುಗ್ರೀವರು ಕಿಷ್ಕಿಂದದಲ್ಲಿ ಸಾಮ್ರಾಜ್ಯವನ್ನು ಕಟ್ಟಿ ಆಳ್ವಿಕೆ ನಡೆಸಿದರೆಂದು ಉಲ್ಲೇಖಿಸುತ್ತಾ ಕಿಷ್ಕಿಂದವನ್ನು ಆನೆಗೊಂದಿ ಎಂದು ಗುರುತಿಸುತ್ತಾರೆ. ಇದರೊಂದಿಗೆ ಚಾರಿತ್ರಿಕ ಕಾಲಘಟ್ಟದಲ್ಲಿ ಈ ಪ್ರದೇಶದಲ್ಲಿ ಅನೇಕ ಅರಸುಮನೆತನಗಳವರು ಆಳ್ವಿಕೆ ನಡೆಸಿರುವುದನ್ನು ಶಾಸನಾಧಾರಗಳ ಮೂಲಕ ವಿವರಿಸಿದ್ದಾರೆ. ಪುರಾಣಗಳ ಕಾಲದಿಂದ ವಿಜಯನಗರ ಕಾಲದವರೆಗೆ ಹಂಪಿ ಪರಿಸರವು ಜನನಿಬಿಡ ವಸತಿ ನೆಲೆಯೆಂಬುದು ಇದರಿಂದ ಸಾಬೀತಾಗುತ್ತದೆ. ಹೊಯ್ಸಳರ ಪೂರ್ವಕಾಲದಲ್ಲಿ ಅನೇಕ

ರಾಜವಂಶಗಳು ಇಲ್ಲಿ ಆಳ್ವಿಕೆ ನಡೆಸಿದವು. ಕ್ರಿ.ಶ. ೭ನೇ ಶತಮಾನದಲ್ಲಿ ಬಾದಾಮಿ ಚಲುಕ್ಯರ ರಾಜ ವಿನಯಾದಿತ್ಯನು ಪಂಪಾತೀರ್ಥದಲ್ಲಿ ಸೇನಾಶಿಬಿರದ ಬೀಡುಬಿಟ್ಟಿದ್ದನೆಂದು ಶಾಸನವು ತಿಳಿಸುತ್ತದೆ. ಅದರಂತೆ ಕ್ರಿ.ಶ. ೧೧೯೯ರ ಶಾಸನದಲ್ಲಿ 'ವಿರೂಪಾಕ್ಷತೀರ್ಥ'ವನ್ನು ಮತಂಗ ಪರ್ವತದಿಂದ ಆಳಿಕ್ವೆ ಮಾಡುತ್ತಿದ್ದರು.[೪೧] ಹೀಗೆ ನನ್ನ ಅಧ್ಯಯನಕ್ಕೆ ಅವಶ್ಯವಾದ ವಿಷಯವನ್ನು ಬಳಸಿಕೊಳ್ಳಲಾಗಿದೆ.

Agrawal R.C., ಅವರ *"Excavating Krsnadevaraya Palace at Hampi"* ಲೇಖನದಲ್ಲಿ ಹಂಪಿಯ ಎರಡು ವರ್ಷಗಳ ಉತ್ಖನನದಲ್ಲಿ ದೊರೆತ ಅವಶೇಷಗಳ[೪೨] ಕುರಿತು ಮಹತ್ವದ ಮಾಹಿತಿಯನ್ನು ಒದಗಿಸಿದ್ದಾರೆ. ಮಹಾನವಮಿ ದಿಬ್ಬದ ಪಶ್ಚಿಮ ಭಾಗದಲ್ಲಿ ನಡೆಸಿದ ಉತ್ಖನನದಲ್ಲಿದಿಇತಿಹಾಸ ಕಾಲಘಟ್ಟಕ್ಕೆ ಸೇರಿದ ನೀಲಿ ಬಣ್ಣದ ಕಲ್ಲಿನ ಮೇಲೆ ಬ್ರಾಹ್ಮಿ ಲಿಪಿಯ ಶಾಸನ ಕಲ್ಲು, ಅಮರಾವತಿ ಸ್ತೂಪವನ್ನು ಹೋಲುವ ರೀತಿಯ ಕೆಲವು ಕಲ್ಲಿನ ಕಂಬಗಳು ಕಟ್ಟಡದ ಅವಶೇಷಗಳು ಮತ್ತು ಕೆಲವು ಕಟ್ಟಡ ಅವಶೇಷಗಳು ಪಶ್ಚಿಮ ಭಾಗದಲ್ಲಿ ದೊರೆತಿರುವುದನ್ನು ವಿವರಿಸಿದ್ದಾರೆ.

Vasudevan C.S., ಅವರ *"Kirsnadevaraya and his Contribution to the Capital City Vijayanagara Pattana"* ಎಂಬ ಲೇಖನದಲ್ಲಿ ರಾಜನ ಆಡಳಿತಾವಧಿಯಲ್ಲಿ ರಾಜಧಾನಿ ವಿಜಯನಗರಪಟ್ಟಣಕ್ಕೆ ನೀಡಿರುವ ಕೊಡುಗೆಗಳನ್ನು ಕುರಿತು ಶಾಸನಗಳ ಆಧಾರದ ಮೂಲಕ ಚರ್ಚಿಸಿದ್ದಾರೆ.[೪೩] ಮುಖ್ಯವಾಗಿ ಕೃಷ್ಣದೇವರಾಯನು ತನ್ನ ತಾಯಿಯ ಹೆಸರಿನಲ್ಲಿ 'ನಾಗಲಾಪುರ' ಎನ್ನುವ ಗ್ರಾಮವನ್ನು ಕಟ್ಟಿಸಿದನು. ರಾಣಿಯ ಹೆಸರಿನಲ್ಲಿ 'ತಿರುಮಲಾದೇವಿಯ ಪಟ್ಟಣ' ಮಗನ ಹೆಸರಿನ 'ಸಾಲೆತಿರುಮಲರಾಯ ಪಟ್ಟಣವನ್ನು ಕಟ್ಟಿಸಿದನು. ಹಜಾರರಾಮ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದನು ಮತ್ತು ಕೃಷ್ಣ ದೇವಾಲಯವನ್ನು ಕಟ್ಟಿಸಿದ ಮಾಹಿತಿಯನ್ನು ಅವರು ನೀಡಿದ್ದಾರೆ. ಈ ರೀತಿ ಪುರ/ಉಪನಗರಗಳ ನಿರ್ಮಾಣ ಕುರಿತ ಮಾಹಿತಿಯು ಅಧ್ಯಯನಕ್ಕೆ ಪೂರಕವಾಗಿದೆ.

Paul Cope-Faulkner, ಅವರ ತಮ್ಮ *"Homes From Bedrock"*. ಲೇಖನದಲ್ಲಿ ವಿಜಯನಗರ ಕಾಲದ ಹಂಪಿ ಪಟ್ಟಣದಲ್ಲಿ ನೈಸರ್ಗಿಕ ಬಂಡೆಯನ್ನೇ ಮನೆಯ ತಳಪಾಯವನ್ನು ಮಾಡಿಕೊಂಡ ವಿಷಯವನ್ನು ವಿವರಿಸಿದ್ದಾರೆ.[೪೪] ಆ ಮನೆಯು ಪಟ್ಟಣದ ಉತ್ತರಕ್ಕೆ ೬೦೦

ಮೀಟರ್ ದೂರದ ಆನೆಲಾಯದ ಆಗ್ನೇಯದಲ್ಲಿದೆಯೆಂದು ಗುರುತಿಸಿದ್ದಾರೆ. ಇದು ಪ್ರತ್ಯೇಕ ವಸತಿಗೃಹದ ರಚನಾ ವಿನ್ಯಾಸವನ್ನು ಪರಿಚಯಿಸಿದೆ.

ವಾಸುದೇವನ್.ಸಿ.ಎಸ್., ಅವರ 'ಹಂಪಿ ಪರಿಸರದಲ್ಲಿ ವಿಜಯನಗರ ಕಾಲದ ಅಕ್ಕಿಪೇಠೆ. ಎಂಬ ಲೇಖನದಲ್ಲಿ ಕಮಲಾಪುರದಲ್ಲಿದ್ದ ಅಕ್ಕಿ ಪೇಠೆ ಹಾಗು ಕಮಲಾಪುರದ ವಿವಿಧ ದಿಕ್ಕುಗಳಲ್ಲಿದ್ದ ವಿವಿಧ ಕೇರಿಗಳಾದ ಕುಂಬಾಗೇರಿ, ಮೀನಗುಂದಿಗಳು ಇದ್ದುದ್ದನ್ನು ಶಾಸನಾಧಾರಿತವಾಗಿ ವಿವರಿಸಿದ್ದಾರೆ.[೪೫]

ವಾಸುದೇವನ್ ಸಿ.ಎಸ್., ಅವರು 'ವಿಜಯನಗರ ಪಟ್ಟಣದ ಜಲಸಾರಿಗೆ ವ್ಯವಸ್ಥೆ'. ನಗರ ವಿನ್ಯಾಸದಲ್ಲಿ ಸಾರಿಗೆಯು ಪ್ರಮುಖ ಪಾತ್ರವಹಿಸುತ್ತವೆ. ವಿಜಯನಗರಪಟ್ಟಣದಲ್ಲಿ ರಸ್ತೆ ಮತ್ತು ಜಲಸಾರಿಗೆ ಇದ್ದವೆಂಬುದು ಎರಡು ಲೇಖನಗಳಿಂದ ಎಂಬ ಲೇಖನದಲ್ಲಿ ತುಂಗಭದ್ರಾ ನದಿಯಲ್ಲಿ ಹರಿಗೋಲಿನ ಮೂಲಕ ಜನರು ಮತ್ತು ಸರಕು ಸಾಗಾಣಿಕೆ ನಡೆಯುತ್ತಿತ್ತು ಎಂಬುದನ್ನು ವಿವರಿಸಿದ್ದಾರೆ.[೪೬]

ಬಾಲಸುಬ್ರಮಣ್ಯ ಅವರ "ರಾಜ ಪ್ರಾಂಗಣದ ದಾರಿಗಳು" ಲೇಖನದಲ್ಲಿ ವಿಜಯನಗರ ಕಾಲದ ಹಂಪಿ ಪ್ರದೇಶದ ೩೮ ಅರಮನೆಗೆ ತಲುಪುವ ರಸ್ತೆಗಳು ಈ ರಾಜಬೀದಿಯ ಮಾರುಕಟ್ಟೆಗಳಿಗೆ, ದೇವಾಲಯಗಳಿಗೆ, ಮುಂತಾದವುಗಳಿಗೆ ಸೇರಿ ಸಂಪರ್ಕ ಕಲ್ಪಿಸಿತ್ತೆಂದು ಚರ್ಚಿಸಿದ್ದಾರೆ.[೪೭] ಶಿರೂರ ಬಿ.ವ್ಹಿ. ಅವರ "ಹಂಪಿಯ ಶಾಸನೋಕ್ತ ಅಗ್ರಹಾರಗಳು". ಲೇಖನದಲ್ಲಿ ಏಳು ಶಾಸನಗಳ ಮೂಲಕ ಅಗ್ರಹಾರಗಳನ್ನು ಕುರಿತು ಚರ್ಚಿಸಿರುತ್ತಾರೆ.[೪೮]

ವೀಣಾ ಎಂ.ಪಿ. ಅವರ ಮನೆ, ಸಮಾಜ ಮತ್ತು ಸಂಸ್ಕೃತಿ (ಮ್ಯಾಸನಾಯಕರು ಹಾಗೂ ಊರು ನಾಯಕರು ಅಧ್ಯಯನ) ಇವರ ಎಂ.ಫಿಲ್. ಪ್ರಬಂಧದಲ್ಲಿ ಕಮಲಾಪುರ ಮತ್ತು ತಿಮ್ಮಲಾಪುರ ಗ್ರಾಮಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಚರ್ಚಿಸಿದ್ದಾರೆ.[೪೯] ಎರಡು ಗ್ರಾಮಗಳಲ್ಲಿ ಕಂಡುಬರುವ ಮ್ಯಾಸನಾಯಕರು, ಊರನಾಯಕರ ಜೀವನ ಶೈಲಿ, ಮನೆಗಳ ವಿನ್ಯಾಸ, ರಚನೆ ಮತ್ತು ಸಂಸ್ಕೃತಿಗಳನ್ನು ತಿಳಿಸುವುದರೊಂದಿಗೆ ಇವರು ವಾಸಿಸುವ ಓಣಿಯ ನಕ್ಷೆಯನ್ನು ನೀಡಿರುತ್ತಾರೆ.

ಅನುಪಮ ಬಿ, ಅವರ "ಹೊಸಪೇಟೆ ನಗರದ ವರ್ತಕ ಸಮುದಾಯಗಳು : ಚಾರಿತ್ರಿಕ ಅಧ್ಯಯನ". ಎಂಬ ಎಂ.ಫಿಲ್. ಪ್ರಬಂಧದಲ್ಲಿ ಹೊಸಪೇಟೆ ನಗರ ಪ್ರದೇಶದಲ್ಲಿ ವಿಜಯನಗರದಿಂದ ಪ್ರಜಾಪ್ರಭುತ್ವದ ಕಾಲದವರೆಗೆ ವಿವರಿಸಿದ್ದಾರೆ. ಈ ಪ್ರದೇಶದಲ್ಲಿ ಬೆಳೆದು

ಬಂದ ವ್ಯಾಪಾರ ಮತ್ತು ವರ್ತಕರ ಸಂಬಂಧ ಸಮುದಾಯಗಳ ಬಗೆಗೆ ವಿವರಿಸಲಾಗಿದೆ. ವಿಜಯನಗರ ಕಾಲದಲ್ಲಿ ಯಾವ ಯಾವ ದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದು ಅನೇಕ ವರ್ತಕರ ಸಮುದಾಯಗಳ ಸಂಪರ್ಕವನ್ನು ಕುರಿತು ವಿವರಿಸಿದ್ದಾರೆ.[೫೦]

ನಾಜೀಯಾ ಖಾಜಿ, ಅವರ "ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ-ಇಸ್ಲಾಮಿಕ್ ವಾಸ್ತು ಶೈಲಿಯ ಸ್ಮಾರಕಗಳು." ಎಂ.ಫಿಲ್. ಪ್ರಬಂಧದಲ್ಲಿ ವಿಜಯನಗರ ಕಾಲದ ಹಂಪಿ ಪರಿಸರದ ಇಂಡೋ-ಇಸ್ಲಾಮಿಕ್ ಕಟ್ಟಡಗಳ ವಾಸ್ತುಶೈಲಿಯ ಬೆಳವಣಿಗೆಯ ಹಂತಗಳನ್ನು ವಿವರಿಸಿದ್ದಾರೆ.[೫೧]

ಈ ಎಲ್ಲಾ ಕೃತಿಗಳು, ಲೇಖನಗಳು, ಪ್ರಬಂಧಗಳು ಪ್ರಸ್ತುತ ಆಯ್ದುಕೊಂಡಿರುವ ಅಧ್ಯಯನಕ್ಕೆ ಒಂದಲ್ಲ ಒಂದು ವಿಷಯಕ್ಕೆ ಸಂಬಂಧಿಸಿದಂತೆ ಸಂಪೂರ್ಣವಾಗಿ ಅಲ್ಲದಿದ್ದರೂ ಕೆಲವು ಮಾಹಿತಿಗಳನ್ನು ನೀಡುತ್ತವೆ.

## ೧.೫ ಅಧ್ಯಯನದ ವಿಧಾನ

ಯಾವುದೇ ಒಂದು ಸಂಶೋಧನೆಗೆ ಅಧ್ಯಯನದ ಕ್ರಮ ಮುಖ್ಯವಾಗಿರುತ್ತದೆ. ಸಂಶೋಧನೆಯ ವ್ಯವಸ್ಥಿತವಾಗಿ ಮುನ್ನಡೆಸಿಕೊಂಡು ಹೋಗಲು ಪೂರ್ವನಿರ್ಧಾರಿತ ಅಧ್ಯಯನ ಕ್ರಮ ಅನುಸರಿಸಬೇಕು. ಇದರಿಂದಾಗಿ ಒಂದು ವ್ಯವಸ್ಥಿತವಾದ ಸಂಶೋಧನ ಪ್ರಬಂಧವನ್ನು ರಚಿಸಬಹುದು. ಪ್ರಸ್ತುತ ಅಧ್ಯಯನವು ಹಂಪಿ ಪರಿಸರದ ವಸತಿ ನೆಲೆಗಳು ಎಂಬ ಶೀರ್ಷಿಕೆಯನ್ನು ಹೊಂದಿದೆ. ಆಯ್ದುಕೊಂಡ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ನಡೆದಿರುವ ಅಧ್ಯಯನಗಳು ಮತ್ತು ಪ್ರಕಟಿತ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳ ಗ್ರಂಥಸೂಚಿಯನ್ನು ಆಕಾರಾದಿಯಾಗಿ ಸಿದ್ಧಪಡಿಸಿಕೊಂಡು ಮಾಹಿತಿಯನ್ನು ಸಂಗ್ರಹಿಸಿಕೊಳ್ಳುವುದು.

ಪ್ರಸ್ತುತ ಅಧ್ಯಯನಕ್ಕೆ ಹಂಪಿ ಪರಿಸರದಲ್ಲಿನ ವಸತಿನೆಲೆಗಳ ಅವಶೇಷಗಳು ಪ್ರಾಥಮಿಕ ಆಕರಗಳಾಗಿರುವುದರಿಂದ ಅವುಗಳ ಛಾಯಚಿತ್ರಗಳ ಸಂಗ್ರಹಣೆಗೆ ವ್ಯವಸ್ಥಿತವಾದ ವಿಧಾನವನ್ನು ಪೂರ್ವಭಾವಿಯಾಗಿ ಸಿದ್ಧಪಡಿಸಿಕೊಳ್ಳಲಾಯಿತು. ಅಗತ್ಯವಾದ ವಸತಿ ನೆಲೆಗಳ ನಕ್ಷೆಯನ್ನು ತಯಾರಿಸಿಕೊಳ್ಳಲಾಗಿದೆ. ಕೋಟೆಗೋಡೆ, ಬುರುಜು, ಕೋಟೆಬಾಗಿಲು, ಅರಮನೆಯ ಕಟ್ಟಡಗಳು, ಇತರ ಮನೆಗಳ ಕಟ್ಟಡ, ರಸ್ತೆಗಳು, ಬಾವಿಗಳು, ಬಜಾರುಗಳು, ಅಂಗಡಿ ಮಳಿಗೆಗಳು ಇನ್ನೂ ಮುಂತಾದ ಅವಶೇಷಗಳನ್ನು ಹಾಗೂ ಈ ಅಧ್ಯಯನಕ್ಕೆ ಸಂಬಂಧಿಸಿದ ಎಲ್ಲಾ ಕಟ್ಟಡಗಳನ್ನು ರಚನಾ ವಿನ್ಯಾಸ ಮತ್ತು ಅವುಗಳ ತಲನಕ್ಷೆಗಳನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ವಸತಿ ನೆಲೆಗಳ ವರ್ಗೀಕರಣ ಪ್ರತಿ ಕಟ್ಟಡಕ್ಕೆ ಅದರ ನಿಖರವಾದ ಸ್ಥಳ ನಿರ್ದೇಶನವನ್ನು ನೀಡಿ ಪ್ರಬಂಧ ರಚನೆಗೆ ಬಳಸಿಕೊಳ್ಳಲಾಗಿದೆ. ಅದರ ಜೊತೆಗೆ ಅಗತ್ಯವಾದ ಆನುಷಂಗಿಕ ಆಕರಗಳನ್ನು ಸಂಗ್ರಹಿಸಿ ಪ್ರಬಂಧ ರಚನೆಗೆ ಬಳಸಿಕೊಳ್ಳಲಾಗಿದೆ.

## ೧.೬ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ಐದು ಅಧ್ಯಾಯಗಳನ್ನು ಒಳಗೊಂಡಿದೆ. ವಿಷಯಗಳ ವಿಸ್ತಾರ ಮತ್ತು ಚರ್ಚೆಗೆ ಅನುಗುಣವಾಗಿ ಅಧ್ಯಾಯಗಳಲ್ಲಿ ತಕ್ಕಂತೆ ಉಪಶೀರ್ಷಿಕೆಗಳನ್ನು ಅಳವಡಿಸಿಕೊಳ್ಳಲಾಗಿದೆ. ಪ್ರಸ್ತಾವನೆ, ವಿಷಯ ಪ್ರವೇಶ ಅಧ್ಯಯಗಳ ಸಮೀಕ್ಷೆ, ಉದ್ದೇಶ, ವ್ಯಾಪ್ತಿ, ವಿಧಾನ, ಅಧ್ಯಯನ ಸ್ವರೂಪವನ್ನು ಮೊದಲನೆಯ ಅಧ್ಯಾಯವು ಒಳಗೊಂಡಿದೆ. ಹಂಪಿ ಪರಿಸರದ ವಸತಿನೆಲೆಗಳ ಬಗೆಗೆ ವಿವಿಧ ವಿದ್ವಾಂಸರು ಕೈಗೊಂಡ ಅಧ್ಯಯನಗಳ ಸಮೀಕ್ಷೆಯನ್ನು ನೀಡಲಾಗಿದೆ. ಅಧ್ಯಯನದ ಉದ್ದೇಶ ಹಾಗೂ ಮಹತ್ವವನ್ನು ವಿವರಿಸಲಾಗಿದೆ. ಅಧ್ಯಯನದ ವೈಧಾನಿಕತೆ ಮತ್ತು ಸ್ವರೂಪವು ಇಡೀ ಮಹಾಪ್ರಬಂಧದ ರೂಪರೇಷೆಯನ್ನು ಪರಿಚಯಿಸುತ್ತದೆ.

ಎರಡನೆಯ ಅಧ್ಯಾಯ **ಹಂಪಿ ಪರಿಸರ ವಸತಿನೆಲೆಗಳ ಹುಟ್ಟು, ಬೆಳವಣಿಗೆ** ಎಂಬುದಾಗಿದ್ದು ಅದರಲ್ಲಿ ವಸತಿನೆಲೆಗಳ ಪ್ರಾಚೀನತೆ ಮತ್ತು ಚಾರಿತ್ರಿಕ ಹಿನ್ನೆಲೆಗಳನ್ನು ಕುರಿತು ಚರ್ಚಿಸಲಾಗುವುದು. ವಸತಿನೆಲೆಗಳ ಅರ್ಥ, ಹುಟ್ಟು, ರಚನಾ ವಿನ್ಯಾಸ, ಸಾಮಗ್ರಿ ತಂತ್ರಗಾರಿಕೆ, ಲಕ್ಷಣ, ಪ್ರಕಾರ ವರ್ಗೀಕರಣ ಇತ್ಯಾದಿಗಳನ್ನು ಪ್ರಾಗಿತಿಹಾಸ (ನವಶಿಲಾಯುಗ) ಕಾಲದಿಂದ ಮಧ್ಯಯುಗೀನ ಕಾಲದವರೆಗೆ ವಸತಿನೆಲೆಗಳ ಇತಿಹಾವನ್ನು ಕುರಿತು ಇಲ್ಲಿ ಚರ್ಚಿಸಲಾಗುವುದು ಭಾರತದಲ್ಲಿನ ಪ್ರಮುಖ ವಸತಿನೆಲೆಗಳ ಹುಟ್ಟು ಮತ್ತು ಬೆಳವಣಿಗೆಯನ್ನು ಅವಲೋಕಿಸುತ್ತಾ ಕರ್ನಾಟಕದಲ್ಲಿನ ವಸತಿನೆಲೆಗಳ ಇತಿಹಾಸವನ್ನು ವಿವರಿಸಲಾಗುವುದು. ವಸತಿನೆಲೆಗಳು ಮತ್ತು ಭೌಗೋಳಿಕ ಪ್ರಭಾವ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಪ್ರಾಥಮಿಕ ಹಂತದ ನಗರೀಕರಣದಿಂದ ನಗರೀಕರಣದವರೆಗಿನ ವಿವಿಧ ಹಂತಗಳ ಬೆಳವಣಿಗೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗುವುದು.

ಮೂರನೇ ಅಧ್ಯಾಯವು **ಹಂಪಿ ಪರಿಸರದ ವಸತಿ ನೆಲೆಗಳು** ಎಂಬ ಶೀರ್ಷಿಕೆಯನ್ನು ಹೊಂದಿದ್ದು ಅದರಲ್ಲಿ ಹಂಪಿಯ ಭೌಗೋಳಿಕ ಹಿನ್ನೆಲೆಯನ್ನು ಚರ್ಚಿ ಅಲ್ಲಿ ಯಾವ ರೀತಿ ವಸತಿನೆಲೆಗಳ ಬೆಳೆದವು ಮತ್ತು ಅದರಲ್ಲಿ ಭೌಗೋಳಿಕ ಅಂಶಗಳು ಯಾವ ಪಾತ್ರವಹಿಸಿತ್ತು ಎಂದು ಚರ್ಚಿಸಲಾಗುವುದು.

ನಾಲ್ಕನೇ ಅಧ್ಯಾಯದ ಶೀರ್ಷಿಕೆಯು **ಹಂಪಿ ಪರಿಸರದ ನೆಲೆಗಳ ವಿಶ್ಲೇಷಣೆ**. ಇದರಲ್ಲಿ ಹಂಪಿ ಪರಿಸರದಲ್ಲಿ ದೊರೆತ ವಸ್ತು–ಅವಶೇಷಗಳನ್ನು ಬಳಸಿಕೊಂಡು ಅಧ್ಯಯನಕ್ಕೆ ಪೂರಕವಾದ ಅಂಶಗಳನ್ನು ಅಳವಡಿಸಿ ವಿಶ್ಲೇಷಿಸಲಾಗುವುದು. ಐದನೇ ಅಧ್ಯಾಯವು **ಸಮಾರೋಪ**. ಇಡೀ ಅಧ್ಯಯನಗಳ ಸಂಕ್ಷಿಪ್ತ ರೂಪವನ್ನು ಇಲ್ಲಿ ಕೊಡಲಾಗಿದೆ. ಜೊತೆಗೆ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿವುದು. ವಿಷಯಕ್ಕೆ ಅನುಗುಣವಾಗಿ ಅನುಬಂಧದಲ್ಲಿ ಆಕರ ಗ್ರಂಥಗಳು, ನಕ್ಷೆ, ರೇಖಾಚಿತ್ರ ಮತ್ತು ಛಾಯಾಚಿತ್ರಗಳನ್ನು ನೀಡಲಾಗುವುದು.

# ಕೊನೆಟಿಪ್ಪಣಿಗಳು

1. Sundar A., 1997, *Hampi the Ancient Kishkindha – Vanara's Capital*, Srividya Vijayanagara Hampi Heritage Trust Anegodi, Anegondi House N.C. Colony, Hospet
2. ಶ್ರೀನಿವಾಸ ಎಲ್., ೨೦೧೦, ಹಂಪಿ ಪರಿಸರದ ಆದಿಮಾನವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
3. Venkata Ramanayya N., 2002, *Vijayanagara Origin of the City and the Empire,* Asian Educational Services, Chennai (Second Reprint)
4. Mahalingam T.V., 1975, *Administration and Social life and under Vijayanagara,* Part II, Social Life, University of Madras
5. Kathleen D. Morrison., 1995, *Fields of Victory, Vijayanagara and the Course of Intensitication,* No. 53 Contributions of the University of California, Archaeological Reserarch Facilities Berkley
6. ಸೋಮಶೇಖರ ಎಸ್.ವೈ., ೨೦೦೧, ಹಂಪಿ ಬಜಾರುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
7. ವಾಸುದೇವನ್ ಸಿ ಎಸ್., ೨೦೦೧, ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
8. Matthew D. Gallon., 2008, "The Political Economy of Iron in Late Prehistroric South India", *Antiquity,* Vol. 82, Issue 317, September
9. Radhika Lu. Bauer., 2008,"Social Distinctions and Animal Use in the South India Iron Age: Archaeological Evidence from Kadebakele", Northern Karnataka, *Antiquity,* Vol. 82, Issue 317, September

10. Carla M. Sinopoli, Kathleen D. Morrison, Gopal R., 2008,"Late Prehistoric and Early Historic South India : Recent research along the Tungabhadra River, Karnataka", *Antiquity,* Vol. 82, Issue 317, September

11. Namita Sugandi., 2008,"Networks of Intention in a Eripheral Landscape", *Antiquity,* Vol. 82, Issue 317, September

12. ವಾಸುದೇವನ್ ಸಿ.ಎಸ್., ೨೦೧೦, "ಕಡೇಬಾಗಿಲು-ಪ್ರಾಗಿತಿಹಾಸ ಕಾಲದ ನೆಲೆ", (ಸಂ.) ಗೋಪಾಲ್ ಆರ್, 'ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮತ್ತು ಪ್ರದರ್ಶನ ಆವರಣ, ಮೈಸೂರು

13. ವಾಸುದೇವನ್ ಸಿ.ಎಸ್., ೧೯೯೭, "ವಿಜಯನಗರಪಟ್ಟಣ ಮತ್ತು ಅದರ ಉಪನಗರಗಳು", ವಿಜಯನಗರ ಅಧ್ಯಯನ, ಸಂಪುಟ ೩, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

14. ವಾಸುದೇವನ್ ಸಿ.ಎಸ್., ೨೦೦೬, "ವಿಜಯನಗರಪಟ್ಟಣದ ಪ್ರಮುಖರ ಮನೆಗಳು", (ಸಂ.) ದೇವರಕೊಂಡಾರೆಡ್ಡಿ, ಹಂಪಿ ಸಂಪುಟ ಕಲೆ, ಕ್ರೀಡೆ ಮತ್ತು ಕೌಶಲ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

15. ಚಂದ್ರಶೇಖರಶಾಸ್ತ್ರಿ ಎಚ್.ಎಂ., ೨೦೦೬, "ವಿಜಯನಗರದಲ್ಲಿ ಪುರಗಳು", (ಸಂ.) ದೇವರಕೊಂಡಾರೆಡ್ಡಿ, ಹಂಪಿ ಸಂಪುಟ, ಕಲೆ, ಕ್ರೀಡೆ ಮತ್ತು ಕೌಶಲ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

16. ನಾಗರಾಜ್ ಬಿ.ಎಸ್., ೧೯೯೭, "ವಿಜಯನಗರ ಸಾಮ್ರಾಜ್ಯದಲ್ಲಿ ನಗರ ಬೆಳವಣಿಗೆ, ವಿಜಯನಗರ ಅಧ್ಯಯನ ಸಂಪುಟ ೩, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

17. ನರಸಿಂಹಮೂರ್ತಿ ಎ.ವಿ., ೨೦೧೬, "ಪ್ರಾಚೀನ ಕರ್ನಾಟಕದ ನಗರಗಳ ವಿನ್ಯಾಸ", ಕರ್ನಾಟಕದ ಸಾಮಾಜಿಕ ಮತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು, ಸಂಪುಟ ೫,

ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಕಲಾಗ್ರಾಮ ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ ಆವರಣ ಹಿಂಭಾಗ, ಮಲ್ಲತ್ತಹಳ್ಳಿ, ಬೆಂಗಳೂರು

18. ಮೋಹನಕೃಷ್ಣ ಕೆ. ರೈ., ೨೦೧೬, "ಮಧ್ಯಕಾಲಿನ ಕರ್ನಾಟಕದಲ್ಲಿ ನಗರಗಳು ಮತ್ತು ಜನಜೀವನ", ಕರ್ನಾಟಕದ ಸಾಮಾಜಿಕ ಮತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು, ಸಂಪುಟ ೫, ಕುವಂಪು ಭಾಷಾ ಭಾರತಿ ಪ್ರಾಧಿಕಾರ, ಕಲಾಗ್ರಾಮ ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ ಆವರಣ ಹಿಂಭಾಗ, ಮಲ್ಲತ್ತಹಳ್ಳಿ, ಬೆಂಗಳೂರು

19. ಶರಣಬಸಪ್ಪ ಪಿ., ೨೦೦೨, ಕೊಪ್ಪಳ-ಹಂಪಿ ಪ್ರದಶ ಪ್ರಾಗಿತಿಹಾಸಕಾಲದ ಕಲೆ (ವಿಶೇಷವಾಗಿ ಗವಿವರ್ಣ ಹಾಗೂ ಬಯಲುಬಂಡೆ ಚಿತ್ರಗಳನ್ನು ಅನುಲಕ್ಷಿಸಿ) ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

20. Nagaraja B.S., 1985, Urban Ceontres and Urbanzatin Under the Vijayanagara Empire, Unpublished Ph.D. Thesis, Manasagangotri University of Mysore

21. Chandrashekhara Shasthri H.M., 2002, The Vijayanagara Urbanity, Unpublished Ph.D. Thesis, Karnataka Univeristy, Dharwad

22. ಮಹಾದೇವ ಸಿ., ೧೯೯೭, "ವಿಜಯನಗರದಲ್ಲಿ ಅರ್ದೇಗೆಮಾ ಅಥವಾ ಒಂದೆಗೆಮಾ ಪಟ್ಟಣ ಯಾವುದು?", ವಿಜಯನಗರ ಅಧ್ಯಯನ, ಸಂಪುಟ ೩, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

23. ಮಧು ಎಂ.ಎನ್., ೨೦೦೭, ಹೊಸಪೇಟೆ ಪ್ರದೇಶದ ಚಾರಿತ್ರಿಕ ಅಧ್ಯಯನ, ಎಂ.ಫಿಲ್ ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

24. ಶಿವಲೀಲಾ ಕೆ., ೨೦೦೩, ಕಮಲಾಪುರದ ಶಾಸನಗಳು ಮತ್ತು ದೇವಾಲಯಗಳು, ಎಂ.ಫಿಲ್, ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

25. ಅಕ್ತರ್ ಖಾನಂ ಹೆಚ್.ಎಸ್., ೨೦೧೨, ವಿಜಯನಗರ ಪಟ್ಟಣದಲ್ಲಿ ಮುಸ್ಲಿಮ್ ಸಂಸ್ಕೃತಿ ಎಂ.ಫಿಲ್, ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

26. ಶಿವಲೀಲಾ ಕೆ. ಲೋಕೇಶ್., ೨೦೦೮, ಕಮಲಾಪುರ: ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ

27. Narasimhaiah B, 1988,"A Decade of Excavation at Vijayanagara (Hampi), (Ed.) Dikshit G.S, *Early Vijayanagara Studies in its History and Culture*, B.M.S. Memorial Foundation Bangalore

28. Kotraiah C.T.M, 1978, "The Metropolis of the Vijayanagara Empire" (Ed.) Basava Raja, *The Vijayanagara Urbanity* A Series Issued by the Committee of National Symposium on Urban Development, Hospet

29. Joshi S.K., 1978, "The Defence System of Vijayanagara City" (Ed.) Basava Raja, *The Vijayanagara Urbanity* A Series Issued by the Committee of Natinal Symposium on Urban Development Hospet

30. Ghatapanadi S.G., 1978, "Development of Towns in the Vijayanagara Times", (Ed.) Basava Raja, *The Vijayanagara Urbanity* A Series Issued by the Committee of National Symposium on Urban Development, Hospet

31. Krishnan K.G., 1986,"A Note on the Urbanisation of Vijayanagara" (Ed.) Subrahamanyam. R, (Ed.) Krishana Sastry V.V, Venkata Ramanayya N. Commemoration Volume, *Journal of the Andhra Historical Research society,* Vol. XXXVIII, Part II, The Government of Andhra Pradesh, Hyderabad

32. Chandrashekhara Shastri H.M., Basavaraj N. Akki., "Genesis and Growth of Puras in Vijayanagara City", *Quarterly Journal of the Mythic Society*, Vol. XCII, July to Dec 2001, No. 3-4

33. Nagaraja Rao, M.S., "Excavations in The Sacred Centre", *Vijayanagara Progress of Research* 1979-83, Directorate of Archaeology and Museums, Mysore

34. Kathleen D. Morrison., "The Vijayanagara Metropolian Survey, Preliminary Investigation", *Vijayanagara Progress of Research*, 1984-87, Directorate of Archaeology and Museums, Mysore

35. Channabassapa S. Patil., "Further Epigraphical Reference to City Gate and Watch Towars of Vijayanagara", *Vijayanagara Progress of Research*, 1984-87, Directorate of Archaeology and Museums, Mysore

36. Channabasappa S. Patil., "Malige-Kupa-Arama at Malapanagudi", *Vijayanagara Prgress of Research, 1984-87*, Directorate of Archaeology and Museums, Mysore

37. John M. Fritz., "The Plan of Vijayanagara and Silpasastras", *Vijayanagara Progress of Research 1984-87*, Dircetorate of Archaeology and Museums, Mysore

38. Berard K Means., "A Small Settlement Near the Vijayanagara", *Vijayanagara Progress of Research 1987-88*, Directorate of Arhaeology and Museums, Mysore

39. Carla M. Sinopoli., "A Vijayanagara Period Road System", *Vijayanagara Progress of Research, 1987-88,* Directorate of Archaeology and Museums, Mysore

40. Sundar A., 1988, *New Light on Religious Trends in Anegondi Region During Vijayanagara Period,* (Ed) Dikshit G.s, "Early Vijayanagara Studies in its History & Culture", B.M.S. Memorial Foundation, Bangalore

41. Vasundara Filliozat., 1988,, *Hampi-Vijayanagara* (Ed) Dikshit G.S, "Early Vijayanagara Studies in its History and Culture" B.M.S. Memorial Foundation, Bangalore

42. Agrawal R.C., 2010, "Excavating Krsnadevaraga palace of Hampi", (Ed.) Shrinivas Ritti, Subbarayala Y, *Vijayanagara and Krsnadevaraya*, ICHR, Southern Regional Centre, Bangalore

43. Vasudevan C.S., 2010, "Krsnadevaraya and his Contribution to the Capital City Vijayanagarapattana" (Ed.) Shrinivas Ritti, Subbarayalu Y, *Vijayanagara and Krsnadevaraya* ICHR, Southern Regional Centre, Bangalore

44. Paul Cope-Faulkner., "Homes from Bedrock" *Vijayanagara Progress of Research,* 1988-91, Directorate of Archaeology and Museums, Mysore

45. ವಾಸುದೇವನ್ ಸಿ.ಎಸ್., ೨೦೧೧, "ಹಂಪಿ ಪರಿಸರದಲ್ಲಿ ವಿಜಯನಗರ ಕಾಲದ ಅಕ್ಕಿಪೇಠೆ", ಶಾಸನ ಅಧ್ಯಯನ, ಸಂಪುಟ ೮, ಸಂಚಿಕೆ ೩, ಜುಲೈ–ಡಿಸೆಂಬರ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

46. ವಾಸುದೇವನ್ ಸಿ.ಎಸ್., ೨೦೦೬, "ವಿಜಯನಗರಪಟ್ಟಣದ ಜಲಸಾರಿಗೆ ವ್ಯವಸ್ಥೆ", (ಸಂ.) ದೇವರಕೊಂಡಾರೆಡ್ಡಿ, ಹಂಪಿ ಸಂಪುಟ, ಕಲೆ, ಕ್ರೀಡೆ ಮತ್ತು ಕೌಶಲ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

47. ಬಾಲಸುಬ್ರಮಣ್ಯ., ೨೦೦೫, "ರಾಜಪ್ರಾಂಗಣದ ದಾರಿಗಳು", (ಸಂ.) ದೇವರಕೊಂಡಾರೆಡ್ಡಿ, ಹಂಪಿ ಸಂಪುಟ, ಕಲೆ, ಕ್ರೀಡೆ ಮತ್ತು ಕೌಶಲ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

48. ಶಿರೂರ. ಬಿ.ವ್ಹಿ., ೨೦೦೬, "ಹಂಪಿಯ ಶಾಸನೋಕ್ತ ಅಗ್ರಹಾರಗಳು", ವಿಜಯನಗರ ಅಧ್ಯಯನ ಸಂಪುಟ.೧೧, ಪ್ರಾಚ್ಯವಸ್ತು ಮತ್ತು ಸಂಗ್ರಾಲಯಗಳ ನಿರ್ದೇಶನಾಲಯ, ಮೈಸೂರು

49. ವೀಣಾ ಎಂ.ಪಿ., ೧೯೯೫, ಮನೆ ಸಮಾಜ ಮತ್ತು ಸಂಸ್ಕೃತಿ (ಮ್ಯಾಸನಾಯಕರ ಹಾಗೂ ಊರನಾಯಕರ ಅಧ್ಯಯನ), ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

50. ಅನುಪಮ ಬಿ., ೨೦೦೯, ಹೊಸಪೇಟೆ ನಗರದ ವರ್ತಕ ಸಮುದಾಯಗಳು, ಚಾರಿತ್ರಿಕ ಅಧ್ಯಯನ, ಎಂ.ಫಿಲ್. ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ

51. ನಾಜೀಯಾ ಖಾಜಿ., ೨೦೦೭, ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ–ಇಸ್ಲಾಮಿಕ್ ವಾಸ್ತುಶೈಲಿಯ ಸ್ಮಾರಕಗಳು, ಎಂ.ಫಿಲ್ ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಅಧ್ಯಾಯ ೨

## ವಸತಿನೆಲೆಗಳ ಹುಟ್ಟು ಮತ್ತು ಬೆಳವಣಿಗೆ

೨.೧ ವಸತಿನೆಲೆಗಳ ಹುಟ್ಟು ಮತ್ತು ಬೆಳವಣಿಗೆ

೨.೨ ವಸತಿನೆಲೆಗಳ ಲಕ್ಷಣಗಳು

೨.೩ ವಸತಿನೆಲೆಗಳ ರಚನಾ ವಿನ್ಯಾಸ

# ಅಧ್ಯಾಯ ೨

# ವಸತಿ ನೆಲೆಗಳ ಹುಟ್ಟು ಮತ್ತು ಬೆಳವಣಿಗೆ

## ೨.೧ ವಸತಿ ನೆಲೆಗಳ ಹುಟ್ಟು ಮತ್ತು ಬೆಳವಣಿಗೆ

ಮಳೆ, ಗಾಳಿ, ಬಿಸಿಲು ಮತ್ತು ಕಾಡುಪ್ರಾಣಿಗಳಿಂದ ರಕ್ಷಣೆಯನ್ನು ಪಡೆಯಲು ನೈಸರ್ಗಿಕ ಗುಹೆಗಳು, ಕಲ್ಲಾಸರೆಗಳು. ದೊಡ್ಡ ಮರದಪೊಟರೆ, ಮುಂತಾದವುಗಳಲ್ಲಿ ಮಾನವನು ವಾಸಿಸತೊಡಗಿದ. ಯಾವುದೇ ಬಗೆಯ ರಚನೆಗಳನ್ನು ಮಾಡದೇ ಪ್ರಕೃತಿದತ್ತ ಸ್ಥಳಗಳನ್ನು ತನ್ನ ವಾಸಸ್ಥಾನವಾಗಿಸಿಕೊಂಡನು. ಅಂತಹ ಪ್ರಾರಂಭಿಕ ಕಾಲಘಟ್ಟದಿಂದ ಕಾಲಾನುಕ್ರಮದಲ್ಲಿ ತಾನು ವಿಕಾಸ ಹೊಂದುತ್ತಾ ತನ್ನ ವಸತಿನೆಲೆಗಳಲ್ಲಿಯೂ ಸುಧಾರಣೆಗಳನ್ನು ತಂದು ಹಂತಹಂತವಾಗಿ ತನ್ನ ವಸತಿನೆಲೆಯ ವಿಕಸನಕ್ಕೆ ಕಾರಣೀಭೂತನಾದನು. ನೈಸರ್ಗಿಕ ಕಾರಣಗಳಿಂದ ಗುಡಿಸಲು, ಇಟ್ಟಿಗೆಯ ಮನೆ, ಕಲ್ಲಿನ ಮನೆ, ನಿರ್ಮಿಸುವುದರೊಂದಿಗೆ ವಸತಿನೆಲೆಯಾದ ಕುಗ್ರಾಮದಿಂದ ನಗರೀಕರಣದವರೆಗೆ ತನ್ನ ವ್ಯಾಪ್ತಿ ವಿಸ್ತರಿಸಿದನು. ಹಳೇಶಿಲಾಯುಗ ಕಾಲದಿಂದ ಮಾನವನ ವಸತಿನೆಲೆಗಳು ಕಂಡುಬರುತ್ತವೆ. ಮಧ್ಯಪ್ರದೇಶದ ಭೂಪಾಲದಿಂದ ೫೦ ಕಿ.ಮೀ. ದೂರದಲ್ಲಿರುವ ಭೀಮ್‌ಭೆಟ್ಕಾದಲ್ಲಿ ಸುಮಾರು ಇನ್ನೂರಕ್ಕೂ ಅಧಿಕ ನೈಸರ್ಗಿಕ ಗುಹೆ ಮತ್ತು ಕಲ್ಲಾಸರೆಗಳಿವೆ[೧]. ಅವುಗಳಲ್ಲಿ ಹಳೇಶಿಲಾಯುಗ ಕಾಲದ ಮಾನವನು ತಯಾರಿಸಿದ ಅನೇಕ ಉಪಕರಣಗಳಾದ ಕಲ್ಲಿನ ಕೈಗೊಡಲಿ, ಹೆರೆಚಕ್ಕೆ, ಚಕ್ಕೆಗಳು, ಇನ್ನೂ ಮುಂತಾದ ಅನೇಕ ಉಪಕರಣಗಳು ದೊರಕಿರುವುದರಿಂದ ಅದನ್ನು ಕೈಗಾರಿಕಾ ಕೇಂದ್ರ ಎಂದು ಗುರುತಿಸಲಾಗಿದೆ.[೨] ಇದರೊಂದಿಗೆ

ಬಂಡೆಗಳ ಮೇಲೆ ಶಿಲಾಯುಗ ಕಾಲದ ವರ್ಣಚಿತ್ರಗಳಿವೆ. ಮಹಾರಾಷ್ಟ್ರದ ನೆವಾಸದ ಆಗ್ನೇಯಕ್ಕೆ ಇರುವ ಅರಾವಲಿ ಬೆಟ್ಟದಲ್ಲಿ ಮಧ್ಯಶಿಲಾಯುಗದ ನೆಲೆಗಳಲ್ಲಿ ಸ್ಫಟಿಕದ ಮಣಿಗಳು, ವಿವಿಧ ರೀತಿಯ ಅಗೇಟ್, ಜಾಸ್ಪರ್, ಚಾಲ್ಸಿಡಣಿಯಂತಹ ಅರೆಪ್ರಶಸ್ತ ಕಲ್ಲುಗಳಿಂದ ತಯಾರಿಸಿದ ಚಕ್ಕೆಗಳು, ವೃತ್ತಾಕಾರ, ತ್ರಿಕೋನಾಕಾರ, ನೀಳ ಬ್ಲೇಡ್, ಮುಂತಾದ ಉಪಕರಣಗಳು ದೊರಕಿದ್ದು ಅವುಗಳನ್ನು ಆಧರಿಸಿ ಆ ನೆಲೆಯು ಕೈಗಾರಿಕೇಂದ್ರ ಎಂದು ಗುರುತಿಸಲಾಗಿದೆ. ಬೆಣಚುಕಲ್ಲಿನಿಂದ ಮಾಡಿದ ವೃತ್ತಾಕರದ ಸುತ್ತಿಗೆ, ಮಚ್ಚು ರೀತಿಯ ಅಪರೂಪದ ದ್ವಿಮುಖ ಬ್ಲೇಡುಗಳು ಸಹ ದೊರಕಿವೆ.[೩] ಅರಾವಲಿ ಬೆಟ್ಟದ ಪಶ್ಚಿಮಕ್ಕೆ ಲೂನಿ ನದಿ ದಂಡೆಯ ಮೇಲೆ ಪೂರ್ಣರೂಪದ ವಿವಿಧ ಬಗೆಯ ಶಿಲಾಯುಧ ಉಪಕರಣಗಳು ಗುಪ್ಪೆಯಾಗಿ ದೊರತಿವೆ. ವಿವಿಧ ಬಗೆಯ ಉಪಕರಣಗಳು ಕಂಡುಬಂದಿವೆ. ಉತ್ತರದ ವಾಯವ್ಯ ಭಾಗದಲ್ಲಿ ಕಂಡುಬರುವ "ಸಂಗಾಓ" (Sangao) ಪ್ರದೇಶದ ಗುಹೆಯಲ್ಲಿ ಬೆಣಚು ಕಲ್ಲಿನ ಉಪಕರಣಗಳು ದೊರಕಿವೆ. ಇಲ್ಲಿಯ ಭೌಗೋಳಿಕ ಲಕ್ಷಣಗಳು ಮುಂದೆ ಅರಾವಲಿ ಪ್ರದೇಶವರೆಗೂ ಮುಂದುವರಿದಿರುವುದರಿಂದ ಅಲ್ಲಿಯೂ ಸಹ ಒಂದೇ ಶೈಲಿಯ ಉಪಕರಣಗಳು ದೊರೆಕಿವೆ.[೪] ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯಲ್ಲಿ ಹಳೇಶಿಲಾಯುಗದ ನೆಲೆಗಳು ದೊರಕಿವೆ. ಅಲ್ಲಿ ಕಲ್ಲಿನ ಕೈಗೊಡಲಿ ಕಾರ್ಖಾನೆಯು ದೊರತಿದೆ. ೪೦% ಸ್ಫಟಿಕ ಶಿಲೆಯ ಉಪಕರಣಗಳು ಅಲ್ಲಿ ಕಂಡುಬಂದಿವೆ. ಇದೇ ಜಿಲ್ಲೆಯ ಚಿತ್ತೂರಿನಲ್ಲಿ ಮಧ್ಯಶಿಲಾಯುಗಕ್ಕೆ ಸೇರಿದ ವಿವಿಧ ರೀತಿಯ ಹೆರೆಯುವ ಕಲ್ಲುಗಳು ದೊರತಿವೆ. ಕಡಪಾ ಮತ್ತು ಪ್ರಕಾಶಂ ಜಿಲ್ಲೆಯಲ್ಲಿ ಆದಿಹಳೇಶಿಲಾಯುಗದ ಗುಹೆಗಳಲ್ಲಿ ನೆಲೆಗಳು ದೊರೆತಿದೆ. ಮುಖ್ಯವಾಗಿ ಕರ್ನೂಲ್‌ನ ಜಿಲ್ಲೆಯಲ್ಲಿರುವ ಮುಚ್ಚಟ್ಲ ಚಿಂತಾಮಣಿ ಗುಹೆ (Muchchatla Chintamani) ಎಂಬ ಗ್ರಾಮದ ಸಮೀಪದ ಗುಹೆಯಲ್ಲಿ ಕೈಗಾರಿಕಾ ಕೇಂದ್ರವನ್ನು ಗುರುತಿಸಿಲಾಗಿದ. ಅಲ್ಲಿ ಮೂಳೆ ಮತ್ತು ಕಲ್ಲಿನಿಂದ ತಯಾರಿಸಲಾದ ಆಯುಧಗಳು ದೊರಕಿವೆ. ನಾಗಾರ್ಜುನಕೊಂಡ ಪ್ರದೇಶದಲ್ಲಿ ಬ್ಲೇಡ್ ಮತ್ತು ಬ್ಯೂರೀನ್ (Burin) ಉತ್ಪದನಾ ಕೇಂದ್ರ ಕಂಡುಬಂದಿದೆ.[೫] ಅದರಂತೆಯೇ ತಮಿಳುನಾಡು ಪ್ರದೇಶದಲ್ಲಿರುವ ಅತ್ತಿರಂಪಾಕ್ಕಂನಲ್ಲಿ ಕೈಗೊಡಲಿ (Handaxe) ತಯಾರಿಕಾ ಕೇಂದ್ರ ಪತ್ತೆಯಾಗಿದೆ. ಮಧ್ಯಶಿಲಾಯುಗದಲ್ಲಿ ಉತ್ಪಾದಿಸಲಾದ ಕಲ್ಲಿನ ಚಕ್ಕೆ, ಬ್ಲೇಡ್, ಹೆರಚುವ ಚಕ್ಕೆ, ಇತ್ಯಾದಿ ವಿವಿಧ ಉಪಕರಣಗಳು ತಮಿಳುನಾಡಿನ ಗುಡಿಯಂ ಮತ್ತು ಅತ್ತಿರಂಪಾಕ್ಕಂ ಪ್ರದೇಶಗಳ ಕಂಡುಬಂದಿವೆ.[೬]

ಕರ್ನಾಟಕದಲ್ಲಿಯೂ ಅನೇಕ ನೆಲೆಗಳು ಪತ್ತೆಯಾಗಿದ್ದು ಅವುಗಳಲ್ಲಿ ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ಹುಣಸಗಿ ಹಳ್ಳದಲ್ಲಿರುವ ನೆಲೆಯು ಒಂದಾಗಿದೆ. ಹುಣಸಗಿ ಹಳ್ಳವು ಕೃಷ್ಣಾ ನದಿಯ ಉಪನದಿ. ಈ ಗ್ರಾಮದಲ್ಲಿ ೨೫ ನೆಲೆಗಳು ಪತ್ತೆಯಾಗಿವೆ. ನೈಸರ್ಗಿಕ

ಕಲ್ಲಿನ ಮೊಟರೆ ಅಥವಾ ಕಲ್ಲಾಸರೆಯನ್ನು ಅಂದಿನ ತಮ್ಮ ವಾಸದ ನೆಲೆಯನ್ನಾಗಿ ಮಾಡಿಕೊಂಡಿದ್ದರು. ಅಲ್ಲಿ ಕೈಗೊಡಲಿ, ಮಚ್ಚು, ಸುತ್ತಿಗೆ, ಭರ್ಜಿ/ಮೊನೆ, ಹೆರೆಯುವ ಚಕ್ಕೆ ಮುಂತಾದ ಶೇದಿಕಲ್ಲಿನಿಂದ ತಯಾರಿಸಿದ ಉಪಕರಣಗಳು ದೊರೆತಿವೆ. ಮತ್ತೊಂದು ನೆಲೆಯಲ್ಲಿ ಕೆಮ್ಮಣ್ಣಿನ ಚಿಕ್ಕ ಚಿಕ್ಕ ಹೆಂಟೆಗಳು ಕಂಡುಬಂದಿವೆ. ಅದು ಅಂದಿನ ಜನರಿಗೆ ಬಣ್ಣದ ಜ್ಞಾನವಿತ್ತು ಎಂಬುದನ್ನು ಸೂಚಿಸುತ್ತದೆ.[೭] ಹುಣಸಿಗಿ ಮತ್ತು ಬೀಮ್‌ಬೇಟ್ಕಾ ಪ್ರದೇಶಗಳಲ್ಲಿ ಅನೇಕ ನೆಲೆಗಳು ಒಂದಕ್ಕೊಂದು ಹತ್ತಿರವಿದ್ದು ಅವುಗಳ ಸಾಂದ್ರತೆಯು ಅಧಿಕವಾಗಿದೆ.[೮]

ಗುಲಬರ್ಗಾ ಜಿಲ್ಲೆಯಲ್ಲಿರುವ ನೆಲೆ ಯಡಿಯಾಪುರ ಮತ್ತು ಫತೇಪೂರ ಗ್ರಾಮಗಳಲ್ಲಿ ಬಿಳಿ ಬಣ್ಣದ ಗಷ್ಟು ಶೇದಿಶಿಲೆ ಮತ್ತು ಜೇಡಿಮಣ್ಣಿನ ಉಪಕರಣಗಳು ಕಂಡುಬಂದಿವೆ. ಕೆಲವು ಭಾಗಗಳ ಗ್ರಾನೈಟ್–ನೀಸ್ ಶಿಲೆಯ ಮತ್ತು ಗರಸು ಕಣಗಳ ಉಪಕರಣಗಳಾದ ಕೈಗೊಡಲಿಗಳು, ದೊಡ್ಡ ಚಕ್ರ, ಮಚ್ಚು, ಸೀಳುಗತ್ತಿ, ಪತ್ತೆಯಾಗಿವೆ.[೯]

ಬಾಗಲಕೋಟೆ ಜಿಲ್ಲೆಯ ಅನಗವಾಡಿ ಗ್ರಾಮದ ಹಳ್ಳದ ದಂಡೆಯಲ್ಲಿ ಗಷ್ಟು ಮರಳುಕಲ್ಲಿನ ಕ್ವಾರ್ಟಜೈಟ್ ಕಲ್ಲಿನ ಕೈಗೊಡಲಿ, ಮಚ್ಚು, ಹೆರೆಯುವ ಚಕ್ಕೆ ಮುಂತಾದ ಉಪಕರಣಗಳು ಕಂಡುಬಂದಿವೆ.[೧೦] ಬಳ್ಳಾರಿಯಿಂದ ಈಶಾನ್ಯಕ್ಕೆ ೫ ಕಿ.ಮೀ. ದೂರದ ಬೆಟ್ಟದಲ್ಲಿ "ಸಣ್ಣರಸಮ್ಮ" ನೆಲೆಯಲ್ಲಿ ಕ್ವಾರ್ಟ್ಜ್ ಕಲ್ಲಿನ ಮತ್ತು ಡೋಲೊರೈಟ್ ಕಲ್ಲಿನ ಚಕ್ಕೆಗಳು ಮೊನಚುಗಳು, ಹೆರೆಯುವ ಚಕ್ಕೆಗಳು, ತಿರುಳಗಲ್ಲು ಚಕ್ಕೆಗಳು ದೊರಕಿವೆ.[೧೧] ಮೇಲಿನವುಗಳಲ್ಲದೇ ಭಾರತದಲ್ಲಿ ಹಳೆಯ ಶಿಲಾಯುಗದ ನೆಲೆಗಳು ಪತ್ತೆಯಾಗಿವೆ. ಅವುಗಳೆಂದರೆ ಮಧ್ಯಪ್ರದೇಶದ ಭೀಮ್‌ಬೆಟ್ಕಾ, ಉತ್ತರಪ್ರದೇಶದ ಲಲಿತಪುರ, ಮಹಾರಾಷ್ಟ್ರದ ಚಿರ್ಕಿ ಮತ್ತು ಕರ್ನಾಟಕದ ಅನಗವಾಡಿ.[೧೨]

## ಸೂಕ್ಷ್ಮ ಶಿಲಾಯುಗ

ಆದಿ, ಮಧ್ಯ ಮತ್ತು ಅಂತ್ಯ ಹಳೇಶಿಲಾಯುಗ ಕಾಲಘಟ್ಟದ ನಂತರದ ಸೂಕ್ಷ್ಮಶಿಲಾಯುಗ ಕಾಲದಲ್ಲಿಯೂ ಸಹ ಮಾನವನು ಖಾಯಂ ಆಗಿಲ್ಲದಿದ್ದರೂ ತಾತ್ಕಾಲಿಕ ವಸತಿಗಳಲ್ಲಿ ಇದ್ದ ಕುರುಹುಗಳು ಲಭ್ಯವಾಗಿವೆ. ಸೂಕ್ಷ್ಮ ಶಿಲಾಯುಗದ ಕಾಲದ ಜನರು ಬೇಟೆಯಲ್ಲಿ ಪ್ರಾವಿಣ್ಯತೆಯನ್ನು ಹೊಂದಿದ್ದರು ಎಂಬುದನ್ನು ಅವರು ತಯಾರಿಸಿರುವ ಆಯುಧಗಳಿಂದ ತಿಳಿಯಬಹುದು. ಬೇಟೆಯಾಡಲು ಚಿಕ್ಕ ಆಯುಧಗಳನ್ನು ತಯಾರಿಸಿ ಕಿರುಗಾತ್ರದ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಸಾಮಾನ್ಯವಾಗಿ ಮೀನು ಇವರ ನಿತ್ಯ ಆಹಾರವಾಗಿತ್ತು ಹಾಗೂ ಅದರ ಜೊತೆಗೆ ಕಾಡು ಪ್ರಾಣಿ ಮತ್ತು ಸಸ್ಯಗಳು ಆಹಾರದ ಒಂದು ಭಾಗವಾಗಿದ್ದವು.[೧೩] ಇವರು ಗುಹೆ ಮತ್ತು ಕಲ್ಲಾಸರೆಗಳಲ್ಲಿ ವಾಸಿಸುತ್ತಿದ್ದರು. ಅಂತಹ ಸ್ಥಳಗಳಲ್ಲಿ

ಅವರು ರಚಿಸಿರುವ ವರ್ಣಚಿತ್ರಗಳು ದೊರಕಿದ್ದು ಅದರಿಂದ ಅವರ ಕಲೆಯ ಕೈಚಳಕ ತಿಳಿಯಬಹುದಾಗಿದೆ.

ರಾಜಸ್ಥಾನದ ಬಾಗೋರದಲ್ಲಿ ಸೂಕ್ಷ್ಮಶಿಲಾಯುಗದ ನೆಲೆಯನ್ನು ಶೋಧಿಸಲಾಗಿದೆ. ಈ ನೆಲೆಯಲ್ಲಿ ಗುಡಿಸಲು ಮತ್ತು ರಸ್ತೆಯನ್ನು ಹೋಲುವ ಕುರುಹುಗಳು ದೊರಕಿವೆ. ಕುರಿ, ಆಡು, ಹಸು, ಜಿಂಕೆ, ಹಂದಿ, ನರಿ, ಮುಂತಾದ ಪ್ರಾಣಿಗಳ ಎಲಬುಗಳು ಸಹ ಈ ನೆಲೆಯಲ್ಲಿ ದೊರೆತಿವೆ.[೧೪] ಇಲ್ಲಿನ ಜನರು ಗುಡಿಸಲನ್ನು ಕಟ್ಟಲು ಸುತ್ತಲೂ ಕಲ್ಲುಗುಂಡುಗಳನ್ನು ಇಟ್ಟಿರುವುದು ವಿಶೇಷ. ಗೋಡೆಯನ್ನು ಸಮತಟ್ಟಾಗಿ ಕಟ್ಟುತ್ತಿದ್ದರು. ಇಲ್ಲಿ ಬೆಣಚು ಕಲ್ಲಿನಿಂದ ತಯಾರಿಸಲಾದ ರುಬ್ಬುಕಲ್ಲು, ಬೀಸುಕಲ್ಲು, (Querns and Rubbers) ಕುಟ್ಟಣಿ ವಸ್ತುಗಳು ದೊರಕಿವೆ. ಕೈಯಿಂದ ಮಾಡಿದ ಮಡಿಕೆಗಳ ಮೇಲೆ ಚಿತ್ರಗಳನ್ನು ಬಿಡಿಸಿರುವರು. ಈ ಪ್ರದೇಶದಲ್ಲಿ ತಾಮ್ರದ ಆಯುಧಗಳು ಮತ್ತು ಕೆಲವು ಆಭರಣಗಳು ದೊರೆತಿವೆ. ಇಲ್ಲಿ ವಿಶೇಷವಾಗಿ ತ್ರಿಕೋನ ಆಕಾರದ ಬಾಣಗಳಿಗೆ ರಂಧ್ರಗಳಿವೆ. ಈ ರೀತಿಯ ಬಾಣಗಳಿಗೆ ಕಟ್ಟಿಗೆಗೆ ಪ್ರಾಣಿಯ ತೊಗಲಿನ ದಾರವನ್ನು ಮಾಡಿ ಅಥವಾ ಗಿಡದ ಬಳ್ಳಿಯನ್ನು ಉಪಯೋಗಿಸಿ ರಂಧ್ರದ ಮುಂಖಾತರ ಬಾಣವನ್ನು ಕಟ್ಟಿ ಉಪಯೋಗಿಸುತ್ತಿದ್ದರು ಎಂದು ತರ್ಕಿಸಲಾಗಿದೆ.[೧೫]

ಮಧ್ಯಪ್ರದೇಶದ ಅಲಹಾಬಾದ್-ಪ್ರಥಾಪಘರ್ ಪ್ರದೇಶದ ಸರೈನಹರ ಪ್ರದೇಶಗಳಲ್ಲಿ ಸುಟ್ಟ ಹೆಂಟೆ ದೊರಕಿದೆ ಹಾಗೂ ರಚನೆಯ ಮಾದರಿ ನಿರ್ಮಿತಿಯಲ್ಲಿ ಗುಡಿಸಿಲಿನ ನಾಲ್ಕು ಮೂಲೆಗಳಲ್ಲಿ ಕುಳಿಗಳಿವೆ. ಹಲವಾರು ಒಲೆಗಳು ಮತ್ತು ಅದರಲ್ಲಿ ಪ್ರಾಣಿಗಳನ್ನು ಸುಟ್ಟು ತಿಂದ ಎಲುಬುಗಳ ಅವಶೇಷಗಳು ಸಹ ದೊರೆತಿವೆ ಹಾಗೂ ಈ ಒಲೆಗಳ ಹತ್ತಿರದಲ್ಲಿ ಶವಗಳನ್ನು ಹೂಳಲಾಗಿದ್ದು. ಇಲ್ಲಿ ಮುಖ್ಯವಾಗಿ ಚರ್ಟ್ (Chert) ಮತ್ತು ಸ್ಫಟಿಕ ಶಿಲೆಯ ಕೈಗಾರಿಕಾ ಕೇಂದ್ರ ದೊರೆತಿದೆ.[೧೬] ಪಶ್ಚಿಮ ಬಂಗಾಲದ ಬೀರ್‌ಬಾನ್‌ಪುರ್‌ದಲ್ಲಿ ಅನೇಕ ಕಲ್ಲಾಸರೆಯ ವಸತಿನೆಲೆಗಳು ಕಂಡುಬಂದಿವೆ. ಅಲ್ಲಿ ಉಪಕರಣಗಳನ್ನು ತಯಾರಿಸುವ ಕಚ್ಚಾ ವಸ್ತುಗಳು ಎಲುಬು, ಇದ್ದಿಲು, ಬೆಣಚುಕಲ್ಲಿನ ಉಪಕರಣಗಳು ಅಲ್ಲದೇ ಸಮತಟ್ಟಾದ ಪ್ರದೇಶದಲ್ಲಿ ಗುಡಿಸಲನ್ನು ನಿರ್ಮಿಸಿದುದರ ಕುರುಹಾಗಿ ಕುಳಿಗಳು ಕಂಡುಬಂದಿವೆ. ಇವು ಕೈಗಾರಿಕೆ ಹಾಗೂ ವಸತಿನೆಲೆಗಳಾಗಿವೆ.[೧೭] ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ರೇಣಿಗುಂಟ ಪ್ರದೇಶದಲ್ಲಿ ಸೂಕ್ಷ್ಮಶಿಲಾಯುಗದ ಕೈಗಾರಿಕಾ ಕೇಂದ್ರವನ್ನು ಶೋಧಿಸಲಾಗಿದೆ. ಇಲ್ಲಿ ಬ್ಲೇಡ್, ರಂಧ್ರ ಮಾಡುವ ಉಪಕರಣ, ಬಾಣದ ತುದಿ, ತ್ರಿಕೋನಾಕಾರದ ಆಯುಧ, ಹೆರೆಯುವ ಆಯುಧಗಳು ಗುಂಪು ಗುಂಪಾಗಿರುವ ಕೈಗಾರಿಕಾ ಕೇಂದ್ರಗಳನ್ನು ಗುರುತಿಸಲಾಗಿದೆ.[೧೮] ಇದೇ ರೀತಿಯ ವಸತಿನೆಲೆಗಳು ಮತ್ತು ಕೈಗಾರಿಕಾ ಕೇಂದ್ರಗಳು ನಾಗಾರ್ಜುನಕೊಂಡದಲ್ಲಿ ಪತ್ತೆ ಹಚ್ಚಲಾಗಿದೆ.[೧೯] ತಮಿಳುನಾಡಿನ ತಿರುನೆಲ್ವೇಲಿಯಲ್ಲಿ,

ಕೆಂಪು ಬಣ್ಣ ಹೊಂದಿದ ಚರ್ಟ್ ಮತ್ತು ಬೆಣಚುಕಲ್ಲಿನ ಉಪಕರಣಗಳ ತಯಾರಿಕೆಯ ಮಣ್ಣಿನ ಪ್ರದೇಶದಲ್ಲಿ ಕೈಗಾರಿಕೆ ಕೇಂದ್ರಗಳು ಪತ್ತೆಯಾಗಿವೆ.[೨೦]

ಕರ್ನಾಟಕದಲ್ಲಿ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನವಶಿಲಾಯುಗದ ನೆಲೆಗಳು ದೊರೆತಿರುವ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಗ ಕಾಲದ ಅವಶೇಷಗಳು ಸಹ ಜೊತೆಯಲ್ಲಿಯೇ ದೊಕಿವೆ. ಇಲ್ಲಿ ವಸತಿನೆಲೆಗಳಾದ ಕಲ್ಲಾಸರೆಗಳ ಸಮೀಪ ವ್ಯವಸಾಯವನ್ನು ಪ್ರಾರಂಭಿಸಿದ ಕುರುಹುಗಳು ಪತ್ತೆಯಾಗಿವೆ. ಇಲ್ಲಿನ ಕೈಗಾರಿಕಾ ಕೇಂದ್ರಗಳಲ್ಲಿ, ವಿವಿಧ ಬಗೆಯ ಆಯುಧಗಳು ಹಾಗೂ ಉಪಕರಣಗಳು ನೆಲೆಗಳಲ್ಲಿ ದೊರೆಯುತ್ತವೆ. ಮೈಸೂರು ಜಿಲ್ಲೆಯ ಜಾಲಹಳ್ಳಿಯಲ್ಲಿ ಗುಂಪು ಗುಂಪಾಗಿರುವ ಬೆಣಚು ಕಲ್ಲಿನ ಕೈಗಾರಿಕಾ ಕೇಂದ್ರಗಳು ಪತ್ತೆಯಾಗಿದೆ. ಅದರಲ್ಲಿ ರಂಧ್ರ ಮಾಡುವ ಬಾಣದ ತುದಿ, ಅರ್ಧ ಚಂದ್ರಾಕಾರದ ಉಪಕರಣ, ಹೀಗೆ ಮುಂತಾದ ಸಾಮಗ್ರಿಗಳು ದೊರಕಿವೆ. ಅದೇ ರೀತಿಯಾಗಿ ಬೆಂಗಳೂರಿನ ವಾಯವ್ಯಕ್ಕಿರುವ ಕಿಬ್ಬನಹಳ್ಳಿಯಲ್ಲಿ ವಿಶೇಷವಾಗಿ "D" ಆಕಾರದ ಬಾಣಗಳು ಹಾಗೂ ಬೆಣಚುಕಲ್ಲಿನ ಆಯುಧಗಳು ಅಧಿಕ ಸಾಂದ್ರತೆಯಲ್ಲಿ ಕಂಡುಬಂದಿವೆ.[೨೧] ಉತ್ತರ ಭಾರತದಲ್ಲಿ ಸೂಕ್ಷ್ಮಶಿಲಾಯುಗದ ನೆಲೆಗಳಲ್ಲಿ ಕುರುಹುಗಳು ಪೂರ್ಣವಾಗಿ ದೊರೆತರೆ ದಕ್ಷಿಣದಲ್ಲಿ ಕೆಲವೊಂದು ಮಾತ್ರ ಅಲ್ಲಲ್ಲಿ ದೊರಕಿವೆ.

## ನವಶಿಲಾಯುಗ

ನವಶಿಲಾಯುಗದಲ್ಲಿ ಮಾನವನು ತನ್ನ ಕ್ರಿಯಾ ಚಟುವಟಿಕೆಯಲ್ಲಿ ಅಭಿವೃದ್ಧಿ ಹೊಂದುತ್ತಾ ಒಂದು ಪ್ರದೇಶದಲ್ಲಿ ವಾಸ ಮಾಡಲು ಪ್ರಾರಂಭಿಸಿದನು. ಜೊತೆಗೆ ಕೃಷಿಯನ್ನು ಪ್ರಾರಂಭಿಸಿದನು. ನಯಗೊಳಿಸಿದ ಕಲ್ಲಿನ ಆಯುಧಗಳನ್ನು ತಯಾರಿಸುವ ಕ್ರಮವನ್ನು ರೂಢಿಸಿಕೊಂಡು ದಿನ ಬಳಕೆಗೆ ಅಗತ್ಯವಿರುವ ಮಡಿಕೆಗಳನ್ನು ಚಕ್ರದಿಂದ ತಯಾರಿಸುತ್ತಿದ್ದರು ಹಾಗೂ ಅವುಗಳ ಮೇಲೆ ಅಲಂಕರಣೆಗೆ ಚಿತ್ರಗಳನ್ನು ಬಿಡಿಸುತ್ತಿದ್ದರು. ಕುರಿ, ಮೇಕೆ, ಹಸು, ನಾಯಿ ಮುಂತಾದ ಪ್ರಾಣಿಗಳನ್ನು ಪಳಗಿಸಿ ಜೀವನೋಪಾಯ ಹಾಗೂ ರಕ್ಷಣೆಯಾಗಿ ಸಾಕುತ್ತಿದ್ದರು. ಭಾರತದಾದ್ಯಂತ ನವಶಿಲಾಯುಗ ಕಾಲದ ನೆಲೆಗಳು ದೊರಕಿದ್ದು ಅವರ ವೈವಿಧ್ಯಮಯ ಜೀವನ ಮತ್ತು ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಾಗಿದೆ.

ಭಾರತದ ಶ್ರೀನಗರದಿಂದ ೨೪ ಕಿ.ಮೀ. ಈಶಾನ್ಯಕ್ಕಿರುವ ಜೀಲಂ ನದಿ ದಂಡೆಯ ಮೇಲಿರುವ ಬೂರ್ಜಹೋಮ್ ನೆಲೆಯಲ್ಲಿ ನೆಲಮಟ್ಟದ ಕೆಳಗೆ ಚೌಕಾಕಾರದ ಮತ್ತು ವೃತ್ತಾಕಾರದ ಗುಡಿಸಲುಗಳಿವೆ. ಗುಡಿಸಲುಗಳನ್ನು ನಿರ್ಮಿಸಲು ಭೂಮಿಯನ್ನು ಕೊರೆದು

ಕಟ್ಟಿಗೆಗಳನ್ನು ಛತ್ತಿನಭಾಗದ ಆಧಾರಕ್ಕೆ ಭೂಮಿಯಲ್ಲಿ ಕಂಬಗಳನ್ನು ನೆಡುತ್ತಿದ್ದರು. ಆ ನೆಟ್ಟಿರುವ ಕುಳಿಗಳು ದೊರಕಿವೆ.[೨೨] ಈ ಕುಳಿಗಳ ವ್ಯಾಸ ೨.೭ ಮೀ. ಅದರ ಅಗಲ ೪.೬ ಮೀ ಮತ್ತು ಆಳ ೪ ಮೀಟರ್. ಮನೆಯ ಗೋಡೆಯನ್ನು ಮಣ್ಣಿನಿಂದ ಮತ್ತೆ ಗಟ್ಟಿಗೊಳಿಸಲಾಗುತ್ತಿತ್ತು. ಮನೆಯ ಒಂದು ಬೀದಿಯಲ್ಲಿ ಇದ್ದಿಲು, ಬೂದಿ, ಬುಗುರೆಯಾಕಾರದ ಕಲ್ಲು (Conical) ೧ ರಿಂದ ೧.೫ ಮೀಟರ್ ಉದ್ದ ೨೦ ರಿಂದ ೪ ಸೆಂ.ಮೀ. ಅಗಲವಿರುವ ಕಲ್ಲು ದೊರಕಿದೆ.[೨೩] ಮತ್ತೊಂದು ಪ್ರದೇಶದಲ್ಲಿ ಮನೆಯನ್ನು ಕಟ್ಟಲು ಮಣ್ಣಿನ ಇಟ್ಟಿಗೆಗಳನ್ನು ಬಳಸಿ ಕಟ್ಟಿರುವ ಕುರುಹುಗಳಿವೆ. ಇಟ್ಟಿಗೆಯನ್ನು ಕೆಂಪು ಬಣ್ಣದ ಮಣ್ಣಿನಿಂದ ತಯಾರಿಸುತ್ತಿದ್ದರು. ಒಂದು ಮನೆಯ ಸುತ್ತ ೪೫ ಕುಳಿಗಳು (Post-Holes) ದೊರಕಿವೆ. ಅಲ್ಲದೇ ಒಂದು ಚೌಕಾಕಾರದ ಮನೆಯ ಛತ್ತನ್ನು (upright-stones) ಮಣ್ಣು ಮತ್ತು ಕಲ್ಲನ್ನು ಬಳಸಿ ಕಟ್ಟಲಾಗಿದೆ. ಮನೆಯ ಗೋಡೆಯ ಮೇಲೆ ಬೇಟೆಯಾಡುವ ಚಿತ್ರಗಳನ್ನು ಬಿಡಿಸಲಾಗಿದೆ.[೨೪] ಕೆಲವು ಮನೆಗಳ ಕುರುಹುಗಳ ಪ್ರಕಾರ ಛತ್ತಿನ ಮೇಲೆ ಮರದ ತೊಗಟೆ ಮತ್ತು ಹುಲ್ಲನ್ನು ಹಾಕುತ್ತಿದ್ದರು. ಕೈಯಿಂದ ಹಾಗೂ ಚಕ್ರದಿಂದ ಮಾಡಿದ ಮಡಿಕೆಗಳು ಮತ್ತು ಮನೆಯ ನಿತ್ಯ ಮನೆ ಬಳಕೆಯ ವಸ್ತುಗಳು ದೊರೆತಿವೆ.[೨೫] ಮಡಿಕೆಗಳು ಬೂದು ಮತ್ತು ಕಪ್ಪು ಮಿಶ್ರಿತ ಕೆಂಪು ಬಣ್ಣ ಹೊಂದಿವೆ. ಮಡಿಕೆಯ ಸುತ್ತಲೂ ಅಡ್ಡ ಗೆರೆಗಳು ಮತ್ತು ಮೇಲೆ ಉದ್ದ ಗೆರೆಗಳ ಅಲಂಕರಣೆಯಿದೆ.[೨೬] ಈ ನೆಲೆಯಲ್ಲಿ ನಾಯಿ, ತೋಳ, ಕಾಡುಮೇಕೆ, ಇತ್ಯಾದಿ ಪ್ರಾಣಿಗಳ ಅವಶೇಷಗಳು ದೊರೆತಿದೆ. ಹಸು, ಕುರಿ, ಮೇಕೆಗಳ ಜೊತೆಗೆ ನಾಯಿಯನ್ನು ಮುಂತಾದ ಪ್ರಾಣಿಗಳನ್ನು ಸಾಕುತ್ತಿದ್ದರು ಎಂಬುದು ಅಲ್ಲಿ ದೊರೆತ ನಾಯಿಯ ಶವದ ಅವಶೇಷದಿಂದ ತಿಳಿದುಬಂದಿದೆ.[೨೭]

ಕಾಶ್ಮೀರದಿಂದ ೧೬ ಕಿ.ಮೀ. ದೂರದ ಈಶಾನ್ಯಕ್ಕೆ, ಇತ್ತಿಚಿನ ಉತ್ಖನನದ ವರದಿಯಂತೆ, ನವಶಿಲಾಯುಗ ಕಾಲದಲ್ಲಿ ಕಾಶ್ಮಿರಗಳು ಕುಶಲಕರ್ಮಿ ಜನಾಂಗಕ್ಕೆ ಸೇರಿದವರಾಗಿದ್ದರು ಹಾಗೂ ನೇಕಾರಿಕೆಯಲ್ಲಿ ಮತ್ತು ಇತರ ಕೌಶಲ್ಯಗಳಲ್ಲಿ ವೃತ್ತಿಪರತೆ ಹೊಂದಿದ್ದರು. ಇಲ್ಲಿನ ಜನರು ಅವರ ಸಮಕಾಲಿನವರಾದ ಸಿಂಧೂ ನಾಗರೀಕತೆಯ ಜನರೊಂದಿಗೆ ವ್ಯಾಪಾರ ವಹಿವಾಟು ಹೊಂದಿದ್ದರು. ಕ್ರಿಪೂ. ೩೦೦೦ ದಿಂದ ೧೦೦೦ವರೆಗಿನ ಕಾಲಘಟ್ಟದ ಬೂರ್ಜಹೊಮ್ ಸಂಸ್ಕೃತಿಯು ಆಹಾರ ಸಂಗ್ರಹಣೆಯಿಂದ ಆಹಾರ ಉತ್ಪಾದನೆಯ ಕಾಲಘಟ್ಟದವರೆಗಿನ ವಿವಿಧ ಹಂತಗಳನ್ನು ತೋರಿಸಿಕೊಟ್ಟಿವೆ. ಎಲುಬುಗಳಿಂದ ತಯಾರಿಸಿದ ಸೂಜಿ, ಹತ್ತಿ, ಉಣ್ಣೆ ಮತ್ತು ಇತ್ತರೆ ಬಟ್ಟೆಗಳು ಅವಶೇಷಗಳು ದೊರಕಿದ್ದು ಇವು ಬಟ್ಟೆ ತಯಾರಿಸುವ ಕೈಗಾರಿಕಾ ಕೇಂದ್ರವಾಗಿತ್ತು ಎಂದು ಗಣಿಸಲಾಗಿದೆ. ಬೂರ್ಜಹೊಮ್ ಜನರು ಪ್ರತಿಕೂಲ ಹವಾಮಾನಗಳಿಗೆ ಹೊಂದಿಕೊಂಡಿದ್ದರೆಂಬುದು ಅವರು ಶೋಧಸಿದ ನೆಲಮಟ್ಟದಲ್ಲಿ ನಿರ್ಮಿಸಿಕೊಂಡಿರುವ ವಾಸದ

ಕುಳಿಗಳು ಮತ್ತು ಉಣ್ಣೆಯ ಬಟ್ಟೆಗಳಿಂದ ದೃಢಪಟ್ಟಿವೆ. ದ್ವಿಮುಖ ಮೊನೆಯುಳ್ಳ ಸೂಜಿಗಳು (Picks) ಕಂಡಿಕೆ (Spindle whorls) ಭರ್ಜಿಯ ಮೊನೆಗಳು ತಾಮ್ರದಬಾಣದ ಮೊನೆ, Celts ಮತ್ತು ಚಾಕುವಿನ ಅಲಗು (Knife blade) ಮುಂತಾದ ಅತ್ಯಾಧುನಿಕ ಉಪಕರಣಗಳು ದೊರೆತಿವೆ. ಮಣ್ಣಿಗಳು, ಸುಟ್ಟಮಣ್ಣಿನ ಬಳೆಗಳು ನೆರೆಯ ಪಾಕಿಸ್ತಾನ, ಟಿಬೆಟ್, ಮತ್ತು ಹಿಮಾಲಯ ತಪ್ಪಲಿನ ಪ್ರದೇಶಗಳೊಂದಿಗೆ ವಾಣಿಜ್ಯ ಸಂಬಂಧ ಹೊಂದಿದ್ದರು ಎಂದು ಸೂಚಿಸುತ್ತದೆ. (http://google.com//newsstand//s CBlwvr_uoDU) ಜಮ್ಮು ಮತ್ತು ಕಾಶ್ಮೀರ ರಾಜ್ಯದ ಪುಲ್ವಾಮ (Pulwama) ಜಿಲ್ಲೆಯ ಗುಫಕ್ರಾಲ್ (Gufkral) ಶ್ರೀನಗರದ ಆಗ್ನೆಯಕ್ಕೆ ೪೧ ಕಿ.ಮೀ. ದೂರದಲ್ಲಿದೆ. ಇಲ್ಲಿ ವೃತ್ತಾಕಾರ ಮತ್ತು ಚೌಕಾಕಾರವಾದ ಮನೆಗಳ ಕುರುಹುಗಳು ಪತ್ತೆಯಾಗಿವೆ. ಇಲ್ಲಿ ೩.೮೦ ಸೆಂ.ಮೀ. ದಿಂದ ೧.೫೦ ಸೆಂ. ಮೀ. ಅಳತೆಯ ವಿಶಾಲ ಗುಡಿಸಲುಗಳ ನೆಲವನ್ನು ಕೆಂಪು ಮಣ್ಣಿನಿಂದ ಗಟ್ಟಿಗೊಳಿಸುತ್ತಿದ್ದರು.

ಒಂದು ಗುಡಿಸಿಲಿನಲ್ಲಿ ಎರಡು ಕೊಠಡಿಗಳಿದ್ದು ಒಂದರಲ್ಲಿ ಚೌಕವಾದ ಮತ್ತು ವೃತ್ತಾಕಾರದ ಹಸಿ ಮಣ್ಣಿನ ಒಲೆಯು ದೊರಕಿದೆ. ಅವುಗಳ ಅಗಲ ೯೩ ಸೆಂ.ಮೀ. ಆಳ ೩೦ ಸೆಂ.ಮೀ. ಇಲ್ಲಿ ಬೂದಿ ಮತ್ತು ಉರುಟುಕಲ್ಲುಗಳು (Pebbles) ದೊರೆತಿವೆ. ಪ್ರಾಯಶಃ ಬೇಟೆಯಾಡಿ ತಂದ ಪ್ರಾಣಿಗಳನ್ನು ಈ ಒಲೆಯಲ್ಲಿ ಸುಡುತ್ತಿದ್ದರು. ಒಲೆಗಳು ಯಾವಾಗಲೂ ಮನೆಯ ಹೊರ ಪಕ್ಕದಲ್ಲಿ ಇರುತ್ತಿತ್ತು. ಇವರು ಗೋಧಿ, ಜವೆಗೋಧಿ, ಅಕ್ಕಿ ಮತ್ತು ಕಾಳುಗಳನ್ನು ಬೆಳೆಯುತ್ತಿದ್ದರು ಎಂದು ಪ್ರಾಕ್ತನಶಾಸ್ತ್ರಜ್ಞರು ಅಭಿಪ್ರಾಯಿಸಿದ್ದಾರೆ.[೨೮]

ವಿಂಧ್ಯಾ ಕಣಿವೆಯಲ್ಲಿ ೪೦ ನವಶಿಲಾಯುಗ ನೆಲೆಗಳನ್ನು ಗುರುತಿಸಲಾಗಿದೆ. ಕೊಲ್ಡಿಹವಾ, ಮಹರ್‌ಘರ್, ಬೇಲನ್ ನದಿಯ ಮೇಲಿನ ಚೊಪಾನಿ–ದಿಬ್ಬ ಹಾಗೂ ಅಲಹಬಾದ್‌ನಲ್ಲಿ ೩೦ ಗುಡಿಸಲಿನ ಕುರುಹುಗಳಿವೆ. ಗುಡಿಸಲಿನ ಗೋಡೆಯ ಮಣ್ಣನ್ನು ಮೆತ್ತಿ ಮೇಲೆ ಬಂಬೂಗಳನ್ನು ಜೋಡಿಸಿ ಹುಲ್ಲಿನ ಹೊದಿಕೆಯಿಂದ ಕಟ್ಟುತ್ತಿದ್ದರು. ಈ ನೆಲೆಯಲ್ಲಿ ಸುಟ್ಟ ಮಣ್ಣು, ಮಡಿಕೆ ಚೂರು, ಬೀಸುವಕಲ್ಲು, ಅರೆಯುವ ಕಲ್ಲು, ಕವಣಿ ಗುಂಡು, ಕಲ್ಲಿನ ಆಯುಧ (Celts) ಎಲುಬಿನ ಬಾಣಗಳು, ಮಣ್ಣಿನ ಮಣಿಗಳು ಮತ್ತು ಪ್ರಾಣಿಯ ಮೂಳೆಗಳು ದೊರೆತಿವೆ.

ಇಲ್ಲಿ ಹಸುಗಳ ಗೊರಸುಗಳ (Hoof) ಪಡಿಯಚ್ಚು ದೊರಕಿವೆ. ಅದರ ಅಂದಾಜಿನಂತೆ ಗಮನಿಸಿದಾಗ ಸುಮಾರು ೪೦–೬೦ ಹಸುಗಳಿದ್ದವು ಎಂದು ಗಣಿಸಲಾಗಿದೆ. ಅಲ್ಲಿ ದೊರೆತ ಎಲುಬುಗಳಿಂದ ಹಸು, ಕುರಿ, ಮೇಕೆ, ಕುದುರೆ, ಜಿಂಕೆ, ಕಾಡುಹಂದಿ ಮತ್ತು ಇತರ ಪ್ರಾಣಿಗಳಿದ್ದವು. ಈ ನೆಲೆಯಲ್ಲಿ ಭತ್ತದ ಹೊಟ್ಟು ಮಡಿಕೆಯಲ್ಲಿ ದೊರೆತಿದೆ. (*Oryzanivera –*

ಅಕ್ಕಿ).[೨೯] ಗಂಗಾ ನದಿಯ ಎಡದಂಡೆಯ ಮೇಲೆ ಚಿರಾಂದ ಇದೆ. ಇಲ್ಲಿಯೂ ಸಹ ಬಂಬೂಗಳನ್ನು ಬಳಸಿ ವೃತ್ತಾಕಾರ ಮತ್ತು ಚೌಕಾಕಾರದ ಗುಡಿಸಲನ್ನು ಮಣ್ಣಿನಿಂದ ಮೆತ್ತಿ ನಿರ್ಮಿಸಿದ ಪುರಾವೆಗಳಿವೆ. ಇಲ್ಲಿ ದೊರೆತ ಮನೆಯ ನಿತ್ಯೋಪಯೋಗಿ ವಸ್ತುಗಳಾದ ಬೀಸುವ ಕಲ್ಲು, ಕುಟ್ಟಾಣಿ (Convex cutting edge) ಪಿಪಾಯಿ (Triangular or plain with a rounded butt) ಮಡಿಕೆಗಳು, ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆಗಳು, ಚಮಚ, ಬಟ್ಟಲುಗಳು ದಪ್ಪ ಚಾಚಿನ ಚಿತ್ರಿತ (Lipped Bowls) ಮಡಿಕೆಗಳು ಅವರ ದೈನಂದಿನ ಆಹಾರ ಕ್ರಮದ ಮೇಲೆ ಬೆಳಕು ಚೆಲ್ಲಿದೆ. ಗೋಧಿ, ಬಾರ್ಲಿ, ಮಸುರ ಬೀಜ (Lentils Suoh) ಹೆಸರು ಕಾಳು (Moog Masur) ಬಠಾಣಿ (Pea) ಮುಂತಾದ ಬೆಳೆಗಳನ್ನು ತಮ್ಮ ಆಹಾರಕ್ಕೆ ಉಪಯೋಗಿಸುತ್ತಿದ್ದರು.[೩೦] ಉತ್ತರಪ್ರದೇಶದ ಮೆಹರ್‌ಘರ್‌ನಲ್ಲಿ ನವಶಿಲಾಯುಗದ ಅವಶೇಷಗಳನ್ನು ಪತ್ತೆಯಾಗಿದೆ. ಇಲ್ಲಿಯೂ ಸಹ ವೃತ್ತಾಕಾರದ ಗುಡಿಸಿಲಿನಲ್ಲಿ ಕುಳಿಗಳು ಸುತ್ತಲೂ ಇರುವುದು ಶೋಧವಾಗಿದೆ. ಅದರ ಜೊತೆಗೆ ಹಸುಗಳ ದೊಡ್ಡಿಯಲ್ಲಿ ಸುತ್ತಲೂ ಕುಳಿಗಳು ದೊರಕಿವೆ. ಅಲ್ಲಿ ಗಟ್ಟಿಯಾಗಿರುವ ಹಸುವಿನ ಗೊರಸಿನ ಕುರುಹುಗಳಿವೆ. ಇವರು ವಿವಿಧ ರೀತಿಯ ಮಡಿಕೆಗಳನ್ನು ತಯಾರಿಸುತ್ತಿದ್ದರು. ಮಡಿಕೆಯಲ್ಲಿ ಭತ್ತದ ಹೊಟ್ಟು ದೊರೆತಿರುವುದರಿಂದ ಇವರು ಭತ್ತ ಬೆಳೆಯುತ್ತಿದ್ದರೆಂದು ದೃಢಪಟ್ಟಿದೆ.[೩೧]

ಅಸ್ಸಾಂ–ದೌಜಲಿ ಪ್ರದೇಶದ ನವಶಿಲಾಯುಗದ ನೆಲೆಯಲ್ಲಿ ಬೀಸುವಕಲ್ಲು, ಅರೆಯುವ ಕಲ್ಲು, ಹೆಚ್ಚಿನ ಸಂಖ್ಯೆಯಲ್ಲಿ ಬೂದು ಬಣ್ಣದ ಮಡಿಕೆಗಳು ದೊರೆತಿವೆ.[೩೨] ಇವರು ವ್ಯವಸಾಯವನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸ್ಥಳಾಂತರಿಸುವ ಪದ್ಧತಿಯನ್ನು ತಿಳಿದಿದ್ದರು (Jhum cultivation).[೩೩] ಈ ರೀತಿಯ ವ್ಯವಸಾಯ ಕ್ರಮವು ಉಳಿದ ಪ್ರದೇಶದಲ್ಲಿ ಕಂಡುಬರುವುದಿಲ್ಲ. ಆಂಧ್ರಪ್ರದೇಶದ ನಾಗಾರ್ಜುನಕೊಂಡದಲ್ಲಿ ನವಶಿಲಾಯುಗದ ನೆಲೆಯಲ್ಲಿ ವೃತ್ತಾಕಾರದ ಗುಡಿಸಲುಗಳನ್ನು ಕಟ್ಟಲಾಗಿದೆ. ಅವುಗಳ ಅಳತೆಯು ೩.೬ ರಿಂದ ೬ ಅಡಿಗಳು ಕುಳಿಗಳಿವೆ. ಬಾಣ, ಬ್ಲೇಡ್, ಎಲುಬಿನ ಆಯುಧ ಭರ್ಚಿ, ಮುಂತಾದ ಅನೇಕ ಬಗೆಯ ಆಯುಧಗಳು ಹಾಗೂ ಕೈಯಿಂದ ಮತ್ತು ಚಕ್ರದಿಂದ ಮಾಡಿದ ಬೂದು ಬಣ್ಣದ ಮಡಿಕೆಗಳಿವೆ.[೩೪] ಅವುಗಳಲ್ಲಿ ಬೂದು, ಕೆಂಪು, ಬಣ್ಣದ ಮಡಿಕೆಗಳು ಮತ್ತು ಕಪ್ಪು ಹಾಗೂ ಕ್ರಿಮ್ ಬಣ್ಣವನ್ನು ಹಚ್ಚಿದ ಸುಟ್ಟ ಮಡಿಕೆಗಳು ಸೇರಿವೆ.[೩೫] ಈ ಮಡಿಕೆಗಳ ಮೇಲೆ ಗೆರೆಗಳು ಮತ್ತು ಎಲೆಯ ರೀತಿಯ ಚಿತ್ರಗಳನ್ನು ಬಿಡಿಸಲಾಗಿದೆ.[೩೬] ಇಲ್ಲಿ ಒಲೆಗಳ ಸುಟ್ಟಮಣ್ಣು ದೊರೆತಿದೆ. ವಿವಿಧ ರೀತಿಯ ಆಟಿಕೆ ವಸ್ತುಗಳು, ಮತ್ತು ಜಿಂಕೆಯ ಶವಗಳು ಕಂಡುಬಂದಿವೆ.[೩೭] ಆಂಧ್ರಪ್ರದೇಶದ ಈಶಾನ್ಯ ಭಾಗದಲ್ಲಿರುವ ಮಧುರಾವಡ, ಪರದೆಸಿಪಾಲೆಂ, ಬೊಥೆದಿವಲಸ ಮುಂತಾದ ನೆಲೆಗಳಲ್ಲಿ ಎರಡು

ರೀತಿಯ ಮನೆಗಳು ಕಂಡುಬಂದಿವೆ. ಅವುಗಳು ೧. ಗುಂಪು ಗುಂಪಾಗಿ ಕಟ್ಟಿದ ಮನೆಗಳು ಅಂದರೆ ಅಕ್ಕಪಕ್ಕದಲ್ಲಿಯೇ ಕಟ್ಟಿದ ಮನೆಗಳು ಮತ್ತು ೨. ಹರಡಿಕೊಂಡಿರುವ ಮನೆಗಳು ಅಂದರೆ ಒಂದೇ ಪ್ರದೇಶದಲ್ಲಿ ಬೇರೆ ಬೇರೆ ಭಾಗದಲ್ಲಿ ಕಟ್ಟಿದ ಮನೆಗಳು ಸಾಮಾನ್ಯವಾಗಿ ಇಲ್ಲಿ ವೃತ್ತಾಕಾರದ ಮನೆಗಳು ಇದ್ದು, ಅವುಗಳು ಅಗಲ ೩ ಮೀ. ಮತ್ತು ೫ ಮೀ. ಅಗಲವಾಗಿದೆ. ಈ ಅಳತೆಯು ಸುಮಾರು ೮ ರಿಂದ ೩೦ ಮನೆಗಳಲ್ಲಿ ಕಂಡುಬಂದಿದೆ.

ಮನೆಯ ಒಳಗೆ ನೆಲವನ್ನು ಕಲ್ಲುಗಳಿಂದ ಗಟ್ಟಿಗೊಳಿಸಲಾಗಿದೆ. ಮನೆ ಬಳಕೆಯ ವಸ್ತುಗಳಾದ ಬೀಸುವಕಲ್ಲು, ರುಬ್ಬುವಕಲ್ಲು, ಮುಂತಾದವುಗಳ ನಯವಿಲ್ಲದ ತಿಳಿಕೆಂಪು ಬಣ್ಣದ ಮತ್ತು ಹೊಳಪುಳ್ಳ ಬೂದು ಬಣ್ಣದ ಮಡಿಕೆಗಳು ಜೊತೆಗೆ ವಿವಿಧ ರೀತಿಯ ಮಡಿಕೆಗಳು ಕಂಡುಬಂದಿವೆ. ತಿಳಿಕೆಂಪು ಬಣ್ಣದ ಮಡಿಕೆಗಳನ್ನು ಕಡಿಮೆ ಶಾಖದಲ್ಲಿ ಸುಟ್ಟಿದ್ದು, ಅದರ ಮೇಲೆ ಗೀರುಚಿತ್ರಗಳಿವೆ. ಕಾರ್ನೇಲಿನ್ (Carnelian) ವೃತ್ತಾಕಾರ ಮಣಿಯು ಗೋಳಾಕಾರ (Spherical), ಉದ್ದ, ಬ್ಯಾರಲ್, ಸಿಲಿಂಡರ್ ಆಕಾರದ ಮಣಿಗಳು ಆಭರಣದ ವಸ್ತುಗಳಾಗಿ ಕಂಡುಬಂದಿವೆ.[೩೮]

ತಮಿಳುನಾಡಿನ ಪಯ್ಯಂಪಲ್ಲಿಯಲ್ಲಿರುವ ನವಶಿಲಾಯುಗದ ನೆಲೆಯಲ್ಲಿ ಅಂಡಾಕಾರ (Oval), ವೃತ್ತಕಾರ ಮತ್ತು ಆಯತಾಕಾರದ ಮನೆಗಳನ್ನು ಕಟ್ಟಿದ್ದರು. ಮನೆಯನ್ನು ಕಡಿಮೆ ತಗ್ಗಾಗಿ ಹಾಗೂ ಇಳಿಜಾರು ರೀತಿಯಲ್ಲಿ ಕಟ್ಟಲಾಗಿದೆ. ನೆಲವನ್ನು ಕುಟ್ಟಿ ಕುಟ್ಟಿ ಗಟ್ಟಿಗೊಳಿಸಲಾಗಿದ್ದು, ಮನೆಯ ಸುತ್ತಲೂ ಬಂಬೂಗಳನ್ನು ನೆಟ್ಟಿರುವ ಕುಳಿಗಳಿವೆ. ಇಳಿಜಾರು ರೀತಿಯ ಮನೆಯ ಛತ್ತು ಶಂಕುವಿನ ಆಕಾರದಲ್ಲಿದೆ. ಮಳೆಯ ನೀರನ್ನು ಸಂಗ್ರಹಿಸಲು ದೊಡ್ಡ ದೊಡ್ಡ ಕಲ್ಲುಗಳನ್ನು ನೆಟ್ಟಿದ್ದರು.[೩೯] ರಾಗಿ, ಜೋಳ, ಹುಳ್ಳಿ, (*Sorghum vulgare, Dolichosital histoius, Vrali*) ಮತ್ತು ವಿವಿಧ ರೀತಿಯ ಭತ್ತವನ್ನು ಇವರು ಬೆಳೆಯುತ್ತಿದ್ದರು. ಚಳಿಗಾಲದಲ್ಲಿ ಬೆಳೆಯುವ ಭತ್ತವನ್ನು ಯಾವುದೇ ರೀತಿಯ ನೀರಿನ ಸಹಾಯವಿಲ್ಲದೆ ಬೆಳೆಯುತ್ತಿದ್ದರು. ಇವರು ಪೊದೆ, ಕಂಟಿಗಳು ಬೆಳೆದಿರುವ ಬೆಟ್ಟದಲ್ಲಿ ನೆಲೆಸಿದ್ದರು. ಹಸು, ಮೇಕೆ, ಕುರಿಗಳನ್ನು ಸಾಕುತ್ತಿದ್ದರು.[೪೦]

ಕರ್ನಾಟಕದ ನವಶಿಲಾಯುಗದ ನೆಲೆಗಳು ಇಂತಿವೆ: ಕೊಡೆಕಲ್, ತೆಕ್ಕಲಕೋಟೆ, ಮಸ್ಕಿ, ತೆರದಾಳ, ಟೀ ನರಸೀಪುರ, ಸಂಗನಕಲ್ಲು, ಕಪಗಲ್, ಹಳ್ಳೂರ್, ಬ್ರಹ್ಮಗಿರಿ, ಮತ್ತು ಹೆಮ್ಮಿಗೆ ಇತ್ಯಾದಿ.[೪೧] ಮೈಸೂರು ಜಿಲ್ಲೆಯ, ಟೀ ನರಸೀಪುರ ತಾಲೂಕಿನಲ್ಲಿ ಹೆಮ್ಮಿಗೆಯು ಕಾವೇರಿ ನದಿಯ ಬಲ ದಂಡೆಯ ಮೇಲಿದೆ.[೪೨] ಇಲ್ಲಿ ಮಣ್ಣಿನಿಂದ ಕಟ್ಟಿದ ಅನೇಕ ಮನೆಗಳು ಹಾಗೂ ಅದರಲ್ಲಿ ಕುಳಿಗಳಿವೆ. ಮನೆ ಬಳಕೆಯ ವಸ್ತುಗಳಾದ ಮಡಿಕೆಗಳು ಗೋಳಾಕಾರ, ಕೆಲವು ಕಂಠ

ಭಾಗವನ್ನು ತಿದ್ದಿದ ರೀತಿಯ ಬಟ್ಟಲುಗಳು, ಕಂಠ ಭಾಗವನ್ನು ಹೊಂದಿದ ಅಗಲವಾದ ಬುಟ್ಟಿಯಾಕಾರದ ಮಡಿಕೆಗಳು, ಕೈಯಿಂದ ಮಾಡಿದ ಮಡಿಕೆಗಳು ಮತ್ತು ಕಡಿಮೆ ಶಾಖದಲ್ಲಿ ಸುಟ್ಟಿರುವ ಮಡಿಕೆಗಳು, ಕೆಂಪು ಬಣ್ಣದಿಂದ ಚಿತ್ರ ಬಿಡಿಸಿದ ಮಡಿಕೆಗಳು ಸುಟ್ಟ ಕೆಂಪು ಬಣ್ಣದ ಮಡಿಕೆಗಳು, ಬೂದು ಬಣ್ಣದ ಮತ್ತು ಕಪ್ಪು ಬಣ್ಣದ ಮಡಿಕೆಗಳು ದೊರಕಿವೆ.[೪೩]

ಮೈಸೂರಿನಿಂದ ಈಶಾನ್ಯಕ್ಕೆ ೨೦ ಕಿ.ಮೀ. ದೂರದಲ್ಲಿ ಕಾವೇರಿ ಮತ್ತು ಕಬಿನಿ ನದಿ ದಂಡೆಯ ಮೇಲೆ ಟೀ.ನರಸೀಪುರವಿದೆ. ಇಲ್ಲಿ ನವಶಿಲಾಯುಗ ಕಾಲಕ್ಕೆ ಸೇರಿದ ಮಡಿಕೆಗಳು, ಕಲ್ಲಿನ ಆಯುಧಗಳು, ಬೂದು ಬಣ್ಣದ ಮತ್ತು ಕೆಂಪು ಬಣ್ಣದ ಕೈಯಿಂದ ತಯಾರು ಮಾಡಿದ ಹಾಗೂ ಕಡಿಮೆ ವೇಗದಲ್ಲಿ ತಿರುಗಿಸಿ ಚಕ್ರದಿಂದ ಮಾಡಿದ ಮಡಿಕೆಗಳು, ದೊರಕಿವೆ. ಇವುಗಳ ಮೇಲೆ ಕಪ್ಪು ಬಣ್ಣದಿಂದ ಗೀರುಚಿತ್ರಗಳನ್ನು ಬಿಡಿಸಲಾಗಿದೆ. ಅಷ್ಟೇ ಅಲ್ಲದೆ ಅವರು ವ್ಯವಸಾಯಕ್ಕೆ ಉಪಯೋಗಿಸುವ ವಸ್ತುಗಳನ್ನು ಕಲ್ಲಿನಿಂದ ನಯವಾಗಿ ತಯಾರಿಸುತ್ತಿದ್ದರು. ಮುಖ್ಯವಾಗಿ ಬಂಗಾರದ ಉತ್ಪಾದನೆಯನ್ನು ತಿಳಿದಿದ್ದರು. ಆಭರಣಗಳೊಂದಿಗೆ ಮಣಿಗಳನ್ನು ಧರಿಸಿಕೊಳ್ಳುತ್ತಿದ್ದರು.[೪೪]

ದೊಡ್ಡ ಕಡತ್ತೂರು ೨೨ ಕಿ.ಮೀ. ದೂರದ ಕೋಲಾರ-ಮಾಲೂರು ಮಧ್ಯೆ ರಸ್ತೆಯಲ್ಲಿದೆ. ಅಲ್ಲಿ ಕಲ್ಲಾಸರೆಯ ಮನೆಗಳಲ್ಲಿ ದೊಡ್ಡ ಕುಳಿಗಳಿವೆ ಮತ್ತು ಮನೆಯ ಗೋಡೆಯನ್ನು ಮಣ್ಣಿನಿಂದ ಮೆತ್ತಿ ಗಟ್ಟಿಗೊಳಿಸಿದ್ದಾರೆ. ಇಲ್ಲಿ ನಯಗೊಳಿಸಿದ ಕೊಡಲಿ, ಬೂದಿ, ಸುಟ್ಟ ಅಕ್ಕಿ ಮತ್ತು ಹೊಟ್ಟು ದೊರಕಿದೆ. ಮಡಿಕೆಗಳು ತಿಳಿ ಬೂದು ಬಣ್ಣದಾಗಿದ್ದು ಕಂಠ ಭಾಗದಲ್ಲಿ ಚಿತ್ರವನ್ನು ಬಿಡಿಸಲಾಗಿದೆ. ತಂಬರಹಳ್ಳಿಯು ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲೂಕಿನಲ್ಲಿ ೩೮ ಮನೆಯಲ್ಲಿ ದೊರೆತಿರುವ ಕುಳಿಗಳ ಸರಾಸರಿಯಾಗಿ ೨.೦ ಮೀಟರ್ ಅಗಲದ, ೧.೫ ಮೀಟರ್ ಆಳದಾಗಿವೆ. ಅವುಗಳಲ್ಲಿ ಕಡಿಮೆ ವೇಗದಲ್ಲಿ ತಿರುಗಿಸಿದ ಮಡಿಕೆಗಳು ದೊರತಿವೆ. ಸುಟ್ಟಿರುವ ಮಡಿಕೆಗಳು ಹಾಗೂ ಬೂದಿ ದಿಬ್ಬ ಕಂಡುಬಂದಿದೆ.

ಬನಹಳ್ಳಿ ಗ್ರಾಮವು ೨ ಕಿ.ಮೀ. ದೂರದ "ಟೇಕಲ್" ಪ್ರದೇಶದಲ್ಲಿದೆ. ಅಲ್ಲಿ ಅನೇಕ ಕಲ್ಲಾಸರೆಯ ನೆಲೆಗಳು ದೊರೆತಿದೆ. ಇದರ ಅಳತೆ ೧೦ X ೫ ಮೀ ದೊಡ್ಡದಾಗಿದ್ದು ೩ ಮೀ. ಎತ್ತರವಾಗಿದೆ. ಇಲ್ಲಿಯೂ ಸಹ ಬೂದಿದಿಬ್ಬವು ಕಂಡುಬಂದಿದೆ. ಹಳದಿ, ಕೆಂಪು, ಬೂದಿ, ಬಣ್ಣದ ಸುಟ್ಟ ಮಡಿಕೆಗಳಿವೆ. ಈ ಮಡಿಕೆಗಳ ಕಂಠ ಭಾಗದಲ್ಲಿ ಮಾತ್ರ ಚಿತ್ರ ಬಿಡಿಸಲಾಗಿದೆ.[೪೫]

ಸಂಗನಕಲ್ಲು ಬಳ್ಳಾರಿಯ ಮೊಕಾ ರಸ್ತೆಯಿಂದ ೪ ಮೈಲಿ ದೂರದ ಈಶಾನ್ಯಕ್ಕೆ ಇದೆ. ಪ್ರದೇಶದಲ್ಲಿ ಕಟ್ಟುತ್ತಿದ್ದರು. ವೃತ್ತಾಕಾರದ, ಚೌಕಾಕಾರವಾದ ವಿಸ್ತಾರ ಮನೆಗಳನ್ನು ಕಟ್ಟುತ್ತಿದ್ದರು.

ಮನೆಗಳನ್ನು ಕಟ್ಟಲು ಬಂಬೂಗಳನ್ನು ಭೂಮಿಯಲ್ಲಿ ಸುತ್ತಲೂ ನೆಟ್ಟು ಅದರ ಮೇಲೆ ಹಸಿ ಮಣ್ಣನ್ನು ಮೆತ್ತಿ ಗಟ್ಟಿಗೊಳಿಸಿದರು. ನಂತರ ಬಿಳಿ ಜೇಡಿಮಣ್ಣನ್ನು (Kaolin) ಗೋಡೆಗೆ ಹಚ್ಚುತ್ತಿದರು. ಮನೆಯ ನೆಲವನ್ನು ಬಿಳಿಯ ಸುಣ್ಣದಿಂದ (Murrum Surface) (Lime) ೨೦ ಸೆಂ.ಮೀ. ದಪ್ಪವಾಗಿ ಗಟ್ಟಿಗೊಳಿಸಿದ ಚಿಕ್ಕ ಕಲ್ಲುಗಳು ಮತ್ತು ಸುಣ್ಣದ ಜೊತೆಗೆ ಇದ್ದಿಲಿನೊಂದಿಗೆ ೫ ಸೆಂ.ಮೀ. ದಪ್ಪವಾಗಿ ಗಟ್ಟಿಗೊಳಿಸಲಾಗಿದೆ. ಛತ್ತಿನ ಭಾಗಕ್ಕೆ ಹುಲ್ಲಿನ ಹೊದಿಕೆಯನ್ನು ಹಾಕಲಾಗಿದೆ ಎಂದು ಉತ್ಖನನಕಾರರು ಊಹಿಸಿದ್ದಾರೆ. ಮನೆ ಬಳಕೆಯ ವಸ್ತುಗಳಾದ ರುಬ್ಬುವ, ಕುಟ್ಟುವ ಹಾಗೂ ಬೀಸುವ ಕಲ್ಲುಗಳಿವೆ. ಕಲ್ಲಿನ ಆಯುಧಗಳು ಪ್ರಾಣಿಗಳ ಎಲುಬಿನ ಆಯುಧಗಳ ಕೈಗಾರಿಕಾ ಕೇಂದ್ರವಿದೆ. ದೊರಕಿರುವ ಬೂದು ಬಣ್ಣದ ಮಡಿಕೆಗಳ ಮೇಲೆ ಕೆಂಪು ಬಣ್ಣವನ್ನು ಲೇಪಿಸಲಾಗಿದೆ. ಇವನ್ನು ಚಕ್ರದಿಂದ ತಯಾರಿಸುತ್ತಿದ್ದರು. ಧಾನ್ಯಗಳನ್ನು ಸಂಗ್ರಹಿಸುವ ದೊಡ್ಡ ಮಡಿಕೆ ಹಾಗೂ ಹರವಿಗಳಿವೆ.

ಸಾಮಾನ್ಯವಾಗಿ ಈ ಮಡಿಕೆಗಳ ಕಂಠ ಭಾಗದಲ್ಲಿ ಮಾತ್ರ ಬೆರಳುಗಳಿಂದ ಒತ್ತಿದ ಚಿನ್ಹೆಗಳು ಹಾಗೂ ಸುತ್ತಲೂ ಗೆರೆಗಳಿವೆ. ಕೆಲವು ಮಡಿಕೆಗಳು ಸುಟ್ಟ ನಂತರ ಅದರ ಮೇಲೆ ನೇರಳೆ ಬಣ್ಣ (Violet) ಅಥವಾ ತಿಳಿ ಕೆಂಪು ಬಣ್ಣ ಲೇಪಿಸುತ್ತಿದ್ದರು. ಕೆಲವೊಮ್ಮೆ ಈ ದೊಡ್ಡ ದೊಡ್ಡ ಮಡಿಕೆಗಳನ್ನು ಶವದ ಪೆಟ್ಟಿಗೆಯಾಗಿ ಉಪಯೋಗಿಸುತ್ತಿದ್ದರು. ಮಗುವಿನ ಶವವನ್ನು ಚಿಕ್ಕ ಮಡಿಕೆಯಲ್ಲಿ ಹೂಳುತ್ತಿದ್ದರು.[೪೬] ತೆಕ್ಕಲಕೋಟೆಯು ಬಳ್ಳಾರಿಯ ಉತ್ತರಕ್ಕೆ ೪೩.೪೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ದಕ್ಷಿಣಕ್ಕೆ ೧೯ ನೆಲೆಗಳಿವೆ. ಅಲ್ಲಿ ೫.೫ ಮೀಟರ್ ಅಗಲವಾದ ವೃತ್ತಾಕಾರ ಮತ್ತು ಚೌಕಾಕಾರದ ಮನೆಗಳಿವೆ. ಮನೆಯ ಗೋಡೆಯನ್ನು ಗಿಡ್ಡದಾಗಿ ಕಟ್ಟಿ ಅದರ ಮೇಲೆ ಬಂಬೂಗಳನ್ನು ನೆಡುತ್ತಿದ್ದರು. ಗೋಡೆಯನ್ನು ಜೇಡಿಮಣ್ಣು ಮತ್ತು ಸುಣ್ಣದಿಂದ ಲೇಪಿಸುತ್ತಿದ್ದರು. ಗೋಡೆಯ ಮೇಲೆ ನವಿಲು, ಎತ್ತು, ಪ್ರಾಣಿಗಳ ಚಿತ್ರವನ್ನು ಬಿಡಿಸಲಾಗಿದೆ. ಮನೆಯ ನೆಲವನ್ನು ಸುಣ್ಣದಿಂದ ಲೇಪಿಸುತ್ತಿದ್ದರು. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕುದುರೆ ತಿನ್ನುವ ಹುರಳಿಕಾಳು (Horse-Gram) ದೊರಕಿವೆ. ಮಡಿಕೆಗಳನ್ನು ತಯಾರಿಸುವ ಕೈಗಾರಿಕೆ ಕೇಂದ್ರವಿದೆ. ಇಲ್ಲಿ ಮಡಿಕೆಗಳು ಕೈಯಿಂದ ಮತ್ತು ಚಕ್ರದಿಂದ ತಯಾರಿಸಲಾಗಿದೆ. ಕೈಯಿಂದ ಮಾಡಿದ ಬೂದು ಬಣ್ಣ ಮತ್ತು ಕೆಲವು ಹಳದಿ ಬಣ್ಣದ ಮಡಿಕೆಗಳು ದೊರಕಿವೆ. ಸಾಮಾನ್ಯವಾಗಿ ವೃತ್ತಾಕಾರ ಹಿಡಿಕೆಗಳನ್ನು ಹೊಂದಿದ ಕಿತ್ತಲಿಯಾಕಾರದ ಬಟ್ಟಲು ಹಾಗೂ ತಟ್ಟೆಗಳ ಅಂಚುಗಳನ್ನು ಬೆರಳಿನಿಂದ ತಿದ್ದಿ ಚಿವುಟಿದ ರೀತಿಯಲ್ಲಿರುವುದು ಕಂಡುಬಂದಿದೆ.

ತಿಳಿ ಕೆಂಪು, ಕಪ್ಪು-ಕೆಂಪು ಬಣ್ಣದ, ಕಪ್ಪು ಬಣ್ಣದ, ಕೆಂಪು ಬಣ್ಣ, ವಿವಿಧ ರೀತಿಯ ಪಿಂಚ್ ಮಾಡಿದ (ಚಿವುಟಿದ) ಸುಟ್ಟ ಮಡಿಕೆಗಳು ದೊರಕಿದ್ದು ಅದರಲ್ಲಿನ ಕೆಲವು ಮಡಿಕೆಗಳಲ್ಲಿ

ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆಗಳನ್ನು ಕೇವಲ ಶವಸಂಸ್ಕಾರಕ್ಕೆ ಉಪಯೋಗಿಸಿರುವುದು ಕಂಡುಬಂದಿದೆ. ಮಗವನ್ನು ಚಿಕ್ಕ ಮಡಿಕೆಯಲ್ಲಿಟ್ಟು ಮನೆಯಲ್ಲಿಯೇ ಹೂಳುತ್ತಿದ್ದರು. ಇಲ್ಲಿ ಶವವನ್ನು ಹೂಳಲು ಪೆಟ್ಟಿಗೆಯಾಕಾರದ ಮಡಿಕೆಗಳನ್ನು ತಯಾರಿಸುತ್ತಿದ್ದರು. ಮೀನಿನ ಗಾಳದ ಮೊಳೆ (Fish-Hooks), ತಂತಿ ಮುಂತಾದ ಕೆಲವು ತಾಮ್ರದ ವಸ್ತುಗಳು ದೊರತಿವೆ. ಬಂಗಾರದ ಆಭರಣಗಳಾದ ಕಿವಿಯ ಓಲೆ ಮತ್ತು ಪದಕ, ಮಣಿಗಳು ಹಾಗೂ ಅಮೂಲ್ಯವಾದ ಕಲ್ಲುಗಳು ದೊರಕಿವೆ.[೪೭]

ಈ ನವಶಿಲಾಯುಗದ ಜನರು ಹಿಂದಿನ ಕಾಲಘಟ್ಟದ ಜನರಿಗಿಂತ ಸಂಪೂರ್ಣವಾಗಿ ಬೆಳವಣಿಗೆ ಹೊಂದಿದ್ದರು. ಕೃಷಿ ಅವರ ಮೂಲ ಉದ್ಯೋಗವಾಗಿತ್ತು. ಕೃಷಿಗೆ ಬೇಕಾಗುವ ಉಪಕರಣಗಳನ್ನು ತಯಾರಿಸುತ್ತಿದ್ದರು, ವ್ಯವಸಾಯಕ್ಕೆ ಬೇಕಾಗುವ ಪ್ರಾಣಿಗಳನ್ನು ಸಾಕುತ್ತಿದ್ದರು. ಜನರು ಆಯಾ ಪ್ರದೇಶದ ವಾತಾವರಣಕ್ಕೆ ತಕ್ಕ ಹಾಗೆ ಮನೆಗಳನ್ನು ಕಟ್ಟುತ್ತಿದ್ದರು, ಮನೆಗಳಲ್ಲಿ ಒಂದು ಅಥವಾ ಎರಡು ಕೊಠಡಿಗಳು ಇದ್ದ ಕುರುಹುಗಳಿವೆ. ಸೂಕ್ಷ್ಮಶಿಲಾಯುಗದ ಜನರ ಬೇಟೆಯಾಡುವ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದರೂ ಕೂಡ ಈ ನವಶಿಲಾಯುಗದ ಜನರು ಕೃಷಿ ಪದ್ಧತಿ, ಪ್ರಾಣಿಗಳನ್ನು ಸಾಕಿ, ಪಳಗಿಸುವುದರೊಂದಿಗೆ ಮನೆಗಳನ್ನು ಕಟ್ಟಿಕೊಂಡು ಒಂದೇ ಪ್ರದೇಶದಲ್ಲಿ ನೆಲೆಸಲು ಪ್ರಾರಂಭಿಸಿದರು. ಕರ್ನಾಟಕದಲ್ಲಿ ಬೂದಿದಿಬ್ಬಗಳು ಕಂಡುಬಂದಿವೆ. ಅದೇ ರೀತಿ ಭಾರತದ ಹಲವಾರು ಪ್ರದೇಶದಲ್ಲಿ ಹಸುವಿನ ದೊಡ್ಡಿ, ಗೊರಸಿನ ಪಡಿಯಚ್ಚು ದೊರೆತಿವೆ. ಈ ರೀತಿಯಾಗಿ ನವಶಿಲಾಯುಗದ ಜನರು ಆಯಾ ಪ್ರದೇಶದ ಭೌಗೋಳಿಕ ಅನುಕೂಲತೆಗೆ ಅನುಗುಣವಾಗಿ ಬೆಳವಣಿಗೆ ಹೊಂದಿದ್ದರು.

## ಶಿಲಾತಾಮ್ರಯುಗ

ನವಶಿಲಾಯುಗದ ನಂತರ ಬೆಳೆದು ಬಂದ ಸಂಸ್ಕೃತಿಯೇ ಶಿಲಾತಾಮ್ರಯುಗ ಸಂಸ್ಕೃತಿ. ಇದು ನವಶಿಲಾಯುಗ ಕೊನೆಯ ಹಂತದಲ್ಲಿ ಅಂದರೆ ಕ್ರಿ.ಪೂ. ೨ ಮಿಲಿಯನ್ ವರ್ಷದ ಅರ್ಧಭಾಗದಲ್ಲಿ ಪ್ರಾರಂಭವಾಗಿ ಕ್ರಿ.ಪೂ. ೩ ಮಿಲಿಯನ್ ವರ್ಷದವರೆಗೆ ಬೆಳೆವಣಿಗೆ ಹೊಂದಿದವು. ಈ ಸಂಸ್ಕೃತಿಯನ್ನು ಸಿಂಧೂ ನಾಗರೀಕತೆಯೆಂದು ಗುರುತಿಸಲಾಗುತ್ತದೆ.[೪೮] ಈ ಕಾಲದಲ್ಲಿ ಚಿಕ್ಕ ಮತ್ತು ದೊಡ್ಡ ಮನೆಗಳು ಇಟ್ಟಿಗೆ, ಕಟ್ಟಿಗೆ ಹಾಗೂ ಬಂಬೂಗಳಿಂದ ಕಟ್ಟಲಾಗುತ್ತಿತ್ತು.

**ಕಾಲಿಬಂಗಾನ್**

ರಾಜಸ್ಥಾನ ರಾಜ್ಯದ ಗಂಗಾನಗರ ಜಿಲ್ಲೆಯಲ್ಲಿರುವ ಕಾಲಿಬಂಗಾನ್ ಘಗ್ಗರ್ ನದಿಯ ಎಡದಂಡೆಯ ಮೇಲಿದೆ. ಇಲ್ಲಿ ಹರಪ್ಪ ಕಾಲದ ಅವಶೇಷಗಳು ದೊರೆತಿವೆ. ಇಟ್ಟಿಗೆ ಕೋಟೆಗೋಡೆಯ ಅವಶೇಷ ದೊರೆತಿದೆ. ಈ ರೀತಿಯ ಕೋಟೆಗೋಡೆಯು ಹರಪ್ಪ ಮತ್ತು ಮೊಹೆಂಜೊದಾರೋ ನೆಲೆಯಲ್ಲಿವೆ. ಕೋಟೆಯ ಒಳಭಾಗದಲ್ಲಿ ೪-೫ ಕೊಠಡಿಗಳಿರುವ ಮನೆಗಳಿವೆ. ಮನೆಯನ್ನು ಮಣ್ಣಿನ ಇಟ್ಟಿಗೆ ಗೋಡೆಯಿಂದ ಕಟ್ಟುತ್ತಿದ್ದರು. ನೆಲವನ್ನು ಇಟ್ಟಿಗೆ ತುಂಡು, ಇದ್ದಿಲು ಮತ್ತು ಮಣ್ಣು ಹಾಕಿ ಕುಟ್ಟಿ ಗಟ್ಟಿಗೊಳಿಸುತ್ತಿದ್ದರು. ಮನೆಯಲ್ಲಿ ವೃತ್ತಾಕಾರದ ಒಲೆಗಳಿವೆ. ಛತ್ತಿನ ಭಾಗಕ್ಕೆ ದೊಡ್ಡ ದೊಡ್ಡ ಕಟ್ಟಿಗೆಯ ತೊಲೆಗಳನ್ನು ಮತ್ತು ಜೊತೆಗೆ ಸಣ್ಣ ಕಟ್ಟಿಗೆಯನ್ನು ಜೋಡಿಸಲಾಗಿತ್ತು. ಕೆಲವೊಮ್ಮೆ ಹೆಂಚುಗಳನ್ನು ಜೋಡಿಸುತ್ತಿದ್ದರು ಎಂದು ಉತ್ಖನನಕಾರರು ಊಹಿಸಿದ್ದಾರೆ.[೪೯] ಈ ಮನೆಗಳು ಉತ್ತರ-ದಕ್ಷಿಣ ಮತ್ತು ಪೂರ್ವ-ಪಶ್ಚಿಮವಾಗಿರುವ ರಸ್ತೆಯ ಬದಿಯಲ್ಲಿ ಕಂಡುಬರುತ್ತವೆ. ರಸ್ತೆಗಳು ಸ್ವಚ್ಛವಾಗಿ ಅಗಲವಾಗಿ ಉತ್ತರ-ದಕ್ಷಿಣವಾಗಿ ಹರಡಿಕೊಂಡಿವೆ. ಮುಖ್ಯ (Arterial Street) ರಸ್ತೆಗಳು ೭.೨೫ ಮತ್ತು ೩.೭೫ ಮೀಟರ್ ಅಗಲ ಮನೆಗಳ ವಿಭಾಗಗಳಲ್ಲಿವೆ. ಮನೆಯ ಚರಂಡಿಯ ನಾಲೆಯನ್ನು ಕಟ್ಟಿಗೆ ಅಥವಾ ಸುಟ್ಟ ಇಟ್ಟಿಗೆಯಿಂದ ಕಟ್ಟುತ್ತಿದ್ದರು. ಈ ಚರಂಡಿಯ ನೀರು ಹರಿದು ಮುಂದೆ ರಸ್ತೆಯ ಒಳ ಭಾಗದಲ್ಲಿ ಹುಗಿದಿರುವ ಇಂಗುಗುಂಡಿಯನ್ನು ಸೇರುತ್ತಿತ್ತು. ಚರಂಡಿಯ ನಾಲೆಯನ್ನು ಸ್ವಚ್ಛಗೊಳಿಸಲು "U" ಆಕಾರದ ಕಟ್ಟಿಗೆಯ ಹುಟ್ಟಿನಿಂದ ಸ್ವಚ್ಚಗೊಳಿಸುತ್ತಿದ್ದರು.[೫೦] ಇಲ್ಲಿ ವಿವಿಧ ರೀತಿಯ ಚಕ್ರದಿಂದ ಮಾಡಿದ ಸಾದಾ ಮತ್ತು ಚಿತ್ರತ ಮಡಿಕೆಗಳು ದೊರಕಿವೆ. ಕೆಂಪು ಗುಲಾಬಿ [illegible]ಕ್ಕೆ ಹೊಂದುವ ಕಪ್ಪು ಮತ್ತು ಬಿಳುಪು ಮುಂತಾದ ಬಣ್ಣಗಳ ಚಿತ್ರಗಳಿವೆ. ವಿವಿಧ ರೀತಿಯ ಮಣಿಗಳು, ಬಳೆಗಳು ತಾಮ್ರದ ಮಣಿಗಳು ಮುಂತಾದವುಗಳು ದೊರೆತಿವೆ.[೫೧]

ಅಹಮದಾಬಾದ್ ಜಿಲ್ಲೆಯ ಭಾಗೋವಾ-ಸಾಬರಮತಿ ನದಿ ದಂಡೆಯ ಮೇಲೆ ಲೋಥಾಲ್ ನೆಲೆಯಿದೆ. ಈ ನೆಲೆಯಲ್ಲಿ ಕೋಟೆಗೋಡೆಯನ್ನು ಮೇಲಿಂದ ಮೇಲೆ ಕಟ್ಟಿ ಎತ್ತರಿಸಲಾಗಿದೆ. ನಂತರ ದಿನಗಳಲ್ಲಿ ಪ್ರವಾಹದಿಂದ ತಡೆಯಲು ಎತ್ತರವಾದ ದಿಬ್ಬ ಅಥವಾ ಜಗಲಿಕಟ್ಟೆಯನ್ನು (Platform) ಇಟ್ಟಿಗೆಯಿಂದ ನಿರ್ಮಿಸಿ ಅದರ ಮೇಲೆ ಕೋಟೆಗೋಡೆಯನ್ನು ಕಟ್ಟಿರುವುದಕ್ಕೆ ಪುರಾವೆಗಳು ದೊರಕಿವೆ. ಕೋಟೆಯ ಏರುಭಾಗವು (Rampart) ೧೦.೬೬೮ ಮೀಟರ್ ಅಗಲ ೨.೪೩೮೪ ಮೀಟರ್ ಎತ್ತರವಾಗಿದೆ. ಈ ಕೋಟೆ ಒಳಭಾಗದಲ್ಲಿ ಕಟ್ಟಡಗಳು

ಮತ್ತು ಅವುಗಳಿಗೆ ಹೊಂದಿಕೊಂಡು ಕಟ್ಟಿಗೆಯ ನಾಲೆಗಳಿವೆ. ಚರಂಡಿಯ ನೀರು ಹರಿದು ಬಂದು ಸೇರುವುದಕ್ಕೆ ಅಲ್ಲಲ್ಲಿ ಇಂಗುಗುಂಡಿಗಳಿವೆ.[೫೨]

ಪೂರ್ವ-ಪಶ್ಚಿಮ ರಸ್ತೆಗಳು ಸೇರುವ ಮಧ್ಯದಲ್ಲಿ ೫೦.೫೯ ಮೀ. ಉದ್ದವಾದ ಚರಂಡಿಯನ್ನು ಸುಟ್ಟ ಇಟ್ಟಿಗೆಯಿಂದ ಕಟ್ಟಲಾಗಿದೆ. ಒಂದು ಕಟ್ಟಡದಲ್ಲಿ ೭.೩೧ ಮೀ. ಆಳದ ಬಾವಿಯಿದೆ. ಅದರ ಸುತ್ತಲೂ ೫.೪೮ X ೨.೭೪ ಅಳತೆಯ ೬ ಕೊಠಡಿಯನ್ನು ಕಟ್ಟಲಾಗಿದೆ. ಇದು ಮಣಿಗಳನ್ನು ತಯಾರಿಸುವ ಕೈಗಾರಿಕಾ ಕೇಂದ್ರವಾಗಿತ್ತು. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತಯಾರು ಮಾಡಿದ ಮಣಿಗಳು ಮತ್ತು ತಯಾರಿಕಾ ಹಂತದ ಮಣಿಗಳು ದೊರೆತಿವೆ. ಮಣಿಗಳನ್ನು ತಯಾರಿಸುವ ಕಚ್ಚಾ ವಸ್ತುಗಳನ್ನು ಸಂಗ್ರಹಿಸುವ ೧.೮೨ ಮೀಟರ್ ಅಗಲದ ಕೊಠಡಿಯು ಹತ್ತಿರದಲ್ಲಿದೆ.[೫೩] ಇಲ್ಲಿ ಮಡಿಕೆ ಮತ್ತು ಇಟ್ಟಿಗೆಗಳನ್ನು ಸುಡುವ ಭಟ್ಟಿ ಕೇಂದ್ರ ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿದೆ.[೫೪]

ಲೋಥಲ್‌ನಲ್ಲಿ ಹಡಗುಕಟ್ಟೆ ದೊರೆತಿದೆ. ಉತ್ತರದಲ್ಲಿ ೩೭.೭೯ ಮೀಟರ್ ಮತ್ತು ದಕ್ಷಿಣದಲ್ಲಿ ೩೫.೩೫ಮೀ. ಎತ್ತರವಾಗಿ ವ್ಯಾಪಿಸಿದ್ದರೆ ಪೂರ್ವ-ಪಶ್ಚಿಮದಲ್ಲಿ ೨೧೬.೪೦ ಮೀಟರ್ ಉದ್ದವಾಗಿದೆ. ನದಿಯಲ್ಲಿ ಹೆಚ್ಚಿನ ನೀರು ಹರಿದು ಬಂದಲ್ಲಿ ಅದು ಸಾಗಲು ದಕ್ಷಿಣ ಭಾಗದಲ್ಲಿ ನಾಲೆಯನ್ನು ನಿರ್ಮಿಸಲಾಗಿದೆ. ಅಲ್ಲಿ ಉದ್ದವಾದ ಕಟ್ಟಿಗೆಯ ಕೋಲಿನಿಂದ ನೀರಿನ ಪ್ರಮಾಣವನ್ನು ನೋಡುತ್ತಿದ್ದರು ಎಂದು ಊಹಿಸಲಾಗಿದೆ.[೫೫]

ಮಧ್ಯಪ್ರದೇಶದ ಮಮದ್ ಜಿಲ್ಲೆಯಲ್ಲಿ ನವದಾತುಲಿ ಗ್ರಾಮವಿದೆ. ಇಲ್ಲಿ ಶೋಧಿಸಿದ ಸಂಸ್ಕೃತಿಯನ್ನು ಮಾಳವಾ ಸಂಸ್ಕೃತಿ ಎಂದು ಹೆಸರಿಸಲಾದೆ. ಈ ಪ್ರದೇಶದಲ್ಲಿ ಚಿಕ್ಕ ಮತ್ತು ದೊಡ್ಡ ಮನೆಗಳನ್ನು ಕಟ್ಟಿಗೆ ಅಥವಾ ಬಂಬೂಗಳನ್ನು ಉಪಯೋಗಿಸಿ ಕಟ್ಟುತ್ತಿದ್ದರು. ಮನೆಯ ಕೊಠಡಿಯ ಅಳತೆಯು ೩.೦೪ X ೨.೧೩ ಮೀಟರ್ ಆಗಿದ್ದು ಮನೆಯ ಗೋಡೆಯನ್ನು ಜಂಬೂಗಳನ್ನು ಒಂದರ ಪಕ್ಕ ಇನ್ನೊಂದರಂತೆ ನೆಟ್ಟು ಅದಕ್ಕೆ ಮೇಲೆ ಮಣ್ಣನ್ನು ಮೆತ್ತಿ ಅದರ ಮೇಲೆ ಸುಣ್ಣವನ್ನು ಹಚ್ಚಿರುವ ಕುರುಹುಗಳಿವೆ. ಮನೆಯ ನೆಲವನ್ನು ತೆಳು ಮಣ್ಣಿನಿಂದ ಸಮಗೊಳಿಸಿ ಅದರ ಮೇಲೆ ಸುಣ್ಣವನ್ನು ಹಚ್ಚಿದ್ದರು. ಛತ್ತನ್ನು ಬಂಬೂಗಳಿಂದ ಜೋಡಿಸಿ ಅದಕ್ಕೆ ಮಣ್ಣಿನ್ನು ಮೆತ್ತುತ್ತಿದ್ದರು. ಕೆಂಪು ಮಡಿಕೆಗಳ ಮೇಲೆ ಕಪ್ಪು ಬಣ್ಣದಿಂದ ಚಿತ್ರಿಸಿದ ಹಾಗೂ ಹಸಿರು-ಬಿಳಿ ಬಣ್ಣಗಳ ಮೃತ್ಪಾತ್ರೆಗಳು ಇಲ್ಲಿ ದೊರಕಿದ್ದು ಬಟ್ಟಲು, ತಟ್ಟೆ, ದೊಡ್ಡ ಮಡಿಕೆ, ಜಾರ್, ಕಿತ್ತಲೆಯಾಕಾರದ ಬಟ್ಟಲು, ಮುಂತಾದವುಗಳು ಇಲ್ಲಿ ದೊರೆತಿವೆ.[೫೬]

ಮಹಾರಾಷ್ಟ್ರದ ಪುಣೆ ಜಿಲ್ಲೆಯಲ್ಲಿರುವ ಇನಾಮ್‌ಗಾಂ ಗ್ರಾಮದಲ್ಲಿ ೨ ಸಂಸ್ಕೃತಿಗಳು ಕಂಡುಬದಿಂವೆ. ಒಂದು ಮಾಳವಾ ಮತ್ತು ಎರಡನೆಯದು (Northern Deccan) ಜೋರ್ವೆ ಸಂಸ್ಕೃತಿ. ಇಲ್ಲಿ ಹದಗೊಳಿಸದ ಕಲ್ಲನ್ನು ಬಳಿಸಿ ನಿರ್ಮಿಸಿರುವ ಕೋಟೆಗೋಡೆಯಿದೆ. ಇದಕ್ಕೆ ಅಂಟಿಕೊಂಡು ೩ ಮೀಟರ್ ಅಗಲವಾದ ಕಟ್ಟೆಯನ್ನು ನದಿಯ ಪ್ರವಾಹದ ನೀರನ್ನು ತಡೆಯಲು ಕಟ್ಟಲಾಗಿದೆ. ಈ ಪ್ರವಾಹದ ನೀರು ಉತ್ತರ–ದಕ್ಷಿಣದ ದಿಕ್ಕಿಗೆ ಹರಿದು ಹೋಗುವ ರೀತಿಯಲ್ಲಿ ಕಟ್ಟಿರುವುದನ್ನು ಕಾಣುತ್ತೇವೆ. ಇಲ್ಲಿ ಪ್ರಾಚೀನ ನದಿಯ ನಾಲೆಯು ದೊರೆತಿದೆ.[೫೭] ಈ ಕೋಟೆಯ ಒಳ ಭಾಗದಲ್ಲಿ ಕಟ್ಟಡಗಳ ಅವಶೇಷಗಳು ಕಂಡುಬಂದಿವೆ. ಇಲ್ಲಿಯೂ ಸಹ ಕಟ್ಟಿಗೆಯಿಂದ ಕಟ್ಟಿದ ಚಿಕ್ಕ ಮತ್ತು ದೊಡ್ಡ ಮನೆಯ ಅವಶೇಷಗಳಿವೆ. ಮನೆಯಲ್ಲಿ ಪಿಪಾಯಿ ಆಕಾರದ ೧.೧೦ ಮೀಟರ್ ಅಗಲ ಮತ್ತು ೭೦ ಸೆಂ.ಮೀ. ಆಳವಾದ ಧಾನ್ಯಗಳನ್ನು ಸಂಗ್ರಹಿಸುವ ಕಣಜಗಳನ್ನು ಕಟ್ಟಲಾಗಿದ್ದು ಅದರಲ್ಲಿ ದೊಡ್ಡ ಸಂಗ್ರಾಹಕಗಳಿದ್ದವು. ಇವುಗಳಲ್ಲಿ ಜೋಳ ಅಥವಾ ನವಣೆ ಧಾನ್ಯಗಳು ದೊರೆತಿವೆ. ಮನೆಯ ಕೊಠಡಿಯ ನೆಲವನ್ನು ಚಿಕ್ಕ ಮತ್ತು ದೊಡ್ಡ ಕಲ್ಲುಗಳನ್ನು ಹಾಸಿ ಗಟ್ಟಿಗೊಳಿಸಲಾಗಿದೆ.

ಮನೆಯ ಪ್ರಾಂಗಣ ಅಥವಾ ಅಂಗಳವನ್ನು ಹಳದಿ ಬಣ್ಣದ ಕೆಸರಿನಿಂದ ಗಟ್ಟಿಗೊಳಿಸಲಾಗಿದೆ. ಮನೆಯಲ್ಲಿ ಚೌಕಾಕಾರ ಒಲೆ ಕಂಡುಬಂದಿದೆ. ಮತ್ತೊಂದು ಪ್ರದೇಶದಲ್ಲಿ ಚೌಕ ಒಲೆಯ ಇಕ್ಕೆಲಗಳಲ್ಲಿ ಸುಡದೆಯಿರುವ ಮಣ್ಣಿನ ಪುರುಷನ ಎರಡು ಶಿಲ್ಪಗಳು ದೊರಕಿದ್ದು ಇವು ದೇವತೆಯ ಶಿಲ್ಪವಾಗಿರಬಹುದಾದ್ದು ಈ ಒಲೆಯನ್ನು ಯಾವುದೇ ಮುಖ್ಯ ಕಾರ್ಯಗಳಿಗೆ ಉಪಯೋಗಿಸಿರಬಹುದೆಂದು ತರ್ಕಿಸಲಾಗಿದೆ.[೫೮] ಮನೆಯಲ್ಲಿ ಚಿಕ್ಕ ಗೋಡೆಯನ್ನು ಕಟ್ಟಿ ಅದರ ಮೇಲೆ ಕಟ್ಟಿಗೆಗಳನ್ನು ನೆಟ್ಟು ಅದರ ಮೇಲೆ ಮಣ್ಣನ್ನು ಮೆತ್ತುತ್ತಿದ್ದರು. ಇಳಿಜಾರಿನ ರೀತಿಯಲ್ಲಿ ಕಟ್ಟಿಗೆಯಿಂದ ಛಾವಣಿಯನ್ನು ಜೋಡಿಸಿಲಾಗಿದೆ. ಛತ್ತಿಗೆ ಮರದ ಕಟ್ಟಿಗೆಯನ್ನು ಬಳಸುತ್ತಿದ್ದರು. ಅದರ ಮೇಲೆ ಹುಲ್ಲಿನ (Elephant Grass) ಹೊದಿಕೆ ಹಾಕಿ ಅದಕ್ಕೆ ಹಸುವಿನ ಸಗಣಿಯಿಂದ ಮತ್ತಿ ಅದರ ಮೇಲೆ ಸುಣ್ಣವನ್ನು ಹಚ್ಚುತ್ತಿದ್ದರು.[೫೯]

ಕರ್ನಾಟಕದಲ್ಲಿ ಶಿಲಾತಾಮ್ರಯುಗ ಸಂಸ್ಕೃತಿಯು ನವಶಿಲಾಯುಗ ಸಂಸ್ಕೃತಿಯ ಜೊತೆಗೆ ಬೆಳೆದುಕೊಂಡು ಬಂದಿದೆ. ಶಿಲಾತಾಮ್ರಯುಗದ ನೆಲೆಗಳಲ್ಲಿ ಕಂಡುಬಂದಿರುವ ಬೂದು ಬಣ್ಣ ಮತ್ತು ಜೋರ್ವೆ ಬಣ್ಣದ ಮಡಿಕೆಗಳು ಕರ್ನಾಟಕದಲ್ಲಿನ ನವಶಿಲಾಯುಗ ನೆಲೆಗಳಲ್ಲಿ ದೊರಕಿವೆಯಾದ್ದರಿಂದ ಇಲ್ಲಿ ಪ್ರತ್ಯೇಕ ಶಿಲಾತಾಮ್ರಯುಗ ಇರಲಿಲ್ಲವೆಂದು ಅಭಿಪ್ರಾಯಿಸಲಾಗಿದೆ. ಬಾಗ್ಲೂರ್, ಬಾಳೆಬಾವಿ, ಇಂಗಳಗಿರಿ, ಕಲ್ಲಿದೇವನಹಳ್ಳಿ, ಕುಮಶಿ, ಮುಂತಾದ ಗ್ರಾಮಗಳಲ್ಲಿ ಈ ಸಂಸ್ಕೃತಿಯ ಅವಶೇಷಗಳು ದೊರೆತಿದೆ.[೬೦] ಬೆಣಚುಕಲ್ಲು ಬೆಟ್ಟದಲ್ಲಿ ಅಥವಾ ಸಮವಾಗಿರುವ

ಪ್ರದೇಶದಲ್ಲಿ ನವಶಿಲಾಯುಗ ನೆಲೆಗಳು ಕಂಡುಬಂದಿವೆ. ಈ ಕಾಲದಲ್ಲಿ ವೃತ್ತಾಕಾರದ ಮನೆ, ಹಾಗೂ ಅದರಲ್ಲಿನ ನೆಲವನ್ನು ಮಣ್ಣಿನಿಂದ ಮೆತ್ತಿ ಗಟ್ಟಿಗೊಳಿಸಲಾಗುತ್ತಿತ್ತು. ಮನೆಯ ಬಾಗಿಲ ಚೌಕಟ್ಟನ್ನು ಕಟ್ಟಿಗೆಯಿಂದ ಕಟ್ಟಲಾಗಿತ್ತು. ಇವುಗಳೊಂದಿಗೆ ತಾಮ್ರ ಮತ್ತು ತವರದ ವಸ್ತುಗಳು ಹಾಗೂ ಕಲ್ಲಿನ ಆಯುಧಗಳ ಕೈಗಾರಿಕೆ ಕೇಂದ್ರಗಳು ಶೋಧವಾಗಿದೆ. ತೆಕ್ಕಲಕೋಟೆಯಲ್ಲಿ ಬಂಗಾರದ ಅವಶೇಷ ದೊರೆತಿದೆ. ಇಲ್ಲಿನ ಮಡಿಕೆಗಳಲ್ಲಿ ಬದಲಾವಣೆಯನ್ನು ಗಮನಿಸಲಾಗಿದೆ. ಪಿಕ್ಲಿಹಾಳ, ಬ್ರಹ್ಮಗಿರಿ, ಸಂಗನಕಲ್ಲು, ಹಳ್ಳೂರು, ಟೀ. ನರಸಿಪುರ ಮುಂತಾದ ನೆಲೆಗಳಲ್ಲಿ ತವರ ಮತ್ತು ತಾಮ್ರದ ವಸ್ತುಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿವೆ. ಇದರ ಕಾಲವನ್ನು ಕ್ರಿ.ಪೂ. ೨೧೦೦ ಎಂದು ಗುರುತಿಸಲಾಗಿದೆ. ಬ್ರಹ್ಮಗಿರಿಯಲ್ಲಿಯು ತಾಮ್ರ ಮತ್ತು ತವರಿನ ಬ್ಲೇಡ್ ಮುಂತಾದ ವಸ್ತುಗಳು ದೊರೆತಿದೆ.[೬೧] ಹಳ್ಳೂರಿನಲ್ಲಿ ಗುಡಿಸಿಲಿನ ಅವಶೇಷಗಳು ಕಂಡುಬಂದಿದೆ. ಗುಡಿಸಿಲಿನ ನೆಲವನ್ನು ಮಣ್ಣಿನಿಂದ ಅಥವಾ ಹಸುವಿನ ಸಗಣಿಯಿಂದ ಗಟ್ಟಿಗೊಳಿಸಿದ್ದರು. ಅಲ್ಲಿ ಒಲೆ, ಬೀಸುವಕಲ್ಲು ಕುಟ್ಟುವ ಕಲ್ಲು ದೊರೆತಿದೆ.[೬೨] ಅಲ್ಲದೆ ಈ ನೆಲೆಯಲ್ಲಿ ತಾಮ್ರದ ಮೀನಿನ ಗಾಳದ ಮೊಳೆ, ಉಳಿ, ಮತ್ತು ಅಗಲವಾದ ಬಾಣಗಳು ದೊರೆತಿವೆ.[೬೩] ಬಂಡೆಗಳ ಮೇಲೆ ಕುದುರೆಯನ್ನು ಬೇಟೆಯಾಡುವ ಚಿತ್ರಗಳಿವೆ. ಹಳ್ಳೂರು ಮತ್ತು ತೆಕ್ಕಲಕೋಟೆಯಲ್ಲಿ ಹುರುಳಿ (*Dolictos Bislarus*) ಮತ್ತು ರಾಗಿ (*Eleusine coracana*) ಹಾಗೂ ಜಿಂಕೆ, ಆಮೆ ಆನೆ, ಕುದುರೆಯ (*Equs cabalas*) ಎಲಬುಗಳು ಮತ್ತು ಅಸ್ಥಿ ದೊರೆತಿದೆ.[೬೪]

ಕಲ್ಲೂರಿನಲ್ಲಿಯೂ ಸಹ ತಾಮ್ರ ಮತ್ತು ತವರಿನ ವಸ್ತುಗಳು ದೊರೆತಿದೆ. ಚಕ್ರದಿಂದ ಮಾಡಿದ ಮಡಿಕೆಗಳ ಮೇಲೆ ನೇರಳೆ ಬಣ್ಣದಿಂದ ಚಿತ್ರ ಬಿಡಿಸಲಾಗಿದೆ.[೬೫] ಈ ನೆಲೆಯಲ್ಲಿ ದೊರೆತ ವಸ್ತುಗಳು ಮಹಾರಾಷ್ಟ್ರದ ಜೋರ್ವೆ ಕಾಲಕ್ಕೆ ಅಂದರೆ ಕ್ರಿ.ಪೂ. ೧೫೦೦ ದಿಂದ ೧೦೫೦ ವರೆಗಿನ ಅವಧಿಗೆ ಸೇರಿದ್ದಾಗಿದೆ. ದೊಡ್ಡ ಮಡಿಕೆಗಳು, ಮತ್ತು ಉದ್ದ ಕಂಠಭಾಗದ ಮಡಿಕೆಗಳು, ದೊರೆತಿದೆ.[೬೬] ಕೊಪ್ಪಳ ತಾಲ್ಲೂಕಿನ ಗವಿಮಠ ಮತ್ತು ಬೇವಿಹಾಳು, ಶಿವಪುರ, ಪ್ರದೇಶಗಳಲ್ಲಿ ತಾಮ್ರಶಿಲಾಯುಗದ ನೆಲೆಗಳು ಕಂಡುಬಂದಿದೆ. ಶಿವಪುರ ಪ್ರದೇಶದಲ್ಲಿ ತಾಮ್ರಶಿಲಾಯುದ ಬೂದಿದಿಬ್ಬದ ನೆಲೆಯು ಪತ್ತೆಯಾಗಿದೆ. ಗವಿಮಠ ಪ್ರದೇಶದಲ್ಲಿ ಅಶೋಕನ ಶಾಸನವಿರುವ ಪೂರ್ವಕ್ಕೆ ಎರಡು ಗುಹೆಗಳಿವೆ. ಅಲ್ಲಿರುವ ಹಳದಿ-ಮಿಶ್ರಿತ ಮಸುಕು ಬಳಿ ದ್ವಿವರ್ಣದಲ್ಲಿ ವರ್ಣಚಿತ್ರ ಗಂಡು-ಹೆಣ್ಣಿನ ಚಿತ್ರವು ದೊರೆಕಿದೆ. ಮತ್ತೊಂದು ಗುಹೆಯಲ್ಲಿ ಸೂರ್ಯ, ಮನುಷ್ಯ, ಪ್ರಾಣಿ, ನೃತ್ಯ, ಮಾಡುತ್ತಿರುವ ಜನರ ಸಮೂಹ ಕೆಂಪು ಬಣ್ಣದ ಚಿತ್ರಗಳನ್ನು ಚಿತ್ರಿಸಲಾಗಿದೆ.[೬೭] ಇಂದರ್ಗಿಯಲ್ಲಿ ಈ ಕಾಲದ ಗವಿ ವರ್ಣಚಿತ್ರಗಳನ್ನು ಜೊತೆಗೆ ಬೂದಿದಿಬ್ಬ ಕಂಡುಬಂದಿದೆ.[೬೮] ಬಳ್ಳಾರಿ ಜಿಲ್ಲೆಯ ಅಪ್ಪಯ್ಯನಹಳ್ಳಿಯಲ್ಲಿ (ಕೂಡ್ಲಿಗಿ ತಾ) ಶಿಲಾತಾಮ್ರಯುಗ ನೆಲೆಯಿದೆ. ಬಳ್ಳಾರಿ

ತಾಲೂಕಿನ ಕುಡುತಿನಿಯಲ್ಲಿ ಈ ಕಾಲದ ಬೂದಿದಿಬ್ಬವಿದೆ. ಕಪಗಲ್‌ನಲ್ಲಿ ಹೆರಚುವ ಚಕ್ಕೆ, ಕುರುಗೋಡಿನಲ್ಲಿ ಗುಹಾಚಿತ್ರಗಳು, ಸಂಗನಕಲ್ಲಿನಲ್ಲಿ ವರ್ಣಚಿತ್ರಗಳು, ಮತ್ತು ತೆಕ್ಕಲಕೋಟೆಯಲ್ಲಿ ಮುಖ್ಯವಾಗಿ ಗೂಳಿಯ ವರ್ಣಚಿತ್ರಗಳಿವೆ.[೧೯]

ಭಾರತದ ಪಶ್ಚಿಮ ಮತ್ತು ವಾಯವ್ಯ ಭಾಗಗಳಲ್ಲಿ ಪೂರ್ಣವಾಗಿ ಬೆಳೆದ ಶಿಲಾತಾಮ್ರಯುಗ ಸಂಸ್ಕೃತಿಯ ನೆಲೆಗಳು (ಹರಪ್ಪ ಸಂಸ್ಕೃತಿ) ದೊರಕಿದೆ. ಮಧ್ಯ ಭಾರತದಲ್ಲಿ ಮಾಳವಾ ಮತ್ತು ಮಹಾರಾಷ್ಟ್ರದಲ್ಲಿನ ಜೋರ್ವೆ ಸಂಸ್ಕೃತಿ ಎಂದು ಹೆಸರಿಸಲಾಗಿದೆ. ಈ ಎರಡೂ ಸಂಸ್ಕೃತಿಗಳು ಮುಂದೆ ಬೇರೆ ಬೇರೆ ಪ್ರದೇಶಗಳಲ್ಲಿ ವ್ಯಾಪಿಸಿತು. ಅದರಲ್ಲಿ ದಕ್ಷಿಣ ಭಾರತದಲ್ಲಿ ಜೋರ್ವೆ ಸಂಸ್ಕೃತಿಯ ಪ್ರಭಾವ ಕಂಡುಬಂದಿದೆ. ಆದರೆ ಇಲ್ಲಿ ಪೂರ್ಣಪ್ರಮಾಣದ ನೆಲೆ ದೊರಕಿಲ್ಲ.

## ಬೃಹತ್‌ಶಿಲಾಯುಗ

ಕ್ರಿಪೂ. ೧ನೇ ಸಹಸ್ರಮಾನದಿಂದ ಪ್ರಾರಂಭವಾಗುವ ಬೃಹತ್‌ಶಿಲಾಯುಗ ಸಂಸ್ಕೃತಿಯ ಕಾಲಘಟ್ಟದಲ್ಲಿ ಕಬ್ಬಿಣವನ್ನು ಉತ್ಪಾದಿಸತೊಡಗಿದರು. ಈ ಸಂಸ್ಕೃತಿಯ ಬೆಳವಣಿಗೆಯ ಹಂತವನ್ನು ಕ್ರಿಪೂ. ೫೦೦ರಲ್ಲಿ ಗಂಗಾ–ದೊ–ಆಬ್‌ನಲ್ಲಿ ಗುರುತಿಸಲಾಗಿದೆ.[೨೦] ಇವರ ಕಾಲದ ವಸತಿನೆಲೆಗಳು ಬಹಳ ಕಡಿಮೆ ಪ್ರಮಾಣದಲ್ಲಿ ಗಂಗಾ–ದೊ–ಅಬ್ ಪ್ರದೇಶದಲ್ಲಿ ದೊರೆತಿವೆ. ಬೃಹತ್ ಶಿಲಾಯುಗದ ಕಾಲಘಟ್ಟದಲ್ಲಿ ಮಣ್ಣಿನ ಇಟ್ಟಿಗೆಯಿಂದ ಮತ್ತು ಮಣ್ಣಿನಿಂದ ಮೆತ್ತಿ ಕಟ್ಟಿದ ಅವಶೇಷಗಳು ಅತ್‌ರಂಜಿಖೇರದಲ್ಲಿ ದೊರೆತಿವೆ. ಇಲ್ಲಿ ಒಲೆ ಹಾಗೂ ಮಡಿಕೆಗಳನ್ನು ಸುಡುವ ಭಟ್ಟಿಗಳು ದೊರೆತಿವೆ.[೨೧] ಮನೆಗಳನ್ನು ಚೌಕವಾಗಿ ಕಟ್ಟಲಾಗಿದೆ. ಅಂದಿನ ಜನರು ಗೋಧಿ, ಬಾರ್ಲಿ ಹಾಗೂ ಭತ್ತವನ್ನು ಬೆಳೆಯುತ್ತಿದ್ದರು. ಹಸು, ಹಂದಿ ಮತ್ತು ಕುದುರೆಗಳನ್ನು ಸಾಕುತ್ತಿದ್ದರು. ಕಬ್ಬಿಣದ ವಸ್ತುಗಳನ್ನು ತಯಾರಿಸುವ ಕೇಂದ್ರ ಅಥವಾ ಕೈಗಾರಿಕೆಯು ಇಲ್ಲಿ ಕಂಡುಬಂದಿದೆ.[೨೨] ಜಾಖರ್ ಪ್ರದೇಶದಲ್ಲಿ ೪.೨೫ ಮೀಟರ್ ಅಗಲವಾದ ರಸ್ತೆ ಕಂಡುಬಂದಿದ್ದು ಇದು ಒಂದು ನಗರವಾಗಿತ್ತು ಎಂದು ತರ್ಕಿಸಲಾಗಿದೆ. ಈ ಪ್ರದೇಶದಲ್ಲಿ ೩೦೦ ನೆಲೆಗಳನ್ನು ಪತ್ತೆಹಚ್ಚಲಾಗಿದೆ. ರಾಜಸ್ಥಾನದ ಜೋಧಪುರದಲ್ಲಿ ಕಬ್ಬಿಣವನ್ನು ತಯಾರಿಸುವ ಕೇಂದ್ರಗಳು ಹಾಗೂ ಅದಿರು ಹಾಗೂ ಭತ್ತ, ಬಾರ್ಲಿ ಅವಶೇಷಗಳ ಜೊತೆಗೆ ಮೇಕೆ, ಹಸು, ಎಮ್ಮೆ, ಹಂದಿ, ಕುದುರೆಯ ಎಲಬುಗಳು ಇತ್ಯಾದಿ ಅವಶೇಷಗಳು ದೊರೆತಿವೆ.[೨೩]

ವೃತ್ತಾಕಾರ ಮತ್ತು ಚೌಕಾಕಾರದ ಮನೆಗಳು ಭಗವಾನ್‌ಪುರದಲ್ಲಿ ಕಂಡುಬಂದಿವೆ. ಮನೆಯ ಗೋಡೆಯನ್ನು ಕಟ್ಟಿಗೆಯಿಂದ ಕಟ್ಟಿ ಮಣ್ಣಿನಿಂದ ಮೆತ್ತಿ ಗಟ್ಟಿಗೊಳಿಸಲಾಗುತ್ತಿತ್ತು.[೨೪]

ನೋಹಾ ಮತ್ತು ಅತ್‌ರಂಜಿಖೇರ್ ಪ್ರದೇಶದ ಜನರು ಬಟ್ಟೆಯನ್ನು ನೇಯುತ್ತಿದ್ದರು.[೭೫] ದೊ-ಅಬ್ ಪ್ರದೇಶದಲ್ಲಿನ ನೆಲೆಗಳು ಉತ್ತಮ ಸ್ಥಿತಿಯಲ್ಲಿರುವುದು ಕಂಡುಬಂದಿದೆ. ಉತ್ತರಪ್ರದೇಶದ ಗುಡ್ಡ ಪ್ರದೇಶಗಳಾದ ವಾರಾಣಾಸಿ, ಹತಿನಿಯಾ-ಪಹರಾ (Hathinia-Pahara) ಪ್ರದೇಶಗಳ ಕಟ್ಟಡಗಳ ಅವಶೇಷಗಳು ದೊರೆಕಿವೆ. ಮಣ್ಣಿನಿಂದ ಕಟ್ಟಿದ ೩ ಕೊಠಡಿಗಳ ಮನೆ ದೊರೆತಿದೆ.[೭೬] ಅಲಹಾಬಾದ್, ಬಾಂದಾ, ಮಿರ್ಜಾಪುರ ಮತ್ತು ವಾರಾಣಾಸಿಗಳಲ್ಲಿ ಈ ಸಂಸ್ಕೃತಿಯ ನೆಲೆಗಳು ದೊರೆತಿವೆ. ಬೈರದ್ಯೆರ-ದುಮ್ಮನಾಹ, ದೇವಿಘಾಟ್ (Deoghat), ಕೌರಿಹರ್ (Kaurihar), ಖಜುರಿ (Khajuri), ಮಲಬಾರ (Malabara) ಮುಬಾರಕ್‌ಪುರ್ (Mubarakpur) ತಿರಸಿಯಲ್ಲಿ (Tirasi) ಕಪ್ಪು ಮತ್ತು ಕೆಂಪು, ಪೂರ್ಣ ಕಪ್ಪು, ಪೂರ್ಣ ಕೆಂಪು, ಕೆಲವು ಕಪ್ಪು ಬಣ್ಣದಿಂದ ಚಿತ್ರ ಬಿಡಿಸಿದ, ಮತ್ತು ಕೆಂಪು ಬಣ್ಣದ ಮಡಿಕೆಗಳು ದೊರೆತಿವೆ.[೭೭] ಅಲಹಾಬಾದ್ ಜಿಲ್ಲೆಯಲ್ಲಿ ಹರ್ದುನ್ (Hardun) ಮತ್ತು ಕೊಟಿಯಾ (Kotia) ಗ್ರಾಮದ ನೆಲೆಗಳಲ್ಲಿ ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆಗಳು, ತಿಳಿ ಕೆಂಪು ಬಣ್ಣದ ಮಡಿಕೆ ಚೂರುಗಳು ದೊರಕಿವೆ.[೭೮] 

ನಾಗಪುರ ಜಿಲ್ಲೆಯ ನಾಯ್‌ಕುಂಡ್‌ನಲ್ಲಿ ಮಾನವನ ವಸತಿನೆಲೆ ಮತ್ತು ಶಿಲಾವೃತ್ತ (Stone-Circle) ಗೋರಿಗಳು ದೊರೆತಿವೆ. ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆಗಳು, ಬಟ್ಟಲು, ಊಟದ ತಟ್ಟೆಗಳು, ಕಬ್ಬಿಣ, ಬಂಗಾರದ ಆಭರಣ ಮತ್ತು ಕುದುರೆಯ ಮೂಳೆ ದೊರಕಿದೆ. ಪೆಂಚ (Pench) ನದಿಯ ಎಡ ದಂಡೆಯ ಮೇಲೆ ಸಹ ನೆಲೆಗಳು ಕಂಡುಬಂದಿವೆ. ಅಲ್ಲಿ ಕಪ್ಪು ಮತ್ತು ಕೆಂಪು, ಕಪ್ಪು ಮೇಲೆ ಕೆಂಪು ಬಣ್ಣದ ಮಡಿಕೆಗಳು ದೊರಕಿವೆ. ಗುಡಿಸಲನ್ನು ಕಟ್ಟಲು ಸುತ್ತಲೂ ಕುಳಿಗಳನ್ನು ಮಾಡಿರುವುದು ಕಂಡುಬಂದಿದೆ. ಮನೆಯ ನೆಲವನ್ನು ಮಣ್ಣು ಮತ್ತು ಸುಣ್ಣದಿಂದ ಗಟ್ಟಿಗೊಳಿಸಿದ್ದಾರೆ. ಇಲ್ಲಿ ಹೆಚ್ಚಾಗಿ ಹಸು, ಕುದುರೆ, ಕುರಿ, ಮೇಕೆ, ಹಂದಿ, ನಾಯಿ, ಮುಂತಾದ ಪ್ರಾಣಿಗಳ ಅವಶೇಷಗಳು ದೊರಕಿವೆ.[೭೯] ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ ಧಾರನಿಕೋಟ ಗ್ರಾಮದಲ್ಲಿ ಮಡಿಕೆ ಚೂರುಗಳು, ಒಲೆ, ಅದರ ಜೊತೆಗೆ ಕಬ್ಬಿಣ ಉತ್ಪಾದನಾ ಕೇಂದ್ರವನ್ನು ಶೋಧಿಸಲಾಗಿದೆ. ಮನೆಗಳಲ್ಲಿ ಕಟ್ಟಿದ ಕುಳಿಗಳು, ಚರಂಡಿಯ ನಾಲೆ, ಮಡಿಕೆ ಚೂರುಗಳು ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆ ಚೂರುಗಳು, ಬಂಗಾರ ತಯಾರು ಮಾಡುವ ಕೇಂದ್ರ, ಜೊತೆಗೆ ಗಾಜಿನ ಬಳೆ, ಕಿವಿಯ ಓಲೆ ಮತ್ತು ವಿವಿಧ ರೀತಿಯ ಓಲೆಗಳು ದೊರಕಿವೆ. ಚರಂಡಿಯ ನಾಲೆ ಮತ್ತು ಇಂಗುಗುಂಡಿ ಕಂಡುಬಂದಿದೆ. ವಿವಿಧ ಬಣ್ಣದ ಗಾಜಿನ ಬಳೆಗಳು ಸಹ ಪತ್ತೆಯಾಗಿವೆ.[೮೦] ತಮಿಳುನಾಡಿನ ಪಯ್ಯಂಪಲ್ಲಿಯಲ್ಲಿ ಕುಳಿಗಳಿರುವ ಸುಣ್ಣದ ನೆಲ ಗಟ್ಟಿನ ವೃತ್ತಾಕಾರ ಮತ್ತು ಚೌಕಾಕಾರ ಮನೆಗಳು ಉತ್ಖನನದಲ್ಲಿ ಪತ್ತೆಯಾಗಿವೆ. ಧಾನ್ಯಗಳನ್ನು ಸಂಗ್ರಹಿಸುವ ವೃತ್ತಾಕಾರದ ಮಡಿಕೆಗಳು, ಕಬ್ಬಿಣದ ಚಾಕು, ಮೊಳೆ ಮತ್ತು ಸುಟ್ಟ ಮಣ್ಣಿನ ಪಕ್ಷಿ,

ಪ್ರಾಣಿ, ಗಾಜಿನ ಬಳೆ, ದಂತದ ಬಳೆ, ಅಮೂಲ್ಯವಾದ ಮಣಿಗಳು ಮತ್ತು ರುಬ್ಬವ ಕಲ್ಲು ಮತ್ತು ಅಧಿಕ ಪ್ರಮಾಣದಲ್ಲಿ ಕಬ್ಬಿಣದ ಅದಿರು ದೊರಕಿವೆ. ಅಲ್ಲಿ ಕಪ್ಪು-ಕೆಂಪು ಬಣ್ಣದ ಮತ್ತು ಕೆಂಪು ಬಣ್ಣದ ಮಡಿಕೆಗಳು ತಯಾರಿಸುತ್ತಿದ್ದು ಕೇಂದ್ರ ಹಾಗೂ ಬೇಳೆಕಾಳು, ರಾಗಿಯನ್ನು ಕುರುಹುಗಳು ಉತ್ಪನನದಲ್ಲಿ ಪತ್ತೆಯಾಗಿವೆ.[೮೧]

ಬೃಹತ್‌ಶಿಲಾಯುಗ ಕಾಲದ ವಾಸದ ನೆಲೆಗಳು ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯ ರಾಖಂಗೀರ್ (Ra-Khamgir) ನಲ್ಲಿ, ಗದಗ ಜಿಲ್ಲೆಯ ರೋಣ ತಾಲೂಕಿನ ಉಣಚಗೇರಿ ಗ್ರಾಮದ ಸೋಮೇಶ್ವರ ಬೆಟ್ಟದಲ್ಲಿ ದೊರಕಿದೆ.[೮೨] ರಾಯಚೂರು ಜಿಲ್ಲೆಯ ಆನಂದಗಲ್, ಕರಡಿಗುಡ್ಡ, ಕಲ್ಲೂರು, ಕೋಟೆಕಲ್ಲು, ಗೋಕಕಲ್ಲು, ನವಿಲಕಲ್ಲು, ಪಟಕನದೊಡ್ಡಿ, ಟೈಲ್‌ಮರ್ಚಡ್, ವಟಗಲ್, ಹಾಲಾಪುರ, ಆಕನೂರು, ಪಿಕ್ಲಿಹಾಳು, ಮಸ್ಕಿ, ವಂದಲಿ, ಸಾನಬಾಳ ಮತ್ತು ಗೋಬರಕಲ್ಲು, ಪ್ರದೇಶಗಳಲ್ಲಿ ವಸತಿನೆಲೆಗಳು ದೊರೆತಿವೆ.[೮೩] ಕೊಪ್ಪಳ ಜಿಲ್ಲೆಯ ಬಿಳೇಬಾವಿ, ಬೆಣಕಲ್‌ಗುಡ್ಡ ಶಿವಪುರದಲ್ಲಿ ಕಪ್ಪು-ಕೆಂಪು ವರ್ಣದ ಮಡಿಕೆ ಚೂರುಗಳು ಮತ್ತು ಗವಿಚಿತ್ರಗಳು ಕಂಡುಬಂದಿದೆ.[೮೪] ಅದೇ ರೀತಿ ಗಂಗಾವತಿ ತಾಲೂಕಿನ ಚಿಕ್ಕಬೆಣಕಲ್, ಚಿಕ್ಕರಾಮಾಪುರ, ಜಂಗಮರ ಕಲ್ಲುಡಿ, ತಿಮ್ಮಾಪುರ, ಬಸರಿಹಾಳು, ಬಂಡರಹಾಳು, ಮರಕುಂಬಿ, ಮಲ್ಲಾಪುರ, ಎಮ್ಮಿಗುಡ್ಡ, ಈ ಪ್ರದೇಶಗಳಲ್ಲಿ ಬೃಹತ್ ಶಿಲಾಯುಗದ ಅವಶೇಷಗಳು ದೊರೆತಿವೆ.[೮೫]

ಬೃಹತ್‌ಶಿಲಾಯುಗ ಸಂಸ್ಕೃತಿ ಕಾಲದ ವಸತಿನೆಲೆಗಳು ತುಂಬಾ ಕಡಿಮೆ ಪ್ರಮಾಣದಲ್ಲಿ ಕಂಡುಬಂದಿವೆ. ಅದರಲ್ಲಿಯೂ ಕರ್ನಾಟಕದಲ್ಲಿ ಈ ಕಾಲದ ವಸತಿನೆಲೆಗಳ ಅವಶೇಷಗಳು ಅತ್ಯಂತ ವಿರಳವಾಗಿವೆ. ಆದ್ದರಿಂದ ನಮಗೆ ಕರ್ನಾಟಕದಲ್ಲಿ ಪೂರ್ಣ ಪ್ರಮಾಣದ ವಸತಿನೆಲೆಗಳ ಅಧ್ಯಯನವಾಗಬೇಕಿದೆ. ಈ ಎಲ್ಲಾ ಕಾಲದ ವಸತಿನೆಲೆಗಳ ಚಾರಿತ್ರಿಕ ಹಿನ್ನೆಲೆಯನ್ನು ಅಧ್ಯಯನ ಮಾಡಲಾಗಿ ನಾವು ಒಂದು ಹಂತದ ನಗರೀಕರಣ ಪ್ರಕ್ರಿಯೆಯನ್ನು ನೋಡುತ್ತೇವೆ. ಈ ಹಿನ್ನೆಲೆಯಲ್ಲಿ ವಸತಿನೆಲೆಗಳ ಚರಿತ್ರೆಯಲ್ಲಿ ಕರ್ನಾಟಕವು ಒಂದೊಂದು ಕಾಲಘಟ್ಟದಲ್ಲಿಯೂ ನೆಲೆಗಳ ವಿಶೇಷತೆಯನ್ನು ತೋರಿಸಿಕೊಟ್ಟಿದೆ.

ಎರಡನೇ ಹಂತದ ನಗರೀಕರಣ ಪ್ರಾರಂಭವಾಗುವುದು ಮೌರ್ಯರ ಕಾಲದಿಂದ ಇವರ ಕಾಲದಲ್ಲಿ ನಮಗೆ ಉತ್ತಮ ನಗರೀಕರಣದ ಕುರುಹುಗಳು ದೊರೆಯುತ್ತವೆ. ಮೊದಲನೇ ಹಂತದ ನಗರೀಕರಣದಲ್ಲಿ ಶಿಲಾತಾಮ್ರಯುಗದ ನೆಲೆಗಳ ಕುರುಹುಗಳು ಪೂರ್ಣ ರೀತಿಯ ಮಾಹಿತಿಯನ್ನು ಅಧ್ಯಯನಕ್ಕೆ ನೀಡುತ್ತವೆ. ಅದೇ ರೀತಿಯಾಗಿ ಎರಡನೇ ಹಂತದ ನಗರೀಕರಣದಲ್ಲಿ ಕೆಲವು ನೆಲೆಗಳು ಮಾಹಿತಿಯನ್ನು ದೊರಕಿಸಿ ಕೊಡುತ್ತವೆ.

## ಮೌರ್ಯರ ಕಾಲದ ನೆಲೆಗಳು : ಆದಿಇತಿಹಾಸ ಕಾಲ

ಆದಿಇತಿಹಾಸ ಕಾಲದಲ್ಲಿ ನಗರ ವಿನ್ಯಾಸ ಕುರಿತು ಕೆಲವು ಸಾಹಿತ್ಯಿಕ ಉಲ್ಲೇಖಗಳಿವೆ. ಕ್ರಿ.ಪೂ. ೮-೪ ಶತಮಾನದಲ್ಲಿ ರಚನೆಯಾದ ವಾಲ್ಮೀಕಿ ರಾಮಾಯಣದಲ್ಲಿ ಅಯೋಧ್ಯ ಮತ್ತು ಪಾಟಲಿಪುತ್ರ ನಗರ ಕುರಿತು ಉಲ್ಲೇಖಿಸಲಾಗಿದೆ. ಅದರಲ್ಲಿನ ವರ್ಣನೆಯಂತೆ ಅಯೋಧ್ಯ ನಗರವು ಚೌಕವಾಗಿದ್ದು ೧೨ ಯೋಜನೆಯಷ್ಟು ಉದ್ದ ಮತ್ತು ಅಗಲ ೩ ಯೋಜನೆಯಷ್ಟಿದೆ. ರಾಜ ಬೀದಿಯು ನಗರದ ಮಧ್ಯದಿಂದ ಹಾದು ಹೋಗುತ್ತದೆ. ಅದು ಮುಂದೆ ನಗರವನ್ನು ಸುತ್ತುವರೆದು ನಂತರ ಕೋಟೆ ಬಾಗಿಲನ್ನು ಸೇರುತ್ತದೆ. ಪಟ್ಟಣವು ಚೌಕವಾಗಿದ್ದು ಏಳು ಅಂತಸ್ಥಿನ ಮನೆಗಳಿವೆ. ಇಲ್ಲಿ ಮಾರುಕಟ್ಟೆ, ತೋಟಗಳು ಹಾಗೂ ಪಟ್ಟಣದಲ್ಲಿ ಸಾಲು ಮರಗಳಿವೆ.[೮೬] ಪಾಟಲಿಪುತ್ರದಲ್ಲಿನ ರಸ್ತೆಯು ೧೪.೪೮೪೧ ಕಿ.ಮೀ. ಉದ್ದ ೧.೯೯೩೪ ಕಿ.ಮೀ. ಅಗಲ.[೮೭] ಕ್ರಿ.ಪೂ. ೪ನೇ ಶತಮಾನದ ಪಾಣಿನಿಯ ಅಷ್ಟಾಧ್ಯಾಯದಲ್ಲಿ ಚಿಕ್ಕ ಹಳ್ಳಿಯನ್ನು ಖೇತ ಮತ್ತು ಗೋಸ ಹಸುಗಳನ್ನು ಹೊಂದಿದ ಜನರು ವಾಸಿಸುವ ಸ್ಥಳ ಎಂದು ದಾಖಲಿಸಿದೆ. ಇವುಗಳನ್ನು ಹೊಂದಿಕೊಂಡು ಮಹಾಗ್ರಾಮಗಳಿರುತ್ತವೆ.[೮೮] ನಗರವನ್ನು ಭೌಗೋಳಿಕವಾಗಿ ೩ ಭಾಗಗಳನ್ನಾಗಿ ಮಾಡಲಾಗಿದೆ. ಒಂದು ಉದಿಚ್ಯಗ್ರಾಮ ಮತ್ತು ಪ್ರಚಗ್ರಾಮ. ಉದಿಚ್ಯ ನಗರ ಇರುವುದು "ವಾಹಿಕ" ರಾಜ್ಯದಲ್ಲಿ ಕೆಲವೊಮ್ಮೆ ದಕ್ಷಿಣ ಭಾಗವನ್ನು ಉಸಿನರ ಎಂದು ಕರೆಯುವರು. "ವಾಹಿಕ" ಭಾಗ ವಾಯವ್ಯ ಭಾಗದಲ್ಲಿ ಬರುತ್ತದೆ.[೮೯] ಈ ಗ್ರಾಮಗಳು ಕಾಡು, ಬೆಟ್ಟ, ನದಿ, ಜಂಗಲ್, ಪ್ರದೇಶದ ಹತ್ತಿರದಲ್ಲಿ ಬೆಳೆದುಕೊಂಡಿರುತ್ತವೆ. ಇಲ್ಲಿನ ಕುಟೀರಗಳಿಗೆ ಸಾಧಾರಣವಾಗಿ ಛತ್ತಿಗೆ ಕಟ್ಟಿಗೆಯನ್ನು ಜೋಡಿಸಿ ಹುಲ್ಲನ್ನು ಹೊದಿಸಲಾಗುತ್ತಿತ್ತು. ಒಂದು ಹಳ್ಳಿಯಲ್ಲಿ ಒಂದು ಅಥವಾ ಎರಡು ಕುಟೀರಗಳಿರುತ್ತವೆ. ಈ ಎಲ್ಲಾ ಹಳ್ಳಿಗಳು ಕೂಡಿಕೊಂಡು ಗ್ರಾಮಗಳಾಗುತ್ತವೆ. ಗ್ರಾಮಗಳಲ್ಲಿ ಬಾವಿಗಳಿರುತ್ತವೆ. ಹೆಚ್ಚು ಹಸುಗಳನ್ನು ಕೃಷಿ ಭೂಮಿ ಮತ್ತು ಹುಲ್ಲುಗಾವಲು ಪ್ರದೇಶವನ್ನು ಹೊಂದಿರುತ್ತಾರೆ.

ನಗರಗಳು ಕೋಟೆಗೋಡೆಗಳಿಂದ ಸುತ್ತುವರೆದಿರುತ್ತದೆ. ಕೋಟೆಗೆ ಕಂದಕಗಳು ಮತ್ತು ಬಾಗಿಲುಗಳಿವೆ. ಇದರ ಒಳ ಭಾಗದಲ್ಲಿ ರಾಜನ ಅರಮನೆ, ಸಭಾಭವನ, ಅಧಿಕಾರಿಗಳ ಮನೆಗಳು, ವ್ಯಾಪಾರಸ್ತರು, ಅಂಗಡಿಯ ಮಳಿಗೆಗಳು, ಆಟದ ಮೈದಾನ, ಸಾಂಸ್ಕೃತಿಕ ಕಾರ್ಯಕ್ರಮದ ಭವನಗಳು ಹೀಗೆ ಮುಂತಾದ ಕಟ್ಟಡಗಳಿರುತ್ತವೆ. ಒಂದಕ್ಕಿಂತ ಹೆಚ್ಚು ಅಂತಸ್ಥಿನ ಮನೆಗಳಿರುತ್ತವೆ.[೯೦]

ಕ್ರಿ.ಪೂ. ೩ನೇ ಶತಮಾನದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ನಗರ ವಿನ್ಯಾಸದ ವಿವರಣೆಯಿದೆ ಅದರಂತೆ ನಗರವು ಕೋಟೆಯಿಂದ ಸುತ್ತುವರೆದಿರುತ್ತದೆ. ಅದರ ಮಧ್ಯ ಭಾಗದಲ್ಲಿ

ಮೂರು ರಾಜ ಮಾರ್ಗಗಳು ಪೂರ್ವದಿಂದ–ಪಶ್ಚಿಮಕ್ಕೆ ಮತ್ತು ದಕ್ಷಿಣದಿಂದ–ಉತ್ತರಕ್ಕೆ ಹಾದು ಹೋಗುತ್ತದೆ. ಇವುಗಳಿಗೆ ಹೊಂದಿಕೊಂಡು ಮನೆಗಳಿರುತ್ತವೆ. ಉತ್ತರ ಅಥವಾ ಪೂರ್ವ ಭಾಗದಲ್ಲಿ ರಾಜರ ಅರಮನೆಗಳು ಕೋಟೆಗೋಡೆಯಿಂದ ಆವರಿಸಿರುತ್ತದೆ. ರಾಜಗುರುಗಳು, ಅಧಿಕಾರಿಗಳು, ಅರಮನೆಗಳು ಈಶಾನ್ಯ ಭಾಗದಲ್ಲಿರುತ್ತಾರೆ. ರಾಜನ ಅಡುಗೆಮನೆ, ಆನೆಲಾಯ,




Fig. 11.6. A city and its surroundings, after the Arthasastra (courtesy L. N. Rangarajan).

ಸಂಗ್ರಹಿಸುವ ಮನೆ ಆಗ್ನೇಯ ದಿಕ್ಕಿಗಿರುತ್ತದೆ. ಪೂರ್ವ ಭಾಗದಲ್ಲಿ ಕ್ಷತ್ರಿಯರಾದ ಸುಗಂಧ, ಹಾರ, ಬೀಜ/ಕಾಳು, ಎಣ್ಣೆ ಮುಂತಾದ ವ್ಯಾಪಾರಸ್ಥರ ಮನೆಗಳಿವೆ. ರಾಜ ಭಂಡಾರ, ಲೆಖ್ಖ ಪತ್ರ ಇಲಾಖೆ, ವಿವಿಧ ವಸ್ತುಗಳನ್ನು ತಯಾರಿಸುವ ಕೇಂದ್ರ ಆಗ್ನೇಯಕ್ಕಿರುತ್ತದೆ. ಕಟ್ಟಿಗೆಯಿಂದ ತಯಾರಿಸಿದ ಅಥವಾ ಕಟ್ಟಿಗೆ ಮತ್ತು (Arsenal) ಶಸ್ತ್ರಾಗಾರ ಕಟ್ಟಡವು ನೈರುತ್ಯಕ್ಕಿದೆ (South-west) ನಗರದ ದಕ್ಷಿಣದಲ್ಲಿ ಮುಖ್ಯವಾಗಿ ವ್ಯಾಪಾರ ಮತ್ತು ವಾಣಿಜ್ಯ, ವಸ್ತುಗಳನ್ನು ತಯಾರಿಸುವ, ಎಣ್ಣೆಗಾರರ, ಅಕ್ಕಿ ವ್ಯಾಪಾರಿ, ಮಾಂಸ ವ್ಯಾಪಾರಿ, ವೇಶ್ಯಾವಾಟಿಕೆ, ಸಂಗೀತಗಾರರು ಮತ್ತು ವೈಶ್ಯ ಜನಾಗದವರು ವಾಸಿಸುತ್ತಾರೆ. ನೈರುತ್ಯದಲ್ಲಿ (South-west)

ಕತ್ತೆಗಳ, ಒಂಟೆಗಳ ಮತ್ತು ಕೆಲಸಗಾರರ ಮನೆಗಳಿವೆ. ವಾಯವ್ಯ ದಿಕ್ಕಿನಲ್ಲಿ ಬಂಡೆ, ರಥ, ವಾಹನಗಳನ್ನು ನಿಲ್ಲಿಸುವ ಸ್ಥಳ. ಪಶ್ಚಿಮದಲ್ಲಿ ದ್ವಾರ, ಹತ್ತಿಯಿಂದ ತಯಾರಿಸುವ ಮತ್ತು ಬಂಬೂ




Fig. 11.6. A city and its surroundings, after the Arthasastra (courtesy L. N. Rangarajan).

ಚಾಪೆ, ಯುದ್ಧ ಕವಚ, ಆಯುಧ ತಯಾರಿಸುವವರು ವಾಸಿಸುತ್ತಿದ್ದರು. ಅಲ್ಲಿಯೇ ಶೂದ್ರರು ಇರುತ್ತಿದ್ದರು. ವಾಯುವ್ಯಕ್ಕೆ ಅಂಗಡಿಗಳು ಮತ್ತು ಆಸ್ಪತ್ರೆಗಳಿರುತ್ತವೆ. ಈಶಾನ್ಯಕ್ಕೆ ಭಂಡಾರ (Treasury) ಮತ್ತು ಹಸುಗಳು ಮತ್ತು ಕುದುರೆಗಳ ವಾಸಕ್ಕೆ ಲಾಯವನ್ನು ರಚಿಸಲಾಗಿದ್ದವು. ಉತ್ತರದಲ್ಲಿ ನಗರವನ್ನು ಕಾಪಾಡುವ ಪ್ರಮುಖ ದೇವತೆಯಿರುತ್ತದೆ. ಮತ್ತು ಬ್ರಾಹ್ಮಣರು, ಕಮ್ಮಾರರು, ಅಮೂಲ್ಯ ಹರಳುಗಳ, ಮಣಿಗಳ ಕೆಲಸಗರರು ಇರುತ್ತಾರೆ. ನಗರದ ಮಧ್ಯಭಾಗದಲ್ಲಿ ವಿಷ್ಣು, ಶಿವ, ಅಪರಾಜಿತ ಮುಂತಾದ ದೇವಾಲಯವಿರುತ್ತದೆ.

ಉತ್ತರ ಅಥವಾ ಪೂರ್ವ ದಿಕ್ಕಿನಲ್ಲಿ ಸ್ಮಶಾನವಿರುತ್ತದೆ. ಮೇಲ್ವರ್ಗದ ಜನರ ಸ್ಮಶಾನವು ನಗರದ ದಕ್ಷಿಣಕ್ಕಿರುತ್ತದೆ. ಈ ಪ್ರದೇಶದ ಸುತ್ತಮುತ್ತಲೂ ಚಾಂಡಾಲರ ನೆಲೆಯಿರುತ್ತದೆ.[೯೧] ಹಳ್ಳಿಗಳಲ್ಲಿ ಒಂದು ನೂರು ಮನೆಯಿಂದ ಐದುನೂರು ವ್ಯವಸಾಯ ಮಾಡುವವರ ಮನೆಗಳಿರುತ್ತದೆ. ಈ ರೀತಿಯ ಹಳ್ಳಿಗಳ ಗುಂಪುಗಳು ನಗರವನ್ನು ಸುತ್ತುವರೆದಿವೆ. ಹಳ್ಳಿಗಳು ಸಮಗ್ರಹನ, ಕರ್ವತಿಕ ಮತ್ತು ದ್ರೋಣಮುಖ ಎನ್ನುವ ನಗರಗಳಿಗೆ ಮಾರುಕಟ್ಟೆ ಮತ್ತು ಆಡಳಿತ,

ಕಾರ್ಯಗಳಿಗೆ ಸಹಾಯವಾಗುತ್ತವೆ. ಒಂದೊಂದು ನಗರವು ಎರಡು ನೂರರಿಂದ ನಾಲ್ಕು ನೂರು ಹಳ್ಳಿಗಳನ್ನು ಹೊಂದಿರುತ್ತವೆ. ಇವುಗಳು ಮುಖ್ಯ ಪಟ್ಟಣ ಅಥವಾ ಸ್ಥಾನಿಯಕ್ಕೆ ಹೊಂದಿಕೊಂಡಿರುತ್ತದೆ. ಇದು ಎಂಟುನೂರು ಗ್ರಾಮಗಳನ್ನು ಹೊಂದಿರುತ್ತದೆ.[೨]




Fig. 11.5. Layout of a fortified settlement, according to the Arthasastra (courtesy L. N. Rangarajan).

ಕೃಪೆ: Allchin F.R, *The Archaeology of Early Historic South Asia*

ಕ್ರಿ.ಪೂ. ೪೦೦ರಲ್ಲಿ ಅಜಾತಶತ್ರುವಿನ ಕಾಲದ ವೈಶಾಲಿ ರಾಜ್ಯದಲ್ಲಿನ ಹಳ್ಳಿಯಾದ ಪಟಲಿಗಮದಲ್ಲಿ ಮೊದಲು ಕಟ್ಟಿಗೆಯಿಂದ ಕಟ್ಟಿದ ಕೋಟೆಗೋಡೆಯ ಕುರುಹು ದೊರೆತಿದೆ. ನೆಲೆಯೂ ದಕ್ಷಿಣ ಮತ್ತು ಪಶ್ಚಿಮ ನದಿ ದಂಡೆಯಾದ ಸೊನ್ ಹಾಗೂ ಪುಂಪುನ್ (Punpun) ನದಿಗೆ ಅಡ್ಡವಾಗಿ ಕೋಟೆಯನ್ನು ಕಟ್ಟಲಾಗಿದೆ.

ಇಂದಿನ ಪಟ್ನಾ (ಪಾಟಲಿಪುತ್ರ) ನಗರ ವಿನ್ಯಾಸವನ್ನು ಕುರಿತಂತೆ ಚಂದ್ರಗುಪ್ತನ ಕಾಲದಲ್ಲಿ ಭೇಟಿ ನೀಡಿದ ಮೆಗಾಸ್ಥನಿಸ್‌ನು ಮಾಹಿತಿ ನೀಡಿದ್ದಾರೆ. ಈ ನಗರವು ೧೪.೪೮೪೧ ಕಿ.ಮೀ. ಉದ್ದ (೯ ಮೈಲಿ) ೨.೭೩೫೮೮ ಕಿ.ಮೀ. ಅಗಲವಿದೆ. (೧.೭ ಮೈಲಿ) ೩೩.೭೯೬೨೨

ಕಿ. ಮೀಟರ್. ಸುತ್ತುವರೆದಿದೆ. ಈ ಮಾಹಿತಿಯನ್ನು ಹೋಲಿಸಿ ಇಲ್ಲಿ ದೊರೆತ ಅವಶೇಷಗಳನ್ನು ಆಧರಿಸಿ ಕೋಟೆಗೋಡೆಯು ೨.೪೧೪೦೨ ಕಿ.ಮೀ. (೧.೫ ಮೈಲಿ) ಪಶ್ಚಿಮ ದಿಕ್ಕಿನಲ್ಲಿ ಮತ್ತು ಪೂರ್ವ ದಿಕ್ಕಿನಲ್ಲಿ ೧.೬೦೯೩೪ ಕಿ.ಮೀಟರ್ ಇದೆ. ಉಳಿದ ದಿಕ್ಕಿನಲ್ಲಿ ೧೧.೨೬೫೪೧ ಕಿ.ಮೀ. (೭ ಮೈಲಿ) ಎಂದು ಅಂದಾಜಿಸಲಾಗಿದೆ. ಈ ಕೋಟೆಯ ಸುತ್ತಲು ಅಗಲವಾದ ಕಂದಕಗಳಿವೆ. ಕೆಲವು ಕಡೆ ೧೮೨.೮೮ ಮೀ. ಅಗಲ (೬೦೦ ಅಡಿ) ೧೩.೭೬೧ ಮೀ ಆಳವಿದೆ. (೪೫ ಅಡಿ) ಕಟ್ಟಿಗೆಯಿಂದ ಸಮಗೊಳಿಸಲಾಗಿದೆ. ೫೭೦ ವೀಕ್ಷಣಾ ಗೋಪುರಗಳು ೬೪ ಕೋಟೆ ಬಾಗಿಲುಗಳಿವೆ. ಮೆಗಾಸ್ಥನಿಸ್ ಹೇಳಿಕೆಯಂತೆ ೪,೫೦೦ ಹೆಕ್ಟೇರ್ ಪ್ರದೇಶದಷ್ಟು ವ್ಯಾಪಕವಾಗಿತ್ತು. ಆದರೆ ಇಂದು ದೊರೆತ ಆಧಾರದ ಪ್ರಕಾರ ೩,೩೦೦ ಹೆಕ್ಟೇರ್ ಪ್ರದೇಶದಲ್ಲಿ ೩೪೦ ಹೆಕ್ಟೇರ್ ಪ್ರದೇಶದಲ್ಲಿ ಕಟ್ಟಿಗೆಯ ಕೋಟೆಗೋಡೆ ಮತ್ತು ಕಂದಕಗಳು ಕಂಡುಬಂದಿವೆ. ಉತ್ಖನನದಲ್ಲಿ ೪ ಮೀ. ಅಗಲವಾದ ಎರಡು ಸಾಲಿನ ಕಟ್ಟಿಗೆಯನ್ನು ಭೂಮಿಯಲ್ಲಿ ನೆಡಲಾಗಿದೆ. ಬೇರೆ ಕಟ್ಟಡದ ಕಂಬಗಳ ಭವನದ ಅವಶೇಷ ದೊರೆತಿದೆ. ಈ ಕಟ್ಟಡದ ಸುತ್ತಲೂ ಕಟ್ಟಿಗೆಯ ಕಂಬಗಳನ್ನು ನಿಲ್ಲಿಸಲಾಗಿದೆ.[೩]

ಪಾಟಲಿಪುತ್ರದಲ್ಲಿ ದೊರೆತ ಕಂಬಗಳ ಭವನದಲ್ಲಿ ೮೦ ಕುಳಿಗಳು ದೊರೆತಿವೆ. ಒಂದೊಂದು ಕಂಬಗಳ ಅಂತರ ಮತ್ತು ಆಳ ೧.೫೨ ಹಾಗೂ ೧.೮೩ ಮೀಟರ್ ಒಂದೊಂದು ಕುಳಿಗಳ ಅಂತರದ ಕಟ್ಟೆಯ ಮೇಲೆ ೧೫ ಸೆಂ.ಮೀಟರ್. ದಪ್ಪವಾದ ನೀಲಿ ಬಣ್ಣದ ಮಣ್ಣಿನಿಂದ




Fig. 11.13. Pataliputra, Kumrahar, plan of the pillared hall (after Altekar an
Mishra).

ಸಮಗೊಳಿಸಿ ಅದರ ಮೇಲೆ ೧.೪ಮೀ. ಅಳತೆಯ ಕಟ್ಟಿಗೆಯನ್ನು ಜೋಡಿಸಲಾಗಿದೆ. ಈ ರೀತಿಯ ಕಟ್ಟೆಯ ಮೇಲೆ ಕಂಬಗಳನ್ನು ನೆಡಲಾಗಿದೆ. ಸಂಪೂರ್ಣವಾಗಿ ತಳಪಾಯದ ಎತ್ತರ ೧.೦೭ಮೀ. ಯಿದೆ. ಉತ್ಖನನದಲ್ಲಿ ದೊರೆತ ಆಧಾರದ ಪ್ರಕಾರ ಕಂಬಗಳ ಉದ್ದ ೯.೬ ಮೀ. ಆದರೆ ೨.೭ ಮೀ.ನಷ್ಟು ಸುಟ್ಟುಹೋಗಿದೆ. ಈ ಸುಟ್ಟ ಕಟ್ಟಿಗೆಯ ಬೂದಿ ದಪ್ಪವಾಗಿ ಬಿದ್ದಿದೆ.[೪] ಈ ನೆಲೆಯನ್ನು ಕ್ರಿ.ಪೂ. ಎರಡನೇ ಶತಮಾನದ್ದಾಗಿದೆ. ಶಾತವಾಹನರ ಕಾಲದ ವಸತಿನೆಲೆಯ ಕಟ್ಟಡಗಳ ರಚನಾ ವಿನ್ಯಾಸವು ಉತ್ಖನನದಲ್ಲಿ ದೊರೆತಿದೆ. ಮಹಾರಾಷ್ಟ್ರದ ಬ್ರಹ್ಮಪುರಿಯಲ್ಲಿ ಅಡಿಗೆ ಮನೆಯಲ್ಲಿ ೧೦ ಅಡಿ ೬ ಇಂಚು ಅಳತೆಯ ಎರಡು ಒಲೆಗಳ ಅವಶೇಷಗಳು ದೊರಕಿವೆ. ಅವು ವಾಯವ್ಯ ಭಾಗದಲ್ಲಿದೆ. ಆಗ್ನೇಯ ಭಾಗದಲ್ಲಿ ಬೇಳೆ ಕಾಳು ಮುಂತಾದ ಸಂಗ್ರಹಣೆಯ ಹರವಿಗಳಿವೆ. ನೆಲವನ್ನು ಇಟ್ಟಿಗೆಯಿಂದ ಸಮಗೊಳಿಸಿ ಮೇಲೆ ಹಸುವಿನ ಸಗಣೆಯಿಂದ ಸಾರಿಸಲಾಗಿತ್ತು. ದಕ್ಷಿಣ ಭಾಗದಲ್ಲಿ ಎರಡು ಕೊಠಡಿಗಳಿವೆ. ಇದರ ಮುಂಭಾಗದಲ್ಲಿ (2 feet) ೦.೬೦೯೬ ಮೀ. ಸ್ಥಳವನ್ನು ಬಿಡಲಾಗಿದೆ.

ಮತ್ತೊಂದು ಕಟ್ಟಡ ಅವಶೇಷದಲ್ಲಿ ಮೂರು ಚಿಕ್ಕ ಕೊಠಡಿಗಳಿವೆ. ಒಂದು ಕೊಠಡಿಯ ಅಳತೆ ೧.೮೨ ಮೀ. ೨೦.೩೨ ಸೆಂ.ಮೀ. X ೧.೮೨ ಮೀ. ೭.೬೨ ಸೆಂ.ಮೀ. ಮತ್ತೊಂದು ೨.೧೩ X ೧.೮೨ ಅಳತೆಯನ್ನು ಹೊಂದಿದೆ. ಅದರ ಮುಂಭಾಗದಲ್ಲಿ ಉದ್ದವಾದ ೬.೪೦೦೮ X ೧.೫೨೪ ಅಳತೆಯ ಪೂರ್ವ ಭಾಗದಲ್ಲಿ ವರಾಂಡವಿದೆ. ಕೊಠಡಿಯ ಗೋಡೆಗಳು ಮಣ್ಣಿನಿಂದ ಕಟ್ಟಲಾಗಿದೆ. ಮೂರನೆಯ ಕೊಠಡಿಯು ಚೌಕವಾಗಿಲ್ಲ. ಎಲ್ಲಾ ಕೊಠಡಿಗಳು ಪೂರ್ವಕ್ಕಿದೆ, ಆದರೆ ಅವುಗಳ ಬಾಗಿಲುಗಳು ವಾಯವ್ಯ ದಿಕ್ಕಿದೆ. ಈ ನೆಲೆಯಲ್ಲಿ ದೊರೆತ ಅವಶೇಷಗಳಲ್ಲಿ ದಕ್ಷಿಣ ದಿಕ್ಕಿನಲ್ಲಿ ೯೭.೬ X ೭ ಅಳತೆಯ ಕೊಠಡಿಯಿದೆ. ಇದರ ಸಂಪೂರ್ಣ ಎತ್ತರ ದೊರೆತಿಲ್ಲ. ಮನೆಯ ಛತ್ತಿಗೆ ಕಟ್ಟಿಗೆಯನ್ನು ಜೋಡಿಸಿ ಅದರ ಮೇಲೆ ಸುಟ್ಟ ಮಣ್ಣಿನಿಂದ ಹೆಂಚುಗಳನ್ನು ಜೊಡಿಸಲಾಗಿತ್ತು. ಅದರ ಅಳತೆ ೧೦ X ೫ ೧/೪ X ೩/೪ ಸೆಂ. ಮೀ. ಒಂದು ಭಾಗದ ತುದಿಯಲ್ಲಿ ಮೂರು ಗೆರೆಗಳಿವೆ, ಮತ್ತೊಂದು ತುದಿಯಲ್ಲಿ ರಂಧ್ರಗಳಿವೆ. ಈ ರಂಧ್ರಗಳ ಮೂಲಕ ಮೊಳೆಗಳನ್ನು ಹಾಕಿ ಹೆಂಚುಗಳನ್ನು ಜೋಡಿಸಲಾಗಿದೆ. ಉತ್ಖನನದಲ್ಲಿ ಸುಟ್ಟ ಕಟ್ಟಿಗೆ ಮತ್ತು ಮೊಳೆಗಳು ದೊರೆತಿವೆ. ಮನೆಯ ನೆಲವನ್ನು ಚಿಕ್ಕ ಚಿಕ್ಕ ಉರುಟು ಕಲ್ಲಿನಿಂದ ಅಥವಾ ಬೂದು ಬಣ್ಣದ ಮಣ್ಣಿನಿಂದ ಹದಗೊಳಿಸಿದೆ. ಗೋಡೆಯನ್ನು ಸುಟ್ಟ ಅಥವಾ ಸೂರ್ಯನ ಶಾಖದಲ್ಲಿ ಸುಟ್ಟ ಇಟ್ಟಿಗೆಯಿಂದ ಕಟ್ಟುತ್ತಿದ್ದರು. ೧೬ X ೮ X ೪ ಮತ್ತು ೧೦ X ೬ X ೩ ಸೆಂ.

ಮೀ. ಎರಡು ಅಳತೆಯ ಇಟ್ಟಿಗೆಗಳನ್ನು ಬಳಸುತ್ತಿದ್ದರು. ಮನೆಯ ಬಾಗಿಲು ಕಟ್ಟಿಗೆಯ ಚೌಕಟ್ಟಿವೆ. ಈ ನೆಲೆಯಲ್ಲಿ ಭತ್ತದ ಹೊಟ್ಟು ದೊರೆತಿದೆ.[೯೫]

ಗಂಗಾ ನದಿ ದಂಡೆಯ ಮೇಲೆ ಬೀಟಾ (Bhita) ಎಂಬ ಪ್ರದೇಶದಲ್ಲಿ ಮೌರ್ಯರ ಕಾಲಕ್ಕಿಂತ ಪೂರ್ವದ ನಗರೀಕರಣದ ಕುರುಹುಗಳು ದೊರೆತಿವೆ. ಮೌರ್ಯರ ಕಾಲದಲ್ಲಿ ಮನೆಗಳು ೧೦ x ೧೦ ರಿಂದ ೧೫ x ೧೫ ಮೀಟರ್ ಅಳತೆ ಹೊಂದಿದ್ದವು ೧೫ ಕೊಠಡಿಗಳನ್ನು ಹೊಂದಿದ ದೊಡ್ಡ ಮನೆಗಳು ದೊರಕಿವೆ. ಇಟ್ಟಿಗೆಯಿಂದ ಮಾಡಿದ ಮೆಟ್ಟಿಲುಗಳು ಮತ್ತು ಛತ್ತಿಗೆ




Fig. 11.10. House plans of the 3rd to 2nd centuries BC, Bhita (after Marshall).

ಹಂಚುಗಳನ್ನು ಜೊಡಿಸಿರುವುದು ಗಮನಾರ್ಹ ಈ ನೆಲೆಯಲ್ಲಿ ಎಲ್ಲಾ ಮನೆಗಳ ಸಾಲುಗಳನ್ನು ತಲುಪುವ ರೀತಿಯಲ್ಲಿ ರಸ್ತೆಗಳು ಸುತ್ತುವರೆದಿರುವುದನ್ನು ಪೂರ್ವ ಮೌರ್ಯರ ಕಾಲದಿಂದ ಮೌರ್ಯರ ನಂತರ ಕಾಲದವರೆಗೆ ಮುಂದುವರೆದಿರುವುದು ವಿಶೇಷ. ಮನೆಗಳನ್ನು ಯಾವಾಗಲು ಇಟ್ಟಿಗೆಯಿಂದಲೇ ಕಟ್ಟಲಾಗುತ್ತಿತ್ತು. ಬೀಟಾ ಮತ್ತು ತಕ್ಷಶಿಲೆಯಲ್ಲಿ ವೃತ್ತಾಕಾರದ ಬಾವಿಗಳು ದೊರಕಿವೆ. ಹಾಗೂ ೨ ರೀತಿಯ ವೃತ್ತಾಕಾರದ ಗುಂಡಿಗಳು ಕಂಡುಬಂದಿವೆ. ಒಂದು ನೀರಿನ ಇಂಗುಗುಂಡಿ, ಮತ್ತೊಂದು ಶೌಚಾಲಯದ ಗುಂಡಿಗಳಿವೆ.

ಪಾಟಲಿಪುತ್ರದಲ್ಲಿ ಕಂಬಗಳ ಮಂಟಪದ ರಚನೆ ದೊರಕಿದೆ. ಈ ಪ್ರದೇಶದಲ್ಲಿ ೮೦ ಕಂಬಗಳಿದ್ದು ಅವುಗಳು ೧.೫೨ ರಿಂದ ೧.೮೩ ಮೀಟರ್. ಆಳವಾಗಿದೆ. ಈ ರಚನೆಯ ಆಗ್ನೇಯ ಭಾಗದಲ್ಲಿ ೩ ಮೀ. ಆಳ ಮತ್ತು ೧೨.೬ ಮೀ. ಅಗಲದ ನಾಲೆಯಿದೆ. ದಕ್ಷಿಣ ಭಾಗದಲ್ಲಿ ಕೆಳಗಿನ ಭಾಗಕ್ಕೆ ಇಳಿಯಲು ದಪ್ಪ ಕಟ್ಟಿಗೆಯಿಂದ ಕಟ್ಟಿರುವ ಮೆಟ್ಟಿಲುಗಳಿವೆ. ಕಂಡುಬಂದಿವೆ. ಆದರೆ ಕ್ರಿ.ಪೂ. ೨ನೇ ಶತಮಾನದಲ್ಲಿ ಆ ಮಂಟಪ ಸುಟ್ಟುಹೋದ ಕುರುಹಾಗಿ ಬೂದಿಯು ಉತ್ಖನನದಲ್ಲಿ ದೊರಕಿದೆ. ಈ ಕಲ್ಲಿನ ಕಂಬಗಳ ಮಂಟಪದ ಮೇಲೆ ಛಾವಣಿಯನ್ನು ಕಟ್ಟಿಗೆಯಿಂದ ಜೋಡಿಸಲಾಗಿತ್ತು.[೬] ಉತ್ತರ ಪ್ರದೇಶದ ಮಥುರಾ ಜಿಲ್ಲೆಯ ಸೊಂಕ್ (Sonkh) ಪ್ರದೇಶದಲ್ಲಿ ದೇವಾಲಯ ಮತ್ತು ಮನೆಗಳ ಅವಶೇಷಗಳು ಕಂಡುಬಂದಿದೆ. ದೇವಾಲಯದ ಮುಂಭಾಗದಲ್ಲಿ ಕಂಬಗಳ ಸಾಲಿದೆ. ಗೋಡೆಯನ್ನು ಮಣ್ಣಿನ ಇಟ್ಟಿಗೆಯಿಂದ ಕಟ್ಟಲಾಗಿದೆ. ಈ ಇಟ್ಟಿಗೆಗಳ ಅಳತೆಯು ೪೮ x ೨೩ x ೭ ಸೆಂ.ಮೀ. ಇದೆ. ದೇವಾಲಯ ಕಂಬಗಳ ಇಟ್ಟಿಗೆಯ ಅಳತೆಯು ೪೨ x ೨೯ x ೭ ಸೆಂ.ಮೀ. ಛಾವಣಿಯನ್ನು ಹಂಚುಗಳಿಂದ ಹೊಂದಿಸುತ್ತಿದ್ದರು. ಇಲ್ಲಿ ವಿವಿಧ ಅಳತೆಯ ಮಣ್ಣಿನ ಇಟ್ಟಿಗೆಗಳು, ಛಾವಣಿಯ ಹಂಚುಗಳು ಹಾಗೂ ವಿವಿಧ ಆಕಾರದ ಮನೆಯ ಕಟ್ಟಡಗಳು ದೊರಕಿವೆ.[೭]

**ಶಾತವಾಹನರ ಕಾಲ**

ಉತ್ತರ ಪ್ರದೇಶದ ವಾರಾಣಾಸಿ ಜಿಲ್ಲೆಯ ತಕ್ಕೈಪೆರ್ ಗ್ರಾಮದಲ್ಲಿ ಕ್ರಿ.ಶ. ೧-೨ನೇ ಶತಮಾನದ ನೆಲೆಯು ದೊರೆತಿದೆ. ಇಲ್ಲಿ ಕಟ್ಟಡದ ತಳಪಾಯವನ್ನು ೨ ರೀತಿಯಲ್ಲಿ ಕಟ್ಟಿರುವುದು ಕಂಡುಬಂದಿದೆ. ಮೊದಲಿಗೆ ಕಟ್ಟಡದ ತಳಪಾಯವನ್ನು ಕಲ್ಲಿನಿಂದ ಕಟ್ಟುತ್ತಿದ್ದರು. ನಂತರದ ದಿನಗಳಲ್ಲಿ ಕಟ್ಟಡದ ತಳಪಾಯವನ್ನು ಇಟ್ಟಿಗೆಯನ್ನು ಬಳಸಿ ಕಟ್ಟಲಾಗುತ್ತಿತ್ತು. ಕಲ್ಲಿನ ಮನೆಗಳು ೨ ಸಾಲಗಳಲ್ಲಿ ಕಂಡುಬಂದಿವೆ. ಪ್ರತಿ ಸಾಲಿನಲ್ಲಿ ೨ ಕೊಠಡಿಯ ಮನೆಗಳು ೨.೧೫ x ೨.೧೦ಮೀ. ಮತ್ತು ೨.೨೬ x ೨.೧೦ ಮೀ. ಅಳತೆಯದ್ದಾಗಿದ್ದರೆ ಇನ್ನೊಂದು ಸಾಲಿನ ಮನೆಗಳ ೪.೧೬ x ೨.೭೦ ಮೀ. ಮತ್ತು ೧.೬ x ೨.೨೦ ಮೀ. ಕಿರು ಮತ್ತು ದೊಡ್ಡ ಮನೆಗಳ ಸಂಕೀರ್ಣದಲ್ಲಿ ಮುಖ್ಯ ಬಾಗಿಲು ಅದರ ಮುಂದೆ ಪಡಸಾಲೆಯ ರಚನೆಗಳು ಉತ್ಖನನದಲ್ಲಿ ಕಂಡುಬಂದಿದೆ. ಕಪ್ಪುಕಲ್ಲಿನ ಮೇಲೆ ಬ್ರಾಹ್ಮಿ ಅಕ್ಷರ ಹೊಂದಿದ ಶಾಸನವು ದೊರಕಿದೆ.[೮] ನೆವಾಸದಲ್ಲಿ ಶಾತವಾಹನರ ಕಾಲದ ಮನೆಯ ಕಟ್ಟಡಕ್ಕೆ ಉಪಯೋಗಿಸಿದ ಕಟ್ಟಿಗೆ ತುಂಡುಗಳು, ಇಟ್ಟಿಗೆ ತುಂಡುಗಳು, ಗೋಡೆ ಮತ್ತು ಬಾವಿ, ಛತ್ತಿಗೆ ಹಾಕುವ ಹೆಂಚುಗಳು ದೊರೆಕಿವೆ. ನೇಗಿಲು,

ಮೊಳೆ, ಬಾಣ, ಎಲೆ ಆಕಾರದ ಗುದ್ದಲಿ ಮುಂತಾದ ಕಬ್ಬಿಣದ ಉಪಕರಣಗಳು ದೊರಕಿವೆ. ಇವುಗಳೊಂದಿಗೆ ಸೀಸ, ತಾಮ್ರ ಮತ್ತು ಕೆಂಪುಬಣ್ಣದ ಮಡಿಕೆಗಳು ದೊರೆತಿವೆ.[೯೯] ಮತ್ತೊಂದು ನೆಲೆಯಲ್ಲಿ ಕಲ್ಲು, ಮಣ್ಣು, ಕಪ್ಪು ಮಣ್ಣಿನ ಹೆಂಟೆ, ಮನೆಯ ತಳಪಾಯದ ಅವಶೇಷಗಳು ದೊರಕಿದ್ದು ಅದರಲ್ಲಿನ ನೆಲವನ್ನು ಸುಣ್ಣ ಮತ್ತು ಸೆಣಬುಗಳನ್ನು ಸೇರಿಸಿ ಗಟ್ಟಿಗೊಳಿಸಲಾಗಿದೆ. ಈ ಮನೆಯ ಕೊಠಡಿಯು ೨.೯೫ x ೨.೬೩, ಮೀಟರ್ ಅಳತೆಯದಾಗಿದೆ. ಇಟ್ಟಿಗೆಯ ಅಳತೆಯು ೪೮ x ೨೭ x ೯ ಸೆಂ.ಮೀ. ಇದೆ. ಪ್ರತಿಯೊಂದು ಮನೆಗೂ ಇಂಗುಗುಂಡಿಯಿದ್ದು ಕೆಲವೊಂದು ಮನೆಗಳಲ್ಲಿ ೨ ಇಂಗುಗುಂಡಿಗಳು ಕಂಡುಬಂದಿದೆ. ಗಾಜಿನ ಬಳೆ, ಕಬ್ಬಿಣದ ಚಾಕು, ಮೊಳೆ, ಬಾಣ, ಪ್ರಾಣಿಯ ಆಟಿಕೆ ವಸ್ತುಗಳು, ಮಣ್ಣಿನ ಬೊಂಬೆ, ತಾಯತ, ನಾಣ್ಯಗಳು ಇನ್ನಿತರೆ ವಸ್ತುಗಳು ದೊರಕಿವೆ.[೧೦೦]

ಮಹಾರಾಷ್ಟ್ರದ ಔರಂಗಾಬಾದ್ ಜಿಲ್ಲೆಯ ಭೋಕ್ರದನ್‌ನಲ್ಲಿ (Bhokaradan) ವರಾಂಡಾ ಹೊಂದಿದ ಇಟ್ಟಿಗೆ ಮತ್ತು ಮಣ್ಣಿನ ಮನೆಗಳು ದೊರಕಿವೆ. ಕೊಠಡಿಗಳಿಗೆ ಮತ್ತು ಅಡಿಗೆ ಮನೆಗೆ ಹೊಂದಿಕೊಂಡಂತೆ ಇಂಗುಗುಂಡಿಯನ್ನು ಮಣ್ಣಿನಿಂದ ಅಥವಾ ಇಟ್ಟಿಗೆಯಿಂದ ವೃತ್ತಾಕಾರವಾಗಿ ಕಟ್ಟಲಾಗಿದೆ. ಕೆಲವು ಮನೆಗಳನ್ನು ಯಾವುದೇ ಕ್ರಮಬದ್ಧವಿಲ್ಲದೆ ಕಟ್ಟಲಾಗಿದೆ. ಮನೆಯ ತಳಪಾಯಕ್ಕೆ ಗುಂಡುಕಲ್ಲು ಮತ್ತು ಕಪ್ಪು ಮಣ್ಣನ್ನು ಉಪಯೋಗಿಸಲಾಗಿದೆ. ಗೋಡೆಯನ್ನು ಇಟ್ಟಿಗೆ ಮತ್ತು ಮಣ್ಣಿನಿಂದ ಕಟ್ಟಿದ್ದರೆ ಛಾವಣಿಯನ್ನು ಕಟ್ಟಿಗೆಯಿಂದ ಕಟ್ಟಿ ಮೇಲೆ ಹೆಂಚುಗಳನ್ನು ಬಳಸಲಾಗಿತ್ತು. ಮನೆಯ ವರಾಂಡವು ಸಾಮಾನ್ಯವಾಗಿ ೨.೫೦ ಮೀ. ಉದ್ದ ಮತ್ತು ೧.೫ ಮೀ. ಅಗಲವಾಗಿದೆ. ಕೊಠಡಿಯ ಅಳತೆ ೩ x ೩ ಮೀ ಮತ್ತು ಅಡಿಗೆ ಮನೆಯ ೩.೫ x ೩ ಮೀ. ಇದೆ. ಈ ಕೊಠಡಿಯಲ್ಲಿ ಒಲೆ ಮತ್ತು ಧಾನ್ಯಗಳನ್ನು ಸಂಗ್ರಹಿಸುವ ದೊಡ್ಡ ಪಾತ್ರೆಗಳು ದೊರಕಿವೆ.[೧೦೧] ಬಸ್ತಿ ಜಿಲ್ಲೆಯ ಗನ್ವಾರಿಯ ಮತ್ತು ಸಾಲರಗರ್ (Ganwaria & Salaragarh) ಗ್ರಾಮದಲ್ಲಿ ಶಾತವಾಹನರ ಕಾಲದ ದೊಡ್ಡ ಕಟ್ಟಡದ ಮನೆಯ ಗೋಡೆಯನ್ನು ಮಣ್ಣಿನಿಂದ ಕಟ್ಟಲಾಗಿದೆ. ಭತ್ತಿಗೆ ಸಹಾಯವಾಗಿ ಕಟ್ಟಿಗೆಯ ಕಂಬವನ್ನು ಬಳಸಲಾಗಿದೆ. ಸುಟ್ಟ ಇಟ್ಟಿಗೆಯಿಂದ ಕಟ್ಟಿದ ಕೆಲವು ಕಟ್ಟಡಗಳು ಕಂಡುಬಂದಿದೆ. ಸುಟ್ಟು ಇಟ್ಟಿಗೆಯಿಂದ ಕಟ್ಟಿದ ಚರಂಡಿ ನಾಲೆಗಳು ನೈರುತ್ಯ ಭಾಗದಲ್ಲಿದೆ. ಮನೆಯ ಬಾಗಿಲ ಚೌಕಟ್ಟು ಕಟ್ಟಿಗೆಯಿಂದ ಮಾಡಲಾಗಿದೆ. ಒಂದು ಚಿಕ್ಕ ಕೊಠಡಿಯಲ್ಲಿ ಮಣ್ಣಿನಿಂದ ಮಾಡಿದ ಚಿಕ್ಕ ಬುದ್ಧನ ಶಿಲ್ಪವು ದೊರೆತಿರುವುದರಿಂದ ಇದು ಪೂಜಾ ಕೊಠಡಿಯಾಗಿರಬಹುದು. ಆಗ್ನೇಯ ಭಾಗದಲ್ಲಿ ಮುಖ್ಯ ಬಾಗಿಲು ಹೊಂದಿದ ಕಟ್ಟಡವಿದೆ.[೧೦೨] ಆಂಧ್ರಪ್ರದೇಶದ ಕರೀಮ್‌ನಗರ್ ಜಿಲ್ಲೆಯ ಧುಲಿಕಟ್ಟು (Dhulikattu) ಎಂಬ ಗ್ರಾಮದಲ್ಲಿ ಶಾತವಾಹನರ ಕಾಲದಲ್ಲಿ ನಿರ್ಮಿಸಿದ ಆರು ಹಂತಗಳಲ್ಲಿ ಕಟ್ಟಿದ ಸುಟ್ಟ ಇಟ್ಟಿಗೆಯ

ಗೋಡೆಯ ಭಾಗವು ದೊರಕಿದೆ. ಉತ್ತರ–ದಕ್ಷಿಣವಾಗಿ ಹರಡಿಕೊಂಡಿದೆ. ಇದರ ತಳಪಾಯವನ್ನು ಗುಂಡು ಕಲ್ಲುಗಳಿಂದ ಕಟ್ಟಲಾಗಿದ್ದು ಅದರ ಮೇಲೆ ಮಣ್ಣಿನ ಗೋಡೆಯನ್ನು ನಿರ್ಮಿಸಲಾದೆ. ಇದು ಕೋಟೆಗೋಡೆಯಾಗಿದ್ದು ಇದರ ಅಳತೆಯು ಇಂತಿದೆ. ದಪ್ಪ ೧.೬ ಮೀ. ಮತ್ತು ಉದ್ಧ ೫.೨ ಮೀ.[೧೦೩] ದಕ್ಷಿಣ ಭಾಗದ ಇಟ್ಟಿಗೆಯ ಗೋಡೆಯಲ್ಲಿ ೨ ದ್ವಾರಗಳಿವೆ. ಒಂದು ದ್ವಾರವು ಹೊರ ದ್ವಾರವಾಗಿದ್ದರೆ ಮತ್ತೊಂದು ಮಧ್ಯದ ದ್ವಾರವಾಗಿದೆ. ಹೊರದ್ವಾರವನ್ನು ಕ್ರಮಬದ್ಧವಾಗಿ ಕಟ್ಟಿರುವುದಿಲ್ಲ. ಮಧ್ಯದ ಪಶ್ಚಿಮದ ಗೋಡೆಯ ಹತ್ತಿರ ವೃತ್ತಾಕಾರದ ನೀರಿನ ತೊಟ್ಟಿಯಿದೆ. ಅದಕ್ಕೆ ೧.೨೦ x ೯೦ ಮೀ. ಅಳತೆಯ ಇಟ್ಟಿಗೆಗಳಿಂದ ಮೆಟ್ಟಿಲು ಕಟ್ಟಲಾಗಿದೆ.

೨ ಭಾಗಗಳಲ್ಲಿ ವಿಸ್ತರಿಸಿದಂತಿರುವ ದ್ವಾರದ ಗೋಡೆಯನ್ನು ಮಣ್ಣಿನಿಂದ ಕಟ್ಟಲಾಗಿದೆ. ಅದರ ಒಂದು ಭಾಗದ ಗೋಡೆಯು ೧೫.೩೦ಮೀ. ಉದ್ದವಾಗಿದ್ದು ಮತ್ತೊಂದು ಭಾಗ ಉತ್ತರ–ದಕ್ಷಿಣವಾಗಿ ೪.೭೦ ಮೀ. ಉದ್ದವಾಗಿದೆ. ಅವುಗಳ ಮಧ್ಯದಲ್ಲಿ ೪.೪೦ಮೀ. ಅಗಲದ ರಸ್ತೆಯಿದೆ. ದ್ವಾರಬಾಗಿಲ ಪಕ್ಕದಲ್ಲಿ ದ್ವಾರಪಾಲಕನ ಕೊಠಡಿಯಿದೆ. ಕೋಟೆಯ ಮಧ್ಯದಲ್ಲಿ ೩೦ ಸಾಲುಗಳು ಹೊಂದಿದ ಉತ್ತರ–ದಕ್ಷಿಣವಾಗಿ ಇಟ್ಟಿಗೆಯ ಗೋಡೆಯಿದೆ. ಇಟ್ಟಿಗೆಯ ಅಳತೆಯು ೫೫ x ೨೫ x ೭ ಸೆಂ.ಮೀ. ೨.೫೦ ಮೀ ಅಳತೆಯ ಇಟ್ಟಿಗೆಗಳನ್ನು ಸದರಿ ಗೋಡೆಗೆ ಬಳಸಲಾಗಿದೆ.[೧೦೪] ದಕ್ಷಿಣ ಭಾಗದಲ್ಲಿ ಕೋಟೆಬಾಗಿಲ ಪಕ್ಕದಲ್ಲಿ ಸಾಲಾಗಿ ೬೮ x ೩.೦ಮೀ ಅಳತೆಯ ಕಾವಲುಗಾರರ ಕೊಠಡಿಗಳಿವೆ. ಈ ಕಾವಲುಗಾರನ ಕೊಠಡಿಗೆ ೫೬ x ೨೭ x ೭ ಸೆಂ.ಮೀ. ಅಳತೆಯಿಂದ ಕಟ್ಟಿದ ಇಟ್ಟಿಗೆಯ ಮೆಟ್ಟಿಲುಗಳಿವೆ. ಮತ್ತೊಂದು ಭಾಗದಲ್ಲಿ ರಸ್ತೆ ಮತ್ತು ಬೇರೆ ಕಟ್ಟಡಗಳಿವೆ. ಮಧ್ಯದ ರಸ್ತೆಯನ್ನು ಗುಂಡುಕಲ್ಲುಗಳನ್ನು ಜೋಡಿಸಿ, ಮೇಲೆ ಮಣ್ಣಿನಿಂದ ಗಟ್ಟಿಗೊಳಿಸಲಾಗಿದೆ. ಪಶ್ಚಿಮ ಭಾಗದಲ್ಲಿ ಸ್ವಸ್ತಿಕ್ ಆಕಾರದ ತಳಪಾಯ ಹೊಂದಿದ ೩.೫೦ x ೩.೬೦ ಮೀ. ಅಳತೆಯ ಕೊಠಡಿಯೊಂದಿಗೆ ಹೊಂದಿಕೊಂಡು ವರಾಂಡವನ್ನು ಕಟ್ಟಲಾಗಿದೆ. ಈ ಅರಮನೆಯ ಪ್ರದೇಶದಲ್ಲಿ ಅನೇಕ ಕಟ್ಟಡಗಳು ದೊರೆಕಿವೆ. ಪೂರ್ವ–ಪಶ್ಚಿಮದಲ್ಲಿ ೨ ಗೋಡೆಗಳು ೧.೬೦ ಮೀ ಅಳವನ್ನು ಹೊಂದಿದ ಸ್ತೂಪವಾಗಿದೆ. ಮತ್ತೊಂದು ಭಾಗದಲ್ಲಿ ಧಾನ್ಯಗಳನ್ನು ಸಂಗ್ರಹಿಸುವ ಕೊಠಡಿಯಿದೆ. ಇದರ ಹಿಂಬದಿಯಲ್ಲಿ ಒಳ ಚರಂಡಿಯ ನಾಲೆಯಿದ್ದು ಅದರಲ್ಲಿ  ದಂತದ ವೃತ್ತಾಕಾರದ ಚಿಕ್ಕ ಅಚ್ಚು ದೊರೆತಿದೆ. ಅದರಲ್ಲಿ 'ಅಜನಿ ಸಿರಿಯಾ ಗಾಮಾ ಕುಮಾರಿಯ' ಎಂಬ ಶಾಸನ ಬ್ರಾಹ್ಮಿ ಲಿಪಿಯಲ್ಲಿದೆ.[೧೦೫] ಪೆದ್ಧಬಂಕರ್ (Peddabankar) ಗ್ರಾಮದಲ್ಲಿ ೧.೭೦ ಮೀ ಅಗಲವಾದ ಗೊಡೆಯಿದೆ. ಇಲ್ಲಿ ದೊರಕಿರುವ ಕಟ್ಟಡದಲ್ಲಿ ಇಟ್ಟಿಗೆ ಮತ್ತು ಛತ್ತಿಗೆ ಹಾಕುವ ಹೆಂಚುಗಳು ಹಾಗೂ ಚಿಕ್ಕ ಇಟ್ಟಿಗೆಯ ಮೆಟ್ಟಿಲುಗಳಿವೆ.

ಅಲ್ಲದೆ ನೀರಿನ ತೊಟ್ಟಿ, ಒಲೆ, ಕಬ್ಬಿಣದ ಕಿಟ್ಟ ಮತ್ತು ಕಬ್ಬಿಣ ಕರಗಿಸುವ ಉಪಕರಣಗಳು ದೊರಕಿವೆ.

೩.೧೫ ಮೀ ಅಗಲವಾದ ವೃತ್ತಾಕಾರದ ಕಟ್ಟೆಯನ್ನು ಹೊಂದಿಕೊಂಡಂತೆ ಮತ್ತೊಂದು ಕಟ್ಟೆಯಿದ್ದು ಅದರಲ್ಲಿ ಕಬ್ಬಿಣದ ಕಿಟ್ಟ ಮತ್ತು ಇಟ್ಟಿಗೆಯಿಂದ ನಿರ್ಮಿಸಿದ ನೀರಿನ ತೊಟ್ಟಿಯಿದೆ. ೨ ಮನೆಯ ಹೊರ ಭಾಗದಲ್ಲಿ ಇಟ್ಟಿಗೆಯ ಒಲೆಗಳು ಮತ್ತು ಹಿಂದಿನ ಭಾಗದಲ್ಲಿ ನೀರಿನ ತೊಟ್ಟಿ ಮನೆಯ ಹೊರಭಾಗದಲ್ಲಿ ಇಟ್ಟಿಗೆ ಮತ್ತು ಅಗಲವಾದ ಕಲ್ಲಿನಿಂದ ಕಟ್ಟಿದ ಕಟ್ಟೆ, ಚೂಪಾದ ಕಬ್ಬಿಣದ ವಸ್ತುಗಳು ದೊರೆತಿದೆ.[೧೦೬] ವಾರಂಗಲ್ ಜಿಲ್ಲೆಯ ಪೊಲಾಕೊಂಡಾ ಗ್ರಾಮದಲ್ಲಿ ಗುಂಡುಕಲ್ಲಿನ ಗೋಡೆ ಮತ್ತು ಸುಟ್ಟ ಇಟ್ಟಿಗೆಯ ಅವಶೇಷಗಳು ದೊರೆತಿದೆ. ಪಶ್ಚಿಮ ಮತ್ತು ದಕ್ಷಿಣ ಭಾಗಗಳ ತಲಾ ಒಂದು ಇಟ್ಟಿಗೆ ಗೋಡೆಗಳಿವೆ. ಈ ಗೋಡೆಯು ೫.೧೦ ಮೀ. ಉದ್ದ ಮತ್ತು ೦.೫೫ ಮೀ. ಅಗಲವಾಗಿದ್ದು ಅದಕ್ಕೆ ಹೊಂದಿದಂತೆ ಕಟ್ಟಿಗೆಯ ಕುಳಿಗಳಿವೆ. ಗೋಡೆಯ ಒಳ ಮತ್ತು ಹೊರಭಾಗಗಳ ೧.೮೦ x ೧.೭೦ ಮೀ ಮತ್ತು ೮೫ x ೭೫ x ೬೦ ಸೆಂ.ಮೀ. ಅಳತೆಯ ನೀರಿನ ತೊಟ್ಟಿಯಿದೆ.[೧೦೭]

**ಕುಷಾಣರ ಕಾಲ**

ಉತ್ತರ ಪ್ರದೇಶದ ಖಾನ್‌ಪುರ ಜಿಲ್ಲೆಯ ಜೈನಾನು ಗ್ರಾಮದಲ್ಲಿ ದೊರೆತ ಕುಷಾಣರ ಕಾಲದ ೨ ಮನೆಗಳ ಗೋಡೆಯ ಅವಶೇಷಗಳು ದೊರಕಿವೆ. ಇಟ್ಟಿಗೆಯ ತುಂಡುಗಳು ಮತ್ತು ರಸ್ತೆಯ ವ್ಯವಸ್ಥೆಯು ಕಂಡುಬಂದಿದೆ. ಇಲ್ಲಿ ದೊರೆತ ಸುಟ್ಟ ಇಟ್ಟಿಗೆಯ ಅಳತೆಯು ೩೮ x ೨೪ x ೫ ಸೆಂ.ಮೀ. ಮತ್ತು ೩೯ x ೨೫ x ೫.೫ ಸೆಂ.ಮೀ. ಆಗಿದೆ. ಒಂದು ಕಟ್ಟಡದಲ್ಲಿ ಕೊಠಡಿ ಮತ್ತು ಸ್ನಾನದ ಕೊಠಡಿ, ಅದಕ್ಕೆ ಹೊಂದಿಕೊಂಡು ಚರಂಡಿ ನಾಲೆ ಕಂಡುಬಂದಿದೆ. ಮನೆಯ ನೆಲ, ಕೊಠಡಿ ಮತ್ತು ಮೆಟ್ಟಿಲುಗಳನ್ನು ಕಟ್ಟಲು ಸುಟ್ಟ ಇಟ್ಟಿಗೆಯನ್ನು ಬಳಲಾಗಿದೆ.. ಮನೆಯ ಪಕ್ಕದಲ್ಲಿ ರಸ್ತೆಗಳಿವೆ.[೧೦೮] ಉತ್ತರ ಪ್ರದೇಶದ ಮಥುರಾದಲ್ಲಿ ಮಣ್ಣಿನಿಂದ ಗಟ್ಟಿಗೊಳಿಸಿದ ನೆಲ ಮತ್ತು ಸುಟ್ಟ ಇಟ್ಟಿಗೆಯ ವಿವಿಧ ಅಳತೆಗಳ ಒಲೆ, ಛತ್ತಿಗೆ ಹಾಕುವ ಹೆಂಚುಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿವೆ.[೧೦೯] ದೆಹಲಿಯ ಪುರಾನಕಿಲಾದಲ್ಲಿ ಸುಟ್ಟ ಇಟ್ಟಿಗೆಯ ಕಟ್ಟಡದ ಅವಶೇಷಗಳು ದೊರಕಿವೆ. ೨ ಕೊಠಡಿಗಳು ಸಂಪೂರ್ಣವಾಗಿದ್ದು ಅದು ೧.೮೦ x ೧.೮೦ ಮತ್ತು ೭೫ ಸೆಂ.ಮೀ. ಅಗಲವಾದ ಬಾಗಿಲನ್ನು ಹೊಂದಿದೆ. ಮನೆಯ ಹಿಂಭಾಗದಲ್ಲಿ ಇಟ್ಟಿಗೆಯಿಂದ ಕಟ್ಟಿದ ಮೆಟ್ಟಿಲುಗಳಿವೆ. ಹಾಗೂ ಇಟ್ಟಿಗೆ ಅಳತೆಯು ೩೮ x ೨೩ x ೫ ಸೆಂ.ಮೀ. ಅಥವಾ ೩೭ x ೨೭ x ೫ ಸೆಂ.ಮೀ. ನಷ್ಟಿದೆ.[೧೧೦]

ಬಿಹಾರದ ರಾಂಚಿ ಜಿಲ್ಲೆಯ ಸರದ್ಕಲ್ ಗ್ರಾಮದಲ್ಲಿ ಇಟ್ಟಿಗೆಯಿಂದ ಕಟ್ಟಿದ ಕೋಟೆಗೋಡೆ ದೊರಕಿದೆ. ಅಲ್ಲಿ ಬಳಸಿದ ಇಟ್ಟಿಗೆ ಅಳತೆಯು ೪೧ x ೨೬ x ೭ ಸೆಂ.ಮೀ ನಷ್ಟಿದೆ. ನದಿಯ ಪ್ರವಾಹ ತಡೆಯುವ ರೀತಿಯಲ್ಲಿ ಕೋಟೆಗೋಡೆಯನ್ನು ದಪ್ಪವಾಗಿ ಕಟ್ಟಲಾಗಿದೆ. ಕೆಲವು ಭಾಗಗಳಲ್ಲಿ ಕೋಟೆಗೋಡೆಯನ್ನು ಎತ್ತರಿಸಲಾಗಿದೆ. ಜೊತೆಗೆ ೧೪ ಸಾಲುಗಳ ಗೋಡೆಯು ದೊರೆತಿದೆ. ಕೋಟೆಗೋಡೆಯ ಒಳ ಭಾಗದಲ್ಲಿ ಸುತ್ತಲೂ ಮನೆಯ ಅವಶೇಷಗಳು ದೊರಕಿದೆ. ಎಲ್ಲಾ ಮನೆಗಳನ್ನು ಸುಟ್ಟ ಇಟ್ಟಿಗೆಯನ್ನು ಬಳಸಿ ಕಟ್ಟಲಾಗಿದೆ. ಮನೆಯ ನೆಲವನ್ನು ಇಟ್ಟಿಗೆಯ ತುಂಡುಗಳಿಂದ ಗಟ್ಟಿಗೊಳಿಸಿದರೆ ಇನ್ನು ಕೆಲವಲ್ಲಿ ಪೂರ್ಣ ಇಟ್ಟಿಗೆಯನ್ನು ನೆಲಕ್ಕೆ ಹಾಸಲಾಗಿತ್ತು. ಒಂದು ಕೊಠಡಿಯಲ್ಲಿ ಕಬ್ಬಿಣದ ಅಡಿಗಲ್ಲು ಕಂಡುಬಂದಿದೆ. ಕೆಂಪು ಬಣ್ಣದ ಚಿತ್ರಿತ ಮಡಿಕೆಗಳು ಕಂಡುಬಂದಿದೆ.[೧೧೧] ಪಂಜಾಬಿನ ಲೂಧಿಯಾನ ಜಿಲ್ಲೆಯ ಸುನೆತ್ (sunet) ಗ್ರಾಮದಲ್ಲಿ ಕುಷಾಣರ ಕಾಲದ ಮಣ್ಣು ಮತ್ತು ಸುಟ್ಟ ಇಟ್ಟಿಗೆಗಳಿಂದ ಕಟ್ಟಿದ ಮನೆಯ ಅವಶೇಷಗಳಲ್ಲಿ ಧಾನ್ಯ ಸಂಗ್ರಹಣೆಯ ಕೊಠಡಿ, ಅಡಿಗೆಯ ಒಲೆಗಳು ದೊರಕಿವೆ. ೩೮ x ೨೩ x ೬ ಸೆಂ.ಮೀ. ಅಳತೆಯ ಮಾಡಿ ಸೂರ್ಯನ ಶಾಖದಲ್ಲಿ ಸುಡಲಾದ ಇಟ್ಟಿಗೆಯನ್ನು ಬಳಸಿ ಮನೆಯ ಮೆಟ್ಟಿಲನ್ನು ರಚಿಸಲಾಗಿದೆ. ಮತ್ತೊಂದು ನೆಲೆಯಲ್ಲಿ ಅಡಿಗೆಮನೆ, ಸ್ನಾನದ ಮನೆ ಮತ್ತು ಚಿಕ್ಕ ನೀರಿನ ತೊಟ್ಟಿ, ಮತ್ತು ಧಾನ್ಯ ಸಂಗ್ರಹಣೆಯ ಕೊಠಡಿ ಕಂಡುಬಂದಿವೆ. ಈ ಕಟ್ಟಡವನ್ನು ೩೩ x ೨೧ x ೫ ಸೆಂ.ಮೀ. ಅಳತೆಯ ಸುಟ್ಟ ಇಟ್ಟಿಗೆಯಿಂದ ಕಟ್ಟಲಾಗಿದ್ದು, ಇಲ್ಲಿ ೨ ಅಗಲವಾದ ಚರಂಡಿಗಳು ದೊರಕಿವೆ.[೧೧೨] ಹರಿಯಾಣದ ಗುರ್‌ಗಾಂವ್ ಜಿಲ್ಲೆಯ ಮುಹಮ್ಮದ್ ನಗರದಲ್ಲಿ ಕುಷಾಣರ ಕಾಲದ ನೆಲೆಯಲ್ಲಿ ಪೂರ್ವ–ಪಶ್ಚಿಮದ ಸುತ್ತ ಗುಡಿಸಲುಗಳ ಕುಳಿಗಳಿವೆ. ಅದರ ಜೊತೆಗೆ ಇಟ್ಟಿಗೆಯಿಂದ ಕಟ್ಟಿದ ನಾಲೆ, ಔತ್ತರೆಯ ಕಾಂತಿಯುಳ್ಳ ಮೃತ್ಪಾತ್ರೆ (Northern Black Polished Ware) ಮಡಿಕೆ ಚೂರು ದೊರೆತಿವೆ.

ಮತ್ತೊಂದು ಪ್ರದೇಶದಲ್ಲಿ ಗುಮ್ಮಟಾಕಾರದ ಸ್ತೂಪವನ್ನು ಸುಟ್ಟ ಇಟ್ಟಿಗೆಯಿಂದ ಕಟ್ಟಲಾಗಿದೆ. ಅಲ್ಲಿ ಮಣ್ಣಿನ ಅಚ್ಚುಗಳು, ಥಿಗಪದ ಶಿಲ್ಪ ಮತ್ತು ಇಟ್ಟಿಗೆ ಗೋಡೆ ದೊರೆತಿವೆ. ೫ ಕೊಠಡಿಗಳಿರುವ ಮನೆಯ ಅವಶೇಷದಲ್ಲಿನ ಒಂದು ಕೊಠಡಿಯಲ್ಲಿ ೮ ಸೆಂ.ಮೀ. ಅಗಲದ ಮೆಟ್ಟಿಲು ಪತ್ತೆಯಾಗಿದೆ. ಉಳದ ಕೊಠಡಿಗಳು ಹಾಗೂ ೧.೭೦ x ೧.೯೦ ಮೀ, ೧.೭೫ x ೧.೮೪ ಮೀ ಮತ್ತು ೧.೨೭ x ೧.೨೨ ಮೀ ಅಳತೆಯದ್ದಾಗಿದೆ. ಇದರ ಕಾಲದ ಇಟ್ಟಿಗೆಯ ಅಳತೆಯು ಇಂತಿವೆ ೪೨ x ೨೬ x ೬ ಸೆಂ.ಮೀ. ಮತ್ತು ೩೬ x ೨೨ ರಿಂದ ೨೪ x ೫ ರಿಂದ ೬ ಸೆಂ.ಮೀ. ಮನೆಯ ನೆಲವನ್ನು ಮಣ್ಣಿನ ಇಟ್ಟಿಗೆಯಿಂದ ಕಟ್ಟಲಾಗಿತ್ತು. ಇಟ್ಟಿಗೆ ಗೋಡೆಯ

ಅಗಲ ೪೨ ಸೆಂ.ಮೀ. ದಿಂದ ೭೫ ಸೆಂ.ಮೀ. ಇದೆ. ದಕ್ಷಿಣ ಭಾಗದಲ್ಲಿ ಇಟ್ಟಿಗೆ ಮತ್ತು ಕೆಂಪು ಮಡಿಕೆ ಚೂರುಗಳಾದ ಅಡಿಗೆಗೆ ಬಳಸುವ ಮಡಿಕೆಗಳು, ಮಣ್ಣಿನ ಹೆಂಟೆ ತಾಮ್ರದ ನಾಣ್ಯ, ಸೀಸ, ಸುಡಾವೆಮಣ್ಣಿನ ಪ್ರಾಣಿ ಮತ್ತು ಮನುಷ್ಯನ ಆಕಾರದ ಶಿಲ್ಪಗಳು ದೊರೆತಿವೆ.[೧೧೩]

## ಕರ್ನಾಟಕದ ನೆಲೆಗಳು

### ಮೌರ್ಯರು (ಆದಿಇತಿಹಾಸ ಕಾಲ)

ಬನವಾಸಿಯು ಮೌರ್ಯರ ಕಾಲದಲ್ಲಿ ಪ್ರಮುಖ ಬೌದ್ಧ ನೆಲೆಯಾಗಿದ್ದು ಅಲ್ಲಿ ಸ್ಥೂಪವಿದ್ದ ಉಲ್ಲೇಖವಿದೆ ಹಾಗೂ ಬೌದ್ಧ ಸನ್ಯಾಸಿಗಳು ಸಿಲೋನ್‌ನಲ್ಲಿ (ಶ್ರೀಲಂಕಾ) ಸ್ಥೂಪ ನಿರ್ಮಾಣಕ್ಕೆ ಮತ್ತು ಬೌದ್ಧ ಧರ್ಮ ಪ್ರಚಾರಕ್ಕೆ ಅಲ್ಲಿಂದಲೇ ಹೋಗಿರುವುದನ್ನು ಕುರಿತ ಸಾಹಿತ್ಯಿಕ ದಾಖಲೆಗಳಿವೆ. ಬನವಾಸಿಯ ಉತ್ಖನನದಲ್ಲಿ ಸ್ಥೂಪದ ಆಕಾರವಿರುವ ರಚನೆಯ ಕೆಳಗೆ ಮೌರ್ಯರ ಕಾಲದ ಇಟ್ಟಿಗೆ ಕಟ್ಟಡಗಳು, ಬೆಣಚುಕಲ್ಲಿನ ಬ್ಲೇಡ್, ಸಮೀನ್ ಮಡಿಕೆ (Samin ware), ನಕಲಿಸಿದ ಎನ್‌ಬಿಪಿ (Imitation rouleatted ware Northen Black Polished Ware) ಮತ್ತು ಹೆಚ್ಚು ಹೊಳಪಿನಿಂದ ಮಡಿದ ಕಪ್ಪು ಮಡಿಕೆ ಚೂರುಗಳು ದೊರಕಿದೆ.[೧೧೪] ಚಿತ್ರದುರ್ಗ ಜಿಲ್ಲೆಯಲ್ಲಿ ಮೊಳಕಾಲ್ಮೂರು ತಾಲೂಕಿನ ಬ್ರಹ್ಮಗಿರಿಯ ಉತ್ತರಕ್ಕೆ ಸಿದ್ದಾಪುರ ಗ್ರಾಮವಿದೆ. ಇಲ್ಲಿ ಅಶೋಕನ ಶಾಸನವಿದೆ. ಇದರಲ್ಲಿ "ಇಸಿಲಾ" ಪಟ್ಟಣದ ಮಹಾಮಾತ್ರರನ್ನು ಕುರಿತು ಉಲ್ಲೇಖಿಸಿದೆ. ಇಲ್ಲಿ ಇವರ ಕಾಲದ ಮಡಿಕೆ ಚೂರುಗಳು ಹಾಗೂ ಕಟ್ಟಡದ ಅವಶೇಷಗಳು ದೊರಕಿದೆ. ಬ್ರಹ್ಮಗಿರಿಯಲ್ಲಿ ಇಟ್ಟಿಗೆಯಿಂದ ಕಟ್ಟಿದ ಚಿಕ್ಕ ಚೈತ್ಯದ ಅವಶೇಷಗಳು ಪತ್ತೆಯಾಗಿವೆ.[೧೧೫] ಸಿದ್ಧಾಪುರವನ್ನು ಅಶೋಕನ ಆಳ್ವಿಕೆ ಕಾಲದಲ್ಲಿ ಸುವರ್ಣಗಿರಿ ಎಂದು ಕರೆಯಲಾಗಿತ್ತು.[೧೧೬] ಸಿದ್ಧಾಪುರ ಅಥವಾ ಬ್ರಹ್ಮಗಿರಿಯು ಅಂದಿನ ಇಸಿಲಾ ಪಟ್ಟಣವಾಗಿತ್ತೆಂದು ಶಾಸನವು ದೃಢಪಡಿಸುತ್ತದೆ ಹಾಗೂ ಮೌರ್ಯರ ಕಾಲದ ಕೆಲವು ಅವಶೇಷಗಳು ಪೂರಕ ಮಾಹಿತಿಯನ್ನು ಒದಗಿಸುತ್ತಿವೆ. ರಾಯಚೂರು ಜಿಲ್ಲೆಯ ಮಸ್ಕಿ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ಧಾಪುರ,[೧೧೭] ಜಟಿಂಗ-ರಾಮೇಶ್ವರದಲ್ಲಿ ಬಳ್ಳಾರಿ ಜಿಲ್ಲೆಯ ನಿಟ್ಟೂರ, ಉದೆಗೊಳಂ, ಕೊಪ್ಪಳದ ಪಾಲ್ಕಿಗುಂಡು,[೧೧೮] ಗವಿಮಠದಲ್ಲಿ ಅಶೋಕನ ಶಾಸನಗಳು ದೊರೆತಿವೆ. ಮಸ್ಕಿಯ ಶಾಸನದಲ್ಲಿ ಅಶೋಕನ ಹೆಸರು ಉಲ್ಲೇಖವಾಗಿದೆ.[೧೧೯]

ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ಸನ್ನತಿಯಲ್ಲಿ ಅಶೋಕನ ಒಂದು ಶಾಸನ ಮತ್ತು ಅವನ ಉಬ್ಬುಶಿಲ್ಪವಿರುವ ಶಿಲಾಫಲಕ ದೊರಕಿವೆ. ಅದರಲ್ಲಿ "ರಾಜಾ ಅಸೋಕ" ಎಂಬ

ಉಲ್ಲೇಖವಿದೆ. ಶಿಲಾಫಲಕವು ಕ್ರಿ.ಶ. ೩ನೇ ಶತಮಾನಕ್ಕೆ ಸೇರಿದ್ದಾಗಿದೆ. ಈ ಸನ್ನತಿ ಪ್ರದೇಶವು ಅಶೋಕನ ಕಾಲದಿಂದ ಬೌದ್ಧರ ನೆಲೆಯಾಗಿತ್ತೆಂದು ದೃಢಪಡುತ್ತದೆ. ಇಲ್ಲಿ ಮೌರ್ಯರ ಕಾಲದ ಕೆಲವು ಔತ್ತರೇಯ ಕಪ್ಪು ಬಣ್ಣದ ಮಡಿಕೆಗಳು (NBP), (Sand Stone and disc-Stone) ವಸ್ತುಗಳು ದೊರಕಿವೆ.[೧೨೦]

**ಶಾತವಾಹನ**

ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ಶಾತವಾಹನರ ಕಾಲದ ಕೆಲವು ಅವಶೇಷಗಳು ದೊರೆಕಿವೆ. ಮುಖ್ಯವಾಗಿ ಈ ಪ್ರದೇಶದಲ್ಲಿ ಸ್ತೂಪಗಳ ಅವಶೇಷಗಳು ಉತ್ಖನನದಲ್ಲಿ ದೊರಕಿವೆ. ಗಜಪೃಷ್ಠಕಾರದ ಕಟ್ಟಡವು ದೋಣಿಗಡ್ಡದ ಪೂರ್ವಕ್ಕೆ ಪೂರ್ವ–ಪಶ್ಚಿಮಾಭಿಮುಖವಾಗಿದೆ.



Fig. 15. Banavāsi fort
(Courtesy: S.K. Joshi: Defence Architecture in Early Karnataka)

ಮೂರು ಭಾಗದ ಗೋಡೆಗಳು ೨೫ ಸೆಂ.ಮೀ. ದಿಂದ ೧೫೦ ಸೆಂ.ಮೀ. ನಷ್ಟು ದಪ್ಪವಾಗಿದ್ದು, ಎರಡನೇ ಮತ್ತು ಮೂರನೆಯ ಗೋಡೆಗಳ ನಡುವೆ ಸುಮಾರು ೭೦ ಸೆಂ.ಮೀ. ಅಗಲವಾದ ಸ್ಥಳವಿದೆ. ಒಟ್ಟಾರೆಯಾಗಿ ಈ ಮೂರು ಗೋಡೆಗಳಿಂದ ಕೂಡಿದ ಕಟ್ಟಡದ ಒಳಭಾಗದಲ್ಲಿ ೭

ಮೀಟರ್ ಅಳತೆಯ ಎರಡು ಕೊಠಡಿಗಳಿವೆ. ಗಜಪೃಷ್ಠಾಕೃತಿಯ ಕೊಠಡಿಯು ಗರ್ಭಗುಡಿಯಾಗಿ, ಮತ್ತೊಂದು ಕೊಠಡಿಯನ್ನು ಮಂಟಪದಂತೆ ಉಪಯೋಗಿಸಲಾಗಿದೆ. ಪಶ್ಚಿಮ ದಿಕ್ಕಿಗೆ ಕಟ್ಟಡದ ದ್ವಾರವಿದೆ. ಈ ಚೈತ್ಯಾಲಯವನ್ನು ೪೫ x ೨೬ x ೭೫ ಸೆಂ.ಮೀ. ಅಳತೆಯ ಇಟ್ಟಿಗೆಯಿಂದ




Fig. 10. Banavāsi Contour Map

ಕೃಪೆ: ನರಸಿಂಹಮೂರ್ತಿ ಎ.ವಿ ದೇವರಾಜ್ ಡಿ.ವಿ, ಮತ್ತು ಇತರರು, ಎಕ್ಸವೇಶನ್ಸ್ ಅಟ್ ಬನವಾಸಿ

ಕಟ್ಟಲಾಗಿದೆ. ಇಲ್ಲಿ ಹೆಂಚುಗಳು (Tiles), ಚಂದ್ರಶಿಲೆಯ ಕಲ್ಲು ಮತ್ತು ಕಲ್ಲಿನ ಬಾಗಿಲುವಾಡವು (Door Jamb) ಪತ್ತೆಯಾಗಿವೆ. ಎರಡನೆಯ ಗಜಪೃಷ್ಠಾಕೃತಿಯ ಕಟ್ಟಡಕ್ಕೆ ಪೂರ್ವ–ಪಶ್ಚಿಮಾಭಿಮುಖವಾಗಿ ೨೭.೫ ಮೀ. ಉದ್ದ ಮತ್ತು ೧೨.೫ ಮೀ. ಅಗಲವಾದ ಗೋಡೆಯಿದೆ. ಹೊರಗೋಡೆಯು ೧.೫ ಮೀ. ದಪ್ಪವಿದ್ದು, ಎರಡು ಗೊಡೆಗಳ ನಡುವಿನ ಅಂತರ ೧.೫ ಮೀ. ಅಗಲವಿದೆ. ಎರಡು ಗೋಡೆಗಳ ನಡುವೆ ಪ್ರದಕ್ಷಿಣಾಪಥವಿದೆ. ೧.೨ ಮೀ. ಅಗಲದ ದ್ವಾರವಿದೆ ಅದರ ಭಾಗದಲ್ಲಿ ಎರಡು ಮೆಟ್ಟಿಲುಗಳು ಸಮಾನ ಅಳತೆಯಲ್ಲಿದ್ದು ಅವುಗಳ ಅಂತರ ೫.೨೫ ಮೀಟರ್ ನಷ್ಟಿದೆ. ಇದೆ. ಚಿಕ್ಕ ಕಲ್ಲುಗುಂಡುಗಳನ್ನು ಬಳಸಿ ತಳಪಾಯವನ್ನು ನಿರ್ಮಿಸಲಾಗಿದೆ. ಸರಾಸರಿ ಕಲ್ಲಿನ ಅಳತೆಯ ೫.೬ ಸೆಂ.ಮೀ. ಮತ್ತು ತಳಪಾಯದ ಅಗಲವು ೧೦ ಸೆಂ.ಮೀ.

ಇದೆ. ಇವರ ಕಾಲದ ಮಣ್ಣಿನ ಶಿಲ್ಪಗಳು ದೊರೆತಿದೆ. ಔತ್ತರೇಯ ಮಡಿಕೆಗಳು, ಬೂದು ಬಣ್ಣ, ಚಾಕಲೇಟ್ ಬಣ್ಣ, (Kaolin) ಬಿಳಿ ಜೇಡಿ ಬಣ್ಣದ ಮಡಿಕೆಗಳು ಹಾಗೂ ಮಣ್ಣಿನ ಅಚ್ಚುಗಳು ದೊರತಿವೆ.[೧೨೧]

ಬೆಳಗಾವಿ ಜಿಲ್ಲೆಯ ವಡಗಾಂವ್ ಮತ್ತು ಮಾಧವಪುರ ಗ್ರಾಮದಲ್ಲಿ ಶಾತವಾಹನರ ಕಾಲದ ನೆಲೆಯಲ್ಲಿ ಒಂದನೇ ಶತಮಾನಕ್ಕೆ ಸೇರಿದ ಬೀದಿಯ ಕೆಲವು ಭಾಗಗಳು ಉತ್ಖನನದಲ್ಲಿ ಕಂಡುಬಂದಿವೆ. ಗಚ್ಚಿನ ಹಾಗೆ ಗಟ್ಟಿಯಾಗಿರುವ ೧.೪ ಕಿ.ಮೀ. ಉದ್ದಷ್ಟು ಬೀದಿಯ ಭಾಗಗಳನ್ನು ಉತ್ಖನನದ ಮೂಲಕ ಹೊರತೆಗೆಯಲಾಗಿದೆ. ಕಟ್ಟಡದ ಅವಶೇಷಗಳು ಹಾಗೂ ಹೆಂಚುಗಳು ರಸ್ತೆಯಲ್ಲಿ ದೊಕಿವೆ. ಈ ಬೀದಿಯನ್ನು ಆಗಾಗೆ ಸರಿ ಮಾಡುತ್ತಿದ್ದರು ಎನ್ನುವುದಕ್ಕೆ ಅಲ್ಲಿ ದೊರೆತ ಪದರುಗಳು ಪುರಾವೆಗಳನ್ನು ಒದಗಿಸಿವೆ. ಈ ಬೀದಿಯಲ್ಲಿ ಉತ್ತಮ ಇಟ್ಟಿಗೆ ಕಟ್ಟಡಗಳು, ೧೨೦ ತಾಮ್ರದ ನಾಣ್ಯಗಳು, ಪ್ರಶಸ್ತ ಮತ್ತು ಅರೆಪ್ರಶಸ್ತ ಕಲ್ಲುಗಳಾದ ಲ್ಯಾಪಿಜ್-ಲಜ್ಯೂಲಿ, ಜಾಸ್ಪರ್, ಅಗೇಟ್, ಸ್ಫಟಿಕ, ಹವಳದ ಮಣಿಗಳು, ಪಗಡೆ ದಾಳಗಳು, ಮಣ್ಣಿನ ಗೊಂಬೆಗಳು ಮತ್ತು ಕ್ಷತ್ರಪ ನಾಣ್ಯದ ಅಚ್ಚುಗಳು ದೊರಕಿವೆ. ಇಲ್ಲಿ ದೊರೆತ ಎಲ್ಲಾ ಅವಶೇಷಗಳಿಂದಾಗಿ ಇದು ವ್ಯಾಪಾರಸ್ಥರು ಅಥವಾ ಶ್ರೀಮಂತರು ಇದ್ದಿರುವ ಬೀದಿ ಎಂದು ತಿಳಿಯಲಾಗಿದೆ. ಜನರು ಈ ಬೀದಿಯನ್ನು ಕಾಲ್ನಡಿಗೆಗೆ ಮಾತ್ರ ಬಳಸಲಾಗಿದೆ ಎಂದು ಉತ್ಖನಕಾರರು ತರ್ಕಿಸಿದ್ದಾರೆ. ೧ನೇ ಶತಮಾನದಲ್ಲಿ ಆದಿ ಭಾಗದಲ್ಲಿ ನಿರ್ಮಿಸಿದ್ದ ಈ ಬೀದಿಯು ೨ನೆಯ ಶತಮಾನದ ಅಂತ್ಯದವರೆಗೆ ಉಪಯೋಗಿಸಲಾಗಿತ್ತು ಎಂದು ಗಣಿಸಲಾಗಿದೆ. ಇಷ್ಟು ಉದ್ದಗಲದ ಪ್ರಾಚೀನ ಬೀದಿ ಸಿಕ್ಕಿರುವುದು ದಕ್ಷಿಣ ಭಾರತದಲ್ಲೇ ಪ್ರಪ್ರಥಮ ಎಂದು ಉತ್ಖನಕಾರರಾದ ಅ.ಸುಂದರ ಅವರ ಅಭಿಪ್ರಾಯವಾಗಿದೆ ಈ ನೆಲೆಯಲ್ಲಿ ದೊರಕಿರುವ ಅವಶೇಷಗಳ ಆಧಾರದಿಂದ ಇಲ್ಲಿ ೧. ಧಾರ್ಮಿಕ ಕಟ್ಟಡ, ೨. ಸಾರ್ವಜನಿಕ ಕಟ್ಟಡಗಳು, ಮತ್ತು ಮನೆಗಳು, ಬಾವಿಗಳು ಮತ್ತು ಕಣಜಗಳು ಎಂದು ವರ್ಗೀಕರಿಸಿ ಗುರುತಿಸಲಾಗಿದೆ.

ಒಂದು ಕಟ್ಟಡದಲ್ಲಿ ಎರಡು ಕೊಠಡಿಗಳಿದ್ದು ಮುಂಭಾಗದ ಮೊಗಸಾಲೆಯಲ್ಲಿ ಪ್ರವೇಶದ್ವಾರವಿದೆ. ಕಲ್ಲುಗುಂಡುಗಳ ತಳಪಾಯದ ಮೇಲೆ ೧ ಮೀಟರ್ ದಪ್ಪವಾದ ಗೋಡೆಯನ್ನು ಕಟ್ಟಲಾಗಿದೆ. ಸ್ವಲ್ಪ ಕಾಲದ ನಂತರ ಮತ್ತೆ ಇದರ ಮೇಲೆ ಒಂದೇ ಸಾಲಿನ ಇಟ್ಟಿಗೆ ಗೋಡೆಯ ಕೊಠಡಿಯನ್ನು ಸೇರಿಸಲಾಗಿದೆ. ಈ ಕೊಠಡಿಯ ಮಧ್ಯದಲ್ಲಿ ಆಯತಾಕಾರದ ೫೦ ಸೆಂ.ಮೀ. ಮತ್ತು ೨೫ ಸೆಂ.ಮೀ. ಎತ್ತರದ ಒಂದು ಜಗಲಿಯನ್ನು ಕಟ್ಟಲಾಗಿದೆ. ಅದಕ್ಕೆ ೩೦ x ೩೨ ಸೆಂ.ಮೀ. ಅಳತೆಯ ಒಂದು ಮೆಟ್ಟಿಲಿದೆ. ಇದು "ದೇವರಿಡುವ ಕಟ್ಟೆ" ಎಂದು ಸುಂದರರವರು ತರ್ಕಿಸಿದ್ದಾರೆ. ಈ ಕಟ್ಟಡದ ದಕ್ಷಿಣಕ್ಕೆ ಮತ್ತೊಂದು ಕಟ್ಟಡವಿದೆ. ಸುಮಾರು

೧.೨೫ ಮೀ. ಆಳದ ಕೊಠಡಿಯ ಒಂದು ಭಾಗದಲ್ಲಿ ಇಟ್ಟಿಗೆಗಳಿಂದ ನಿರ್ಮಿಸಿದ ಚೌಕಾಕಾರ ಬಾವಿಯಿದೆ. ಇದರ ವಿಶೇಷತೆಯೆಂದರೆ ಕೆಳಗೆ ಇಳಿಯಲು ಮತ್ತು ಹತ್ತಲು ಪೂರ್ವ–ಪಶ್ಚಿಮದ ಗೋಡೆಗಳಲ್ಲಿ ಮೇಲಿಂದ ಸುಮಾರು ೩೨–೩೫ ಸೆಂ.ಮೀ. ಸಮಾನಾಂತರದಲ್ಲಿ ಕೈಕಾಲುಗಳನ್ನು ಇಡುವ ಗೂಡುಗಳಿವೆ. ಇದು ಒಂದು ಅಪರೂಪದ ಚೌಕಾಕಾರ ಬಾವಿಯಾಗಿದೆ. ಈ ಪ್ರದೇಶದ ಬೇರೆ ಭಾಗಗದಲ್ಲಿ ವೃತ್ತಾಕಾರದ ಬಾವಿಗಳು ದೊರಕಿವೆ. ನೆಲೆಯ ದಕ್ಷಿಣ ಭಾಗದಲ್ಲಿ ಎರಡು ದೊಡ್ಡ ಕಟ್ಟಡಗಳಿದ್ದು ಅವುಗಳಲ್ಲಿ ಒಂದು ಕಟ್ಟಡವು ಸುಮಾರು ೧೪ x ೧೨ ಮೀಟರ್ ವಿಸ್ತಾರವಾಗಿದೆ. ಈ ಕಟ್ಟಡದಲ್ಲಿ ಕಣಜದ ಕೊಠಡಿ ಮತ್ತು ಬೇರೆ ಕೊಠಡಿಗಳು ಹಾಗೂ ಪ್ರವೇಶದ್ವಾರಗಳಿವೆ.

ಈ ಭಾಗದ ಕಟ್ಟಡದಲ್ಲಿ ಮೃತ್ಪಾತ್ರೆಗಳು, ಮಣ್ಣಿನ ಗೊಂಬೆಗಳು, ಕೆಲವು ನಾಣ್ಯಗಳು ಮತ್ತು ಒಂದು ಗೂಡಿನಲ್ಲಿ ಹೆಚ್ಚು ಮಣ್ಣಿನ ಲೋಟಗಳು ದೊರಕಿವೆ. ಈ ಕಟ್ಟಡದಲ್ಲಿ ಪಡಸಾಲೆ, ಕಣಜಗಳು ತೊಟ್ಟಿಗಳು ಮತ್ತು ಪಕ್ಕದಲ್ಲಿ ಗಜಪೃಷ್ಠಾಕೃತಿಯ ರಚನೆ ಕಂಡುಬಂದಿರುವುದರಿಂದ ಇದು ಧಾರ್ಮಿಕ ಕಟ್ಟಡ ಎಂದು ಸುಂದರ ಅವರ ಅಭಿಪ್ರಾಯಿಸಿದ್ದಾರೆ. ಈ ನೆಲೆಯ ಉತ್ತರದಲ್ಲಿ ಎರಡು ಮನೆಗಳ ಅವಶೇಷಗಳಿವೆ. ಒಂದು ಮನೆಯಲ್ಲಿ ಎರಡು ಕೊಠಡಿಗಳು ೪.೩೦ x ೩.೮೦ ಮೀಟರ್ ಅಳತೆಯದ್ದಾಗಿದೆ. ಕಟ್ಟಡದ ಈಶಾನ್ಯಕ್ಕೆ ೫೦ ಮೀಟರ್ ಅಂತರದಲ್ಲಿ ಎರಡು ಕೊಠಡಿಗಳನ್ನು ಸೇರಿಸಿದಂತೆ ಉತ್ತರಕ್ಕೆ ಮೊಗಸಾಲೆಯಿದೆ. ಉತ್ಖನನದಲ್ಲಿ ದೊರೆತ ಬಾವಿಯ ನಿರ್ಮಾಣದ ಶೈಲಿಯು ವಿಶೇಷವಾಗಿದೆ. ಮೊದಲನೇ ಬಾವಿಗೆ ೧.೮೦ ಮೀಟರ್ ವ್ಯಾಸದ ಗುಂಡಿಯನ್ನು ಕೆಳಗೆ ಕಲ್ಲಿನವರೆಗೆ ತೆಗೆಯಲಾಗಿದೆ. ಈ ಗುಂಡಿಯ ಬದಿಯಿಂದ ೮.೧೦ ಸೆಂ.ಮೀ. ಅಂತರದಲ್ಲಿ ವರ್ತುಳಾಕಾರದಲ್ಲಿ ಇಟ್ಟಿಗೆ ಗೋಡೆಯನ್ನು ಕಟ್ಟಲಾಗಿದೆ. ಅವುಗಳ ಅಂತರದಲ್ಲಿ ಸುಣ್ಣದ ಹರಳಗಳು ಮೇಲೆಂದ ಮೇಲೆ ಒತ್ತೊತ್ತಾಗಿ ೩.೫೦ ಮೀಟರ್ ಆಳದವರೆಗೆ ತುಂಬಲಾಗಿದೆ. ಬಾವಿಯ ಒಳಗಿನ ವ್ಯಾಸ ೧ ಮೀಟರ್ ಕೆಳಗೆ ಗರಸು ಕಲ್ಲಿನಲ್ಲಿ ೧ ಮೀಟರ್ ವ್ಯಾಸದ ಗುಂಡಿಯನ್ನು ನೀರಿನ ಮಟ್ಟದವರೆಗೆ ತೋಡಲಾಗಿದೆ. ಇಟ್ಟಿಗೆ ಗೋಡೆ ಎಷ್ಟೇ ಗಟ್ಟಿಯಾಗಿದ್ದರೂ ಅಸಮ ಒತ್ತಡದಿಂದ ಭೂಮಿಯ ಯಾವುದೇ ಭಾಗಕ್ಕೆ ಧಕ್ಕೆಯಾಗಬಹುದು. ಅಲ್ಲದೆ ಮಳೆ ನೀರು ಕೆಳಗಿಳಿದು, ಹಾಳು ಮಣ್ಣಿನ ಮೇಲಿನ ಕಲ್ಮಶ ನೀರು ಬಾವಿಯೊಳಗೆ ಜಿನುಗುವುದು. ಇದರಿಂದ ಬಾವಿಯ ನೀರು ಸಹ ಕಲ್ಮಶವಾಗುತ್ತದೆ. ಇವೆರಡನ್ನು ತಡೆಗಟ್ಟಲು ಗೋಡೆ ಮತ್ತು ಸುಣ್ಣದ ಹರಳುಗಳನ್ನು ಒತ್ತೊತ್ತಾಗಿ ತುಂಬಲಾಗಿದೆ. ಈ ರೀತಿಯ ಬಾವಿ ನಿರ್ಮಿತಿಯ ಎಲ್ಲಿಯೂ ಕಂಡುಬಂದಿಲ್ಲ ಎಂದು ಉತ್ಖನನಕಾರರು ಅಭಿಪ್ರಾಯಪಟ್ಟಿರುವರು.

ಈ ನೆಲೆಯ ಈಶಾನ್ಯ ಭಾಗದಲ್ಲಿ ಒಂದು ಕಟ್ಟಡದ ಎರಡು ಗೋಡೆಗಳು ಕಂಡುಬಂದಿವೆ. ಇದರ ಹೊರಗೆ ದಕ್ಷಿಣ ಭಾಗದಲ್ಲಿ ಒಂದರ ಪಕ್ಕ ಒಂದರಂತೆ ಮೂರು ವೃತ್ತಾಕಾರದ ಇಟ್ಟಿಗೆಯ ಕಣಜಗಳಿವೆ. ೩-೪ ಮೀಟರ್. ಅಳದಲ್ಲಿ ನೆಲಕ್ಕೆ ಇಟ್ಟಿಗೆಯನ್ನು ಹಾಸಿ ಗಟ್ಟಿಗೊಳಿಸಲಾದೆ. ೧ ಕಿಲೋ ಗ್ರಾಮ್ ಕಪ್ಪಾದ ಅಕ್ಕಿ ಒಂದು ಕಣಜದಲ್ಲಿ ದೊರಕಿದೆ. ಉತ್ಖನನದಲ್ಲಿ ದೊರೆತ ಬಾವಿ ಮತ್ತು ಕಣಜಗಳಿಗೆ ಆಯತಾಕಾರದ ಇಟ್ಟಿಗೆಗಳಲ್ಲದೆ, ವರ್ತುಳ ಹಾಗೂ ಕಮಾನಿನಂತೆ ಬಾಗಿದ ಇಟ್ಟಿಗೆ, ಟ್ರೆಪಿಜಿಯಂ ಆಕಾರದ ಇಟ್ಟಿಗೆಗಳನ್ನು ಉಪಯೋಗಿಸಲಾಗಿದೆ. ಈ ರೀತಿ ಇಟ್ಟಿಗೆಗಳನ್ನು ವೃತ್ತಾಕಾರದ ಬಾವಿ ಮತ್ತು ಕಣಜಗಳಿಗಾಗಿ ವಿಶೇಷವಾಗಿ ತಯಾರಿಸಲಾಗಿದೆ. ೪೪ x ೨೨ x ೮ ಸೆಂ.ಮೀ. ೩೪ x ೩೭ x ೧೦ ಮತ್ತು ೨೪ x ೨೪ x ೮ ಸೆಂ.ಮೀ. ಅಳತೆಯ ಇಟ್ಟಿಗೆಗಳನ್ನು ಹೆಚ್ಚಾಗಿ ಕಟ್ಟಡಗಳಿಗೆ ಬಳಸಲಾಗಿದೆ. ಮೆಲ್ಛಾವಣಿಗೆ ಬಳಸಿದ ಹೆಂಚುಗಳು, ಹೊಳಪುಳ್ಳ ಮೃತ್ಪಾತ್ರೆಗಳು, ಕೆಂಪು ಬಣ್ಣದ ಹೂಜಿಯಾಕಾರದ ಮಡಿಕೆ ಚೂರುಗಳು ಸತು-ತವರ (ಪೋಟಿನ್) ನಾಣ್ಯಗಳು, ತಾಮ್ರ, ಬೆಳ್ಳಿ ನಾಣ್ಯಗಳು ಸುಟ್ಟ ಮಣ್ಣಿನ ಚಪ್ಪಟೆಯ ಅಚ್ಚುಗಳು, ರೋಮನ್ ನಾಣ್ಯ ಮುಂತಾದ ಅವಶೇಷಗಳು ನೆಲೆಯಲ್ಲಿ ದೊರಕಿವೆ.[೧೨] ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನಲ್ಲಿ ಸನ್ನತಿ ಗ್ರಾಮದಲ್ಲಿ ಶಾತವಾಹನರ ಕಾಲಕ್ಕೆ ಸೇರಿದ ಎರಡು ಬಾಗಿಲುಗಳಿರುವ ಚೌಕಾಕಾರ ಇಟ್ಟಿಗೆ ಗೋಡೆ ಒಂದು ನೈರುತ್ಯ ಮತ್ತು ಪೂರ್ವ ಭಾಗದಲ್ಲಿ ಕಂಡುಬಂದಿದೆ. ಇಲ್ಲಿ ಅಗಲವಾದ ಮೆಟ್ಟಿಲುಗಳಿವೆ. ಈ ಕಟ್ಟಡದ ಉದ್ದ ೯.೬೦ ಮೀ. ಮತ್ತು ಅಗಲ ೯.೯೦ ಮೀ. ಮತ್ತು ೩.೯೫ ಮೀ. ಎತ್ತರವಾಗಿದ್ದು ಪ್ರಸ್ತುತ ತಳಪಾಯ ಮಾತ್ರವೇ ಉಳಿದುಕೊಂಡಿದೆ. ಕಟ್ಟಡದ ಛತ್ತಿಗೆ ಹಾಕಲಾದ ಹೆಂಚುಗಳು ದೊರಕಿವೆ. ಹಾಳಾದ ಕೊಠಡಿಗಳ ಭಾಗದಲ್ಲಿ ೭೦ ಸೆಂ.ಮೀ. ಅಗಲದ ಕಟ್ಟೆಯಿದೆ. ಕೊಠಡಿಗಳ ಮುಂಭಾಗದಲ್ಲಿ ೬೦ ಮೀ. ಅಗಲದವಾದ ವಠಾರ ಕಂಡುಬಂದಿದೆ. ಹಂತದ ಕೊಠಡಿಯು ವಠಾರಕಿಂತ ಸ್ವಲ್ಪ ಎತ್ತರವಾಗಿದೆ. ಬಹುಶಃ ಕೆಳಗಿನ ಕಟ್ಟಡ ಸ್ಥಿರವಾಗಿರಲು ಮತ್ತು ಕಟ್ಟಡವು ಸುಂದರವಾಗಿ ಕಾಣಲು ಇಂಗ್ಲಿಷ್ ಬಾಂಡ್ ರೀತಿಯಲ್ಲಿ ಕಟ್ಟಲಾಗಿದೆ. ಇದರ ಹೊರಗಿನ ಮೂರು ಭಾಗದ ಗೋಡೆಯು ೧.೫೦-೨.೭ ಮೀ. ನಷ್ಟು ದಪ್ಪವಾಗಿದೆ. ಎರಡು ಅಳತೆ ಇಟ್ಟಿಗೆಯನ್ನು ಬಳಸಲಾಗಿದೆ. ಅವುಗಳು ಇಂತಿವೆ. ೫೫ ೨೭ x ೮ ಸೆಂ.ಮೀ. ಮತ್ತು ೩೦ x ೧೯ x ೬ ಸೆಂ.ಮೀ.

ಉತ್ತರ ಭಾಗದ ಮತ್ತೊಂದು ಇಟ್ಟಿಗೆಯ ಕಟ್ಟಡವು ೧.೧೫ ಮೀ ಅಗಲ ಮತ್ತು ೧.೫೦ ಎತ್ತರವಾಗಿದೆ. ಇಟ್ಟಿಗೆ ಅಳತೆಯು ೨೮ x ೨೨ x ೨೭ ಸೆಂ.ಮೀ. ಇರುವುದರಿಂದ ಈ

ಕಟ್ಟಡವು ಕಣಜ ಅಥವಾ ಬಾವಿಯಾಗಿರಬಹುದು ಎಂದು ಊಹಿಸಲಾಗಿದೆ. ಇದೇ ರೀತಿಯ ಕಟ್ಟಡ ನಮಗೆ ವಡಗಾಂವ-ಮಾಧವಪುರ ಪ್ರದೇಶದಲ್ಲಿ ದೊರಕಿರುವುದು ಗಮನಾರ್ಹ ದಕ್ಷಿಣ ಭಾಗದಲ್ಲಿ "ಎಲ್" (L) ಆಕಾರದ ಧಾನ್ಯ ಸಂಗ್ರಹಣೆಯ ಕಲ್ಲಿನ ಸಾಲು ಕಂಡುಬಂದಿದೆ. ಅದಕ್ಕೆ ಹೊಂದಿಕೊಂಡಂತೆ ಒಲೆಯಿದೆ. ಈ ನೆಲೆಯಲ್ಲಿ ಮಣ್ಣಿನ ಗೊಂಬೆಗಳು, ಆಟಿಕೆಯ ಎತ್ತಿನ ಬಂಡಿ, (ಚಕ್ಕಡಿ) ಮನೆಯ ಬಳಕೆಯ ರುಬ್ಬುವ ಕಲ್ಲು, ದಂತದಿಂದ ಮಾಡಿದ ಚಿಕ್ಕ ಸ್ತೂಪ, ಆಭರಣಗಳಾದ ಕಿವಿಯ ಓಲೆ, ಬಳೆ ಮತ್ತು ಸೀಸ, ತಾಮ್ರದ ನಾಣ್ಯಗಳು ದೊರೆತಿವೆ. ಔತ್ತರೇಯ ಕಾಂತಿಯುಳ್ಳ ಕಪ್ಪು (NBP) ಮಡಿಕೆಗಳು, ರೌಲೇಟೆಡ್, ಕೆಂಪುಬಣ್ಣ, ಇತ್ಯಾದಿ ಮಡಿಕೆಗಳು ಉತ್ಖನನದಲ್ಲಿ ದೊರಕಿವೆ.[೧೨೩] ಗುಲ್ಬರ್ಗಾ ಜಿಲ್ಲೆಯಿಂದ ೨ ಕಿ.ಮೀ. ದೂರದ ಗುರುಸನಗಿ ಎಂಬ ಗ್ರಾಮವು ಭೀಮಾ ನದಿಯ ಬಲದಂಡೆಯಲ್ಲಿದೆ. ಇಲ್ಲಿ ಶಾತವಾಹನರ ಕಾಲದ ಬುದ್ಧನ ಶಿಲ್ಪಗಳು ಮತ್ತು ಸ್ತೂಪ ದೊರೆತಿದೆ. ಅಲ್ಲಿ ಚಿಕ್ಕ ಕಲ್ಲಿನ ಫಲಕದಲ್ಲಿ ಮಹಾಭೋಧಿ ಮರ, ಬುದ್ಧನ ಶಿಲ್ಪಗಳು, ಕಲ್ಲಿನ ಜಗಲಿ ಹಾಗೂ ಛತ್ತಿಗೆ ಹಾಕುವ ಹೆಂಚುಗಳು ದೊರೆತಿವೆ. ಇವೆಲ್ಲವುಗಳನ್ನು ಸುಣ್ಣದ ಕಲ್ಲಿನಿಂದ ರಚಿಸಲಾಗಿದೆ. ಎರಡು ಸ್ತೂಪದ ವೃತ್ತಾಕಾರದ ತಳಪಾಯ ದೊರಕಿದೆ. ಇದನ್ನು ಶಾತವಾಹನರ ಕಾಲದ ದೊಡ್ಡ ಇಟ್ಟಿಗೆಗಳಿಂದ ಕಟ್ಟಲಾಗಿದೆ.[೧೨೪] ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ ಶಾತವಾಹನ ಕಾಲದ ಕಟ್ಟಡದ ಅವಶೇಷಗಳು ದೊರಕುವುದರೊಂದಿಗೆ ಮಡಿಕೆಗಳನ್ನು ತಯಾರಿಸುವ ಕೈಗಾರಿಕ ಕೇಂದ್ರವನ್ನು ಶೋಧಿಸಲಾಗಿದೆ.[೧೨೫] ಹೆಚ್ಚಾಗಿ ಬಿಳಿ ಮತ್ತು ಹಳದಿ ಬಣ್ಣ ಲೇಪಿತ ಮಡಿಕೆಗಳು ಕಂಡುಬಂದಿವೆ. ಇವರ ಮತ್ತು ರೋಮನ್‌ರ ಒಟ್ಟು ೫೫ ನಾಣ್ಯಗಳನ್ನು ದೊರಕಿವೆ. ಬೆಳ್ಳಿಯ ಎರಡು ಚೌಕವಾದ ಮುದ್ರಾಂಕಿತ ನಾಣ್ಯ, ಸೀಸ ಅಥವಾ ಪೋಟಿನ್, ತಾಮ್ರದ ನಾಣ್ಯಗಳು ಸಹ ದೊರಕಿವೆ.[೧೨೬] ಕಾವೇರಿ ನದಿ ದಂಡೆಯ ಮೇಲಿರುವ ತಲಕಾಡಿನ ಉತ್ಖನನದಲ್ಲಿ ಬೃಹತ್ ಶಿಲಾಯುಗ ಕಾಲದಿಂದ ಮೈಸೂರು ಒಡೆಯರ ಕಾಲದವರೆಗಿನ ಅವಶೇಷಗಳು ದೊರೆತಿವೆ. ಇದು ಗಂಗರ ರಾಜಧಾನಿಯೂ ಸಹ ಆಗಿತ್ತು. ಶಾತವಾಹನರ ಕಾಲದ ಸುಟ್ಟ ಮಣ್ಣು, ಬೂದಿ, ಇದ್ದಿಲು ಬಟ್ಟಲುಗಳು, ರಸೆಟ್ ಲೇಪಿತ ಜೇಡಿಮಣ್ಣಿನ ಮಡಿಕೆಗಳ ಇಲ್ಲಿ ಕಂಡುಬಂದಿವೆ. ಯಾವುದೇ ನಾಣ್ಯಗಳು ದೊರಕಿಲ್ಲ. ಇವರು ರೋಮನ್‌ರೊಂದಿಗೆ ಸಂಪರ್ಕ ಹೊಂದಿದ್ದರು ಎನ್ನುವುದಕ್ಕೆ ಪುರಾವೆಯಾಗಿ ಅವರ ಕೆಂಪು ಬಣ್ಣದ ಮಡಿಕೆಗಳು ಸುಟ್ಟ ದೊಡ್ಡ ಮಡಿಕೆಗಳು, ಉದ್ದ ಕಂಠಭಾಗವಿರುವ ಹೊಂದಿದ ಮಡಿಕೆಗಳು ಹಾಗೂ ಹೆಚ್ಚು ನಯಗೊಳಿಸಿದ ಮಡಿಕೆಗಳು ದೊರಕಿವೆ.[೧೨೭] ಕೊಪ್ಪಳದಲ್ಲಿ ಶಾತವಾಹನರ ಕಾಲದ ಮಡಿಕೆ ಚೂರುಗಳು ಹಾಗೂ ಅವರ ಲಾಂಛನದ ಮೇಲೆ ಆನೆಯ ರೇಖಾಚಿತ್ರಗಳಿವೆ. ಇಲ್ಲಿ ದೊರೆತ ನಾಣ್ಯದ ಬದಿಯಲ್ಲಿ ಆನೆಯ ಉಬ್ಬುಚಿತ್ರವಿದೆ. ಸುತ್ತಲೂ

ಬ್ರಾಹ್ಮಿಲಿಪಿಯಲ್ಲಿ "ಸಿರಿ ಸತರ" (ನಿ) ಎಂಬುದಾಗಿ ಲಿಪಿ ಬ್ರಾಹ್ಮಿ ಮತ್ತು ಪ್ರಾಕೃತ ಭಾಷೆಯಲ್ಲಿದೆ. ಗ್ರಾಮದಲ್ಲಿ ತಾಮ್ರದ ಪಾತ್ರೆಯಲ್ಲಿ ಸುಮಾರು ನಾಲ್ಕು ಸಾವಿರ ನಾಣ್ಯಗಳು ದೊರಕಿವೆ. ಈ ಪಾತ್ರೆಯ ಮೇಲೆ "ಚಿಂತಸ" ಎಂದಿದೆ. ಚಿಂತ ಎಂಬುದು ವ್ಯಕ್ತಿಯ ಹೆಸರು "ಸ" ಷಷ್ಠಿ ವಿಭಕ್ತಿ ಪ್ರಾಕೃತ ಭಾಷೆಯಲ್ಲಿನ "ಸ" ಕನ್ನಡದಲ್ಲಿ "ನ" ಕಾರಣ ಚಿಂತಸ ಕನ್ನಡ ಚಿಂತನ, ಈ ಮುದ್ರಾಂಕಿತ ನಾಣ್ಯಗಳು ಮೌರ್ಯರ ಕಾಲದಿಂದ ಶಾತವಾಹನರ ಕಾಲದವರೆಗೂ ಚಲಾವಣೆಯಲ್ಲಿದ್ದವು.[೧೨೮] ಈ ಕೊಪ್ಪಳ ಪ್ರದೇಶವನ್ನು ಕೊಪಣಾದ್ರಿ ಮತ್ತು ಕುಪಣಾಚಲ ಎಂದು ಕೊಪಣ ಅಥವಾ ಕೋಪಣ ನಗರವೆಂದು ಶಾತವಾಹನರ ಕಾಲದಲ್ಲಿ ಕರೆಯಲಾಗುತ್ತಿತ್ತು.[೧೨೯]

ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯಲ್ಲಿ ಆದಿಇತಿಹಾಸ ಕಾಲಕ್ಕೆ ಸೇರಿದ ಬೂದು ಬಣ್ಣ ಕಿತ್ತಳೆ ಬಣ್ಣ, ತಿಳಿಕೆಂಪು, ಮತ್ತು ರಸೆಡ್‌ಕೊಟೆಡ್ ಮಡಿಕೆಗಳು ದೊರೆತಿವೆ.[೧೩೦] ಶಿರಗುಪ್ಪ ತಾಲೂಕಿನ ನೈರುತ್ಯಕ್ಕೆ ಬೊಮ್ಮಪ್ಪನ ಗುಡ್ಡದಿಂದ ೧/೨ ಕಿ.ಮೀ. ದೂರದ ಉತ್ತರಕ್ಕೆ ಹಿರೆಕಲ್ಲು ಹಳ್ಳದಲ್ಲಿ ಜಾಸ್ಪರ್, ಬೆಸಾಲ್ಟ್, ಡೈಕ್, ಶಿಲೆಗಳು ಕಂಡುಬಂದಿದೆ.[೧೩೧] ಸಂಡೂರು ತಾಲೂಕಿನ ಕಾರ್ತಿಕೇಶ್ವರ ಗುಡ್ಡದಲ್ಲಿ ಇಟ್ಟಿಗೆ ಗೋಡೆ ಮತ್ತು ಜೋಗಿನ ಕೊಳ್ಳದಲ್ಲಿ ಆದಿಇತಿಹಾಸ ಕಾಲದ ಕೆಲವು ಅವಶೇಷಗಳು ದೊರಕಿವೆ.[೧೩೨] ಬೆಂಗಳೂರು ಜಿಲ್ಲೆಯ, ದೊಡ್ಡ ಬಳ್ಳಾಪುರ ತಾಲ್ಲೂಕಿನಲ್ಲಿರುವ ರಾಜಘಟ್ಟದಲ್ಲಿ ಕ್ರಿ.ಶ. ೪ ರಿಂದ ೬ನೇ ಶತಮಾನಗಳ ವರೆಗೆ ಬಳಕೆಯಲ್ಲಿದ್ದ ಬೌದ್ಧ ಚೈತ್ಯ ಮತ್ತು ವಿಹಾರದ ಅವಶೇಷಗಳು ಕಂಡುಬಂದಿವೆ. ಸಾಲಾಗಿ ಇಟ್ಟಿಗೆಯಿಂದ ಕಟ್ಟಡದಲ್ಲಿ ಕಟ್ಟಲಾದ ವಿಹಾರದ ಕೊಠಡಿಯಿದೆ. ಚೈತ್ಯಾಲಯದ ದಕ್ಷಿಣಕ್ಕಿರುವ ಕಟ್ಟಡವು ಪ್ರದಕ್ಷಿಣಾಪಥವನ್ನು ಹೊಂದಿದ್ದು. ಅದರ ಮುಂಭಾಗದಲ್ಲಿ ಹಜಾರವಿದೆ. ಈ ಕಟ್ಟಡದ ಸುತ್ತಲೂ ವಿಶಾಲವಾದ ಅಂಗಳ ಮತ್ತು ಪ್ರಾಕಾರದ ಗೋಡೆಯಿದೆ. ಪೂರ್ವ ದಿಕ್ಕಿನ ಚೈತ್ಯದ ಅಂಗಳದಲ್ಲಿ ಸಾಲಾಗಿ ವಿಹಾರದ ಏಳಕ್ಕೂ ಅಧಿಕ ಕೊಠಡಿಗಳಿವೆ. ಚೈತ್ಯದ ಗೋಡೆಗೆ ಗಾರೆಯನ್ನು ಬಳಸಲಾಗಿದೆ. ಈ ಆವರಣದ ನಾಲ್ಕು ಮೂಲೆಗಳಲ್ಲಿ ಸ್ತಂಭಗಳಿದ್ದು ನೆಲಕ್ಕೆ ಹಾಸುಬಂಡೆಯನ್ನು ಹಾಸಲಾಗಿದೆ. ಈ ನೆಲೆಯಲ್ಲಿ ನಮಗೆ ಮಣ್ಣಿನ ಚಿಕ್ಕ ಸೂಪ್ತಗಳು ದೊರಕಿದ್ದು, ಅದರ ಒಳಗೆ ಶಾಸನವಿದೆ. ಅದರಲ್ಲಿ ಪ್ರಾಕೃತ-ಸಂಸ್ಕೃತ ಭಾಷೆಯ "ಯೇ ಧರ್ಮ ಹೇತುಪ್ರಭವ" ಶೋಕ್ಲವಿದೆ.[೧೩೩] ಉತ್ತರ ಕನ್ನಡ ಜಿಲ್ಲೆಯ ಬನವಾಸಿಯ ಬಳಿಯಿರುವ ಗುಡ್ನಾಪುರವು ಕದಂಬರ ಕಾಲದ ಒಂದು ಮುಖ್ಯ ಪಟ್ಟಣ ಎಂದು ಗುರುತಿಸಲಾಗಿದೆ. ಇದರ ಬಗೆಗೆ ರವಿವರ್ಮನ ಸ್ತಂಭ ಶಾಸನದಲ್ಲಿ ಉಲ್ಲೇಖವಿದೆ. ಇಲ್ಲಿ ಲ್ಯಾಟ್‌ರೈಟ್ ಇಟ್ಟಿಗೆ ಮತ್ತು ಮಣ್ಣಿನ ಇಟ್ಟಿಗೆಗಳಿಂದ ನಿರ್ಮಿತವಾದ ಕಟ್ಟಡದ ಅವಶೇಷಗಳು ಕಂಡುಬಂದಿವೆ. ಒಂದು ಭಾಗದಲ್ಲಿ ಕೊಠಡಿಗಳು, ಮುಖಮಂಟಪಗಳು, ವಿಶಾವಾದ ಆವರಣ ದೊರಕಿದ್ದು ಇದನ್ನು ಅರಮನೆಯೆಂದು

ಗುರುತಿಸಲಾಗಿದೆ. ನೃತ್ಯಶಾಲಾ ಕೊಠಡಿಯ ನೆಲಕ್ಕೆ ಇಟ್ಟಿಗೆಯನ್ನು ಜೋಡಿಸಲಾಗಿದೆ. ಕೆಲವು ಕಟ್ಟಡದ ಸೋಪಾನಗಳು ಮತ್ತು ಕಂಬಗಳ ಅವಶೇಷಗಳು ದೊರಕಿದೆ.[೧೩೪] ಬನವಾಸಿಯಲ್ಲಿಯ ಕೋಟೆಗೋಡೆಯ ಅವಶೇಷವು ಸಹ ಕದಂಬರ ಕಾಲಕ್ಕೆ ಸೇರಿದ್ದೆಂದು ಅಭಿಪ್ರಾಯಿಸಲಾಗಿದೆ. ಕ್ರಿ.ಶ. ೫ನೇ ಶತಮಾನದಲ್ಲಿ ಈ ಕೋಟೆಗೋಡೆಯನ್ನು ಮತ್ತೆ ಜಂಬಿಟ್ಟಿಗೆ, ಇಟ್ಟಿಗೆ ಹಾಗೂ ಜೇಡಿ ಮಣ್ಣಿನಿಂದ ಕಟ್ಟಲಾಗಿದೆ.[೧೩೫] ಮೈಸೂರು ಜಿಲ್ಲೆಯಲ್ಲಿರುವ ತಲಕಾಡಿನಲ್ಲಿ ಗಂಗರ ಕಾಲದ ಅವಶೇಷಗಳು ದೊರೆತಿವೆ. ಕೀರ್ತಿನಾರಾಯಣ ದೇವಾಲಯದ ವಾಯವ್ಯಕ್ಕೆ ೫೦೦ ಮೀಟರ್ ದೂರದಲ್ಲಿ ಇಟ್ಟಿಗೆ ಕಟ್ಟಡವು ದೊರಕಿದ್ದು ಇದನ್ನು ಜೈನ ಪಾರ್ಶ್ವನಾಥನ ಬಸದಿ ಎಂದು ಗುರುತಿಸಲಾಗಿದೆ. ಇವರ ಕಾಲದಲ್ಲಿ ಜೈನ ಧರ್ಮಕ್ಕೆ ಪೋತ್ಸಾಹ ನೀಡಿದ್ದರು. ಪೂರ್ವ–ಪಶ್ಚಿಮವಾಗಿ ೨೧.೭ ಮತ್ತು ದಕ್ಷಿಣವಾಗಿ ೧೬.೭ ಮೀಟರ್ ಗೊಡೆಯಿದೆ. ಈ ಕಟ್ಟಡದ ಕೆಳಭಾಗ ಮಾತ್ರವೇ ದೊರೆತಿದೆ. ಒಂದೇ ರೇಖೆಯಲ್ಲಿ ಪೂರ್ವಕ್ಕೆ ಮುಖ ಮಾಡಿದ ಮೂರು ಕೊಠಡಿಗಳಿವೆ. ಆಯತಾಕಾರವಾಗಿರುವ ಮೂರು ಗರ್ಭಗೃಹಗಳನ್ನು ಕಲಸು ಮಣ್ಣು ಮತ್ತು ಇಟ್ಟಿಗೆಯಿಂದ ಕಟ್ಟಲಾಗಿದೆ. ಗರ್ಭಗೃಹಗಳಿಗೆ ಬಳಸಿದ ಇಟ್ಟಿಗೆಗಳು ಕ್ರಮಬದ್ಧವಾಗಿ ತಯಾರಿಸಲಾಗಿದೆ. ಈ ಮೂರು ಗರ್ಭಗೃಹಗಳಿಗೆ ದ್ವಾರಬಾಗಿಲುಗಳು ಹಾಗೂ ಮುಂದೆ ಚೌಕಾಕಾರ ಮಂಟಪವಿದೆ. ಈ ಮಂಟಪದಲ್ಲಿ ೩೩ ಸಾಲುಗಳ ಕಂಬದ ಕುಳಿಗಳು ದೊರಕಿವೆ. ಛತ್ತಿನ ಭಾಗಕ್ಕೆ ಮರದ ದಿಮ್ಮಿಗಳನ್ನು ಜೋಡಿಸಿರಬಹುದು. ಈ ದೇವಾಲಯಕ್ಕೆ ಪ್ರದಕ್ಷಿಣಾಪಥವಿದೆ. ಉತ್ಖನನದಲ್ಲಿ ಇದ್ದಿಲು ಮತ್ತು ಬೂದಿ ದೊರತಿರುವುದರಿಂದ ಛತ್ತಿಗೆ ಮರದ ದಿಮ್ಮಿ ಬಳಸಿರಬಹುದು ಎಂದು ಊಹಿಸಲಾಗಿದೆ. ಗಂಗರ ಕಾಲದ ಮೃತ್ಪಾತ್ರೆಗಳು, ಅರೆಪ್ರಶಸ್ತ ಕಲ್ಲು, ಮಣಿಗಳು, ಸುಟ್ಟಮಣ್ಣಿನ ಬೊಂಬೆಗಳು, ದಂತ, ಎಲಬು ಗಾಜು ಸುಡಾವೆ ಮಣ್ಣಿನ ಮಣಿಗಳು ಮುಂತಾದ ವಸ್ತು ಅವಶೇಷಗಳು ದೊರಕಿವೆ.[೧೩೬]

ವಿಜಯನಗರ ಕಾಲದಲ್ಲಿ ೧೩೪೨ರಲ್ಲಿ ಮಾಧವಮಂತ್ರಿಯು ತಲಕಾಡಿನಲ್ಲಿ ಅಣೆಕಟ್ಟನ್ನು ಕಟ್ಟಿಸಿದ. ಇದರಿಂದ ಸಹಸ್ರಾರು ಜನರು ಕೃಷಿಯಿಂದ ಪ್ರಯೋಜನ ಪಡೆದಿದ್ದರು. ಇಲ್ಲಿ ಹೊಯ್ಸಳರು ನಿರ್ಮಿಸಿದ ಕೀರ್ತಿನಾರಾಯಣ ದೇವಾಲಯಕ್ಕೆ ದ್ವಾರಬಾಗಿಲನ್ನು ಕಟ್ಟಿಸಲಾಗಿದೆ. ಮಾಧಮಂತ್ರಿಯು ವೈದ್ಯೇಶ್ವರ ದೇವಾಲಯನವನ್ನು ನಿರ್ಮಿಸಿದನು. ಈ ಎರಡು ದೇವಾಲಯದ ಮಧ್ಯದಲ್ಲಿ ಬಳೆಯ ಎರಡು ಬಾವಿಗಳು (Ringwell) ಮತ್ತು ಲೋಹದ ವಸ್ತುಗಳು ದೊರಕಿವೆ. ಇಲ್ಲಿ ದೊರೆತ ಕಟ್ಟಡದ ಇಟ್ಟಿಗೆಗಳು ೩೦ x ೧೩.೫ x ೬.೨೫ x ೧೫ x ೫ ಮತ್ತು ೨೪ x ೧೪ x ೫ ಸೆಂ.ಮೀ. ಉದ್ದ, ಅಗಲ ಮತ್ತು ಎತ್ತರ ಅಳತೆದ್ದಾಗಿದೆ.

ಇಲ್ಲಿರುವ ಮರಳು ದಿನ್ನೆಯಲ್ಲಿರುವ ಕೋಟೆಗೋಡೆಯನ್ನು ವಿಜಯನಗರ ಕಾಲದ್ದೆಂದು ಊಹಿಸಲಾಗಿದೆ. ಈ ಗೋಡೆಯು ಪೂರ್ವ ಮತ್ತು ದಕ್ಷಿಣೋತ್ತರವಾಗಿ ಸಮನಾಂತರವಾಗಿದ್ದು, ಗೋಡೆಯು ೦.೫ ದಿಂದ ೩ ಮೀಟರ್‌ನಷ್ಟು ದಪ್ಪವಿದೆ. ಈ ಗೋಡೆಯ ಕೆಳಭಾಗದಲ್ಲಿ ಇಟ್ಟಿಗೆಯಿಂದ ಕಟ್ಟಿದ ನೀರಿನ ನಾಲೆ ಪೂರ್ವ ದಿಕ್ಕಿಗಿದೆ. ಅಲ್ಲಿ ನೀರು ಸಂಗ್ರಹಿಸುವ ತೊಟ್ಟಿ ಮತ್ತು ಸ್ನಾನದ ಕೊಳವಿದೆ. ಈ ನೆಲೆಯು ಅರಮನೆ ಅಥವಾ ಶ್ರೀಮಂತರ ಮನೆಯಿರಬಹುದೆಂದು ಅಭಿಪ್ರಾಯಿಸಲಾಗಿದೆ. ಮತ್ತೊಂದು ಭಾಗದಲ್ಲಿ ಗಾಳಿಯನ್ನು ತಡೆಗಟ್ಟುವ ಉದ್ದನೆಯ ಗೋಡೆಯನ್ನು ನಿರ್ಮಿಸಲಾಗಿದೆಯೆಂದು ಉತ್ಖನನಕಾರರು ತರ್ಕಿಸಿದ್ದಾರೆ. ಇದು ೨೨ ಮೀ ಉದ್ದವಿದ್ದು ಇಟ್ಟಿಗೆಯನ್ನು ಇಂಗ್ಲಿಷ್ ಮತ್ತು ಫ್ಲೆಮಿಶ್ ಬಾಂಡ್‌ನಲ್ಲಿ ಕಲಸು ಮಣ್ಣನ್ನು ಬಳಸಿ ಕಟ್ಟಲಾಗಿದೆ. ಇದಕ್ಕೆ ತಳಪಾಯವಿಲ್ಲ. ಇವರ ಕಾಲದ ಅವಶೇಷಗಳಲ್ಲಿ ಬಳಪದ ಕಲ್ಲು, ಸುಡಾವೆ, ಮಣ್ಣಿನ ಮುದ್ರೆಗಳು ಇವರ ಕಾಲದ ಪ್ರಮುಖ ಅವಶೇಷಗಳಾಗಿವೆ. ಬಳಪದ ಕಲ್ಲಿನ ಮೂರು ಮುದ್ರಿಕೆಗಳು, ವಿಜಯನಗರ ಕಾಲದ "ಕ" ಲಿಪಿಯುಳ್ಳ ಮುದ್ರಿಕೆ ಆನೆ ನಿಂತಿರುವ ಮುದ್ರಿಕೆ, ಗಾರೆಯ ಶಿಲ್ಪಗಳು ಹಾಗೂ ಮೃತ್ಪಾತ್ರೆಗಳು ದೊರೆತಿವೆ. ಜೊತೆಗೆ ಅಂತರ್ ಜಲ ನೀರಾವರಿ ಕಟ್ಟಡದ ರಚನೆಯು ದೊರಕಿರುವುದರಿಂದ ಅಂದಿನ ಕಾಲದ ನೀರಾವರಿ ಪದ್ಧತಿಯನ್ನು ಕುರಿತ ಮಾಹಿತಿಯನ್ನು ಒದಗಿಸುತ್ತದೆ.[೧೩೭]

ಎರಡನೇ ಹಂತದ ನಗರೀಕರಣದಲ್ಲಿ ಹೆಚ್ಚಾಗಿ ಸಂಪೂರ್ಣವಾದ ಅವಶೇಷಗಳು ಉತ್ತರ ಭಾರತದಲ್ಲಿ ಕಂಡುಬಂದಿವೆ. ಅಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಉತ್ಖನನವಾಗಿರುವುದರಿಂದ ಇವು ಬೆಳಕಿಗೆ ಬಂದಿವೆ. ದಕ್ಷಿಣ ಭಾರತದಲ್ಲಿ ಕೆಲವೊಂದು ನೆಲೆಗಳು ಮಾತ್ರವೇ ಉತ್ಖನನಗೊಂಡಿರುವುದರಿಂದ ಪೂರ್ಣ ಪ್ರಮಾಣದ ಮಾಹಿತಿಯು ದೊರಕುವುದಿಲ್ಲ. ಎರಡು ನೆಲೆಗಳಲ್ಲಿ ಮಾತ್ರ ಉತ್ಖನನವಾಗಿರುವುದರಿಂದ ಅವುಗಳ ಮೂಲಕವೇ ವಸತಿನೆಲೆ ಮತ್ತು ನಗರೀಕರಣವನ್ನು ರಚಿಸಲು ಸಾಧ್ಯವಾಗಿದೆ.

ವಸತಿ ನೆಲೆ ಎಂಬುದು ವಸತಿ ಮತ್ತು ನೆಲೆ ಎಂಬ ಎರಡು ಪದಗಳನ್ನು ಜೋಡಿಸಿ ಬಳಸಲಾಗುತ್ತದೆ. ವಸತಿ ಎಂಬ ಪದಕ್ಕೆ ಕನ್ನಡ ನಿಘಂಟುವಿನಲ್ಲಿ ಈ ರೀತಿಯಾದ ವಿವರಣೆಯಿದೆ.

> <u>ವಸತಿ</u> (ನಾ) ೧. ವಾಸಮಾಡುವಿಕೆ, ನೆಲಸುವಿಕೆ, ವಾಸ್ತವ್ಯ: ಅಶನಕೆ ನಡೆಯಿತು ವಾರಾನ್ನದೇರ್ಪಾಡು ವಸತಿಗೆ ಗೆಳೆರ ಬೀಡು.
>
> ೧. ವಾಸಮಾಡುವ ಸ್ಥಳ, ಮನೆ, ನಿವಾಸ, ಚೈತನ್ಯ ನಿದ್ರಿಸಿರುವೆಡೆಯೆಲ್ಲ ಜಡಲೋಕ ಕಲ್ಲು ಕಡ್ಡಿ ಕಸ ಅಡಿಗಿರ್ಪ ಚೈತನ್ಯವೆಚ್ಚರಲು ಜಂತು ಜಗ ಜಡವೆ ಜೀವದ ವಸತಿ.

೨. ಪ್ರವಾಸದ ಮಧ್ಯೆ ತಂಗುವಿಕೆ, ಇಳಿದುಕೊಳ್ಳುವಿಕೆ: ಈ ಹೊತ್ತು ಪ್ರಯಾಗಕ್ಷೇತ್ರದಲ್ಲಿ ಭಾಗೀರಥಿತಟಾಕದ ಮೇಲೆ ವಸತಿ ಮಾಡುತ್ತಾರೆ.

೩. ಪ್ರವಾಸಿಗರು ಇಳಿದುಕೊಳ್ಳಲು ತಕ್ಕುದಾಗಿರುವ ಸ್ಥಳಾವಕಾಶ, ಸ್ಥಳಾನುಕೂಲ: ಆ ಚಾವಡಿಯಲ್ಲಿ ತಂಗಲು ವಸತಿ ಇದೆಯೋ ಎಂದು ಅಲ್ಲಿದ್ದವರನ್ನು ವಿಚಾರಿಸಿದೆವು.

೪. ಅನುಕೂಲ, ಸೌಕರ್ಯ, ಚಿಕ್ಕದೇವರಾಜ ಒಡೆಯರವರು ೧೨ ಸಾವಿರ ಮಗ್ಗದ ಜನಗಳನ್ನೂ ತಂದಿರಿಸಿ ಇಲ್ಲಿ ಆದ ಜವಳಿ ಎಲ್ಲ ಸೀಮೆಗಳಿಗೂ ಹೋಗುವಂತೆಯೂ ಶ್ರೀರಂಗಪಟ್ಟಣದ ಅರಮನೆಗೂ ಬರುವಂತೆಯೂ ನಿಬಂಧನೆ ಮಾಡಿ ಪೇಟೆಯನ್ನು ವಸತಿಮಾಡಿಸಿದರು.

೫. ರಾತ್ರಿ, ಇರುಳು: ತಮಿ, ತಮಿಸ್ರಾ  ವಸತಿ, ವಾಸತೇಯಾ, ಶ್ಯಾಮಾ, ರಾತ್ರಿ: ಈ ೧೯ ಇರುಳಿನ ಪೆಸರ್.

೬. ವಸತಿಹೋಗು= ನೆಲಸಲು ಹೋಗು, ಬಿಡಾರಮಾಡು: ಆ ಸಂಸಾರ ಬಯಲಿನ ಒಂದು ಕಡೆಯಿಂದ ಮತ್ತೊಂದು ಕಾಡಿಗೆ ವಸತಿಹೋಗುತ್ತಿದ್ದರು.[೧೩೮]

ಅದೇ ರೀತಿ ನೆಲೆ ಎಂಬುದಕ್ಕೆ ಇದೇ ನಿಂಘಟು ಈ ರೀತಿ ವಿವರಣೆಯನ್ನು ನೀಡಿದೆ.

<u>ನೆಲೆ (ನಾ)</u> ನಿಲೆ, ೧. ಆಶ್ರಯ, ಆಧಾರ, ಇಕ್ಕೆ, ಇಂಬು, ಗೊತ್ತು, ನೆಲ, ಆಗರಂ–ಈ ಆಶ್ರಯಕ್ಕೆ ಪೆಸರ್. ಸುಖಕ್ಕೆ ನೆಲೆಯೆನಿಸಿರ್ಪಂ, ನೆಲೆಯೌವನಲಕ್ಷ್ಮೀಗೆ ನೆಲೆ ಚಿತ್ತಭವಂಗೆ ನೃಪನ ಕಣ್ಗಂನಮನಕ್ಕಂ ನೆಲೆ ತಾರ ಹಾರಶೋಭೆಗೆ ನೆಲೆಯೆನೆ ನೆಲೆಮೊಲೆಗಳೆನಿಕುಮಬಲೆಯ ಮೊಲೆಗಳ್, ಪರಮಸುಖಕ್ಕೆ ತಾನೆ ನೆಲೆಯಂ ಬಿಡದಾತ್ಮವಿಭೂತಿ ಸೂಚಿಸುತ್ತಿರೆ, ತಳಿರ ತಾಣಂ ಕುಸುಮಕುಲದ ನೆಲೆ..ನವಲು ನಂದನವೆನಿಪ್ಪ ಕೇಖೀವನಕ್ಕೆಯ್ತಂದನು, ಆಲದ ನೆಲೆಯೊಳಿದ್ದೆನ್ನಿರವಳಿದು ಸುಫಲವೆನಿಸಿತಲ್ಲಾ ಪ್ರಳಾಪಿಸದೆಂತು ಸೈರುಸುವೆ ವಲದದ ನೆಲ ಶುಭದಿಕ್ಕೆ ಸೊಗಸಿನ ಸದನ.. ಮನೋರಥದುದಯಗಿರಿ ಹಿದೀಸುದಿನವಮರಾವತೀ ನಗರ.

೨. ವಾಸಸ್ಥಳ, ನಿವಾಸ, ಆವಾಸ, ಕುಸುಮದಳಸುಕುಮಾರರ್ ತಳರ್ದು ನೆಲೆಯಿಂದಮಾಗಳ್ ಕೊಳದಿಂ ಪೊರಮಟ್ಟು ಹಂಸಗಳ್ಗೆಣೆಯಾದರ್ ಶ್ರೀರಮಣಿಗೆ ನೆಲೆ ತನ್ನಯ ಪೇರುರಮಂ ಮಾರ್ಪನೆಂಬ ಬಗೆ ಮಿಗೆ ಸಮರ ಪ್ರಾರಂಭದೆ ಪೂಣ್ದಿರ್ದಂ ಕೌರವಕುಲವಿಲಯಕೇತು ಸಾಹಸಭೀಮಂ ನೆಲೆಗೆ ಪೋಗಿ ಮಕ್ಕಳೊಳಂ ಪಂಡಿರೊಳಮೊಡಗೂಡಿ ಸುಖದಂ ಚರಯಿಸುವೆಂ ನೆಲೆಯೊಳ್ ಸೇರಲು ಪೋರುಗ್ಯೆದು ಸತಿ ತಾಂಪೋಗಟ್ಟುವಳ್ .ತೊಲಗಿರಲ್ ಲಕ್ಷ್ಮೀ ಕಟಾಕ್ಷೇಕ್ಷಣಂ.[೧೩೯]

## ೨.೨ ವಸತಿ ನೆಲೆಗಳ ಲಕ್ಷಣಗಳು

ಜನರು ಮನೆಗಳಲ್ಲಿ ವಾಸಮಾಡುವುದನ್ನು ವಸತಿ, ವಸತಿಗೃಹ, ವಸತಿ ಮನೆ, ಇತ್ಯಾದಿಯಾಗಿ ಗುರುತಿಸಲಾಗುತ್ತದೆ. ಜನರು ವಾಸಮಾಡುವ ವಸತಿ ನೆಲೆಗಳನ್ನು ಗುರುತಿಸಲು ಕೆಲವು ಲಕ್ಷಣಗಳಿವೆ. ವಸತಿ ನೆಲೆಯಲ್ಲಿ ಜನರು ಆಹಾರಕ್ಕೆ ಉಪಯೋಗಿಸದ ವಸ್ತುಗಳು ಮತ್ತು ರಕ್ಷಣೆಗಾಗಿ ತಯಾರಿಸಿದ ಉಪಕರಣಗಳು ದೊರೆಯುತ್ತವೆ. ವಸತಿನೆಲೆಗೆ ಪೂರಕವಾಗುವ ಮಡಿಕೆಚೂರುಗಳು, ಸುಟ್ಟ ಮಣ್ಣು, ಬೂದಿ ಇನ್ನೂ ಮುಂತಾದ ಅವಶೇಷಗಳು ಆಯಾ ಕಾಘಟ್ಟಕ್ಕೆ ಸಂಬಂಧಿಸಿದ ಕುರುಹುಗಳು ನೆಲೆಗಳಲ್ಲಿ ದೊರೆಯುತ್ತವೆ.

ಕಾಶ್ಮೀರದ ಗುಫ್‌ಕ್ರಾಲ್‌ನಲ್ಲಿ ನವಶಿಲಾಯುಗದ ಕಾಲಘಟ್ಟದಲ್ಲಿ ದೊರೆತ ಮನೆಯ ಭಾಗದಲ್ಲಿ ಕೆಳಗೆ ವಸತಿಗಳನ್ನು ಮಾಡಿಕೊಂಡಿದ್ದರು ಅಲ್ಲಿ ಚೌಕಾಕಾರ ಮತ್ತು ವೃತ್ತಾಕಾರದ ಒಲೆಯನ್ನು ಹಸಿ ಮಣ್ಣಿನಿಂದ ರಚನೆ ಮಾಡಲಾಗಿದೆ.[೧೪೦] ಝೀಲಂ ನದಿ ದಂಡೆಯ ಮೇಲೆ ಬೂರ್ಜಹೋಮ್‌ನಲ್ಲಿ ಮನೆಯಲ್ಲಿ ಇದ್ದಿಲು, ಬೂದಿ, ೧ ರಿಂದ ೧.೫ ಮೀ ಉದ್ದ, ೩೦ ರಿಂದ ೪ ಸೆಂ.ಮೀ. ಬುಗುರಿಯಾಕಾರದ ಕಲ್ಲಿದೆ.[೧೪೧] ಬೂದು ಮತ್ತು ಕಪ್ಪು ಮಿಶ್ರಿತ ಕೆಂಪು ಬಣ್ಣದ ಮಡಿಕೆಗಳು ದೊರಕಿವೆ.[೧೪೨] ಕೊಲ್ಡಿವಾ-ಮಹಾಗರ್ ಬೇಲನ್ ನೆಲೆಯಲ್ಲಿ ಗುಡಿಸಿಲಿನ ಕುರುಹುಗಳ ಜೊತೆಗೆ ಸುಟ್ಟ ಮಣ್ಣು, ಮಡಿಕೆ ಚೂರುಗಳು, ಬೀಸುವಕಲ್ಲು, ಅರೆಯುವಕಲ್ಲು, ಕವಣೆ ಹಾಗೂ ಕಲ್ಲಿನ ಆಯುಧಗಳು ದೊರೆತಿವೆ. ಈ ಪ್ರದೇಶದಲ್ಲಿ ೪೦-೬೦ ಹಸುಗಳು ಇದ್ದವೆಂಬುದಕ್ಕೆ ಅವುಗಳ ಗೊರಸಿನ ಕುರುಹುಗಳು ದೊರಕಿವೆ. ಮಡಿಕೆಯಲ್ಲಿ ಭತ್ತದ ಹೊಟ್ಟು ದೊರಕಿವೆ.[೧೪೩] ಉತ್ತರಪ್ರದೇಶದ ಮೆಹರ್‌ಘರ್‌ನಲ್ಲಿ ಗುಡಿಸಿಲಿನ ಕುಳಿಗಳ ಜೊತೆಗೆ ಹಸುವಿನ ದೊಡ್ಡಿಯ [illegible]ಗಳಿವೆ. ಅಲ್ಲಿ ಹಸುವಿನ ಗೊರಸುಗಳ ಕುರುಹುಗಳಿವೆ. ವಿವಿಧ ರೀತಿಯ ಮಡಿಕೆಗಳು ಮತ್ತು ಭತ್ತದ ಹೊಟ್ಟಿದೆ ಸಹ ದೊರಕಿದೆ.[೧೪೪]

ಆಂಧ್ರಪ್ರದೇಶದ ನಾಗಾರ್ಜುನಕೊಂಡದಲ್ಲಿ ಗುಡಿಸಿಲಿನ ಕುಳಿಗಳು, ಕೈಯಿಂದ ಮತ್ತು ಚಕ್ರದಿಂದ ಮಾಡಿದ ವಿವಿಧ ರೀತಿಯ ಮಡಿಕೆಗಳು[೧೪೫] ಒಲೆಗಳ ಸುಟ್ಟಮಣ್ಣು ಮತ್ತು ಹಲವಾರು ರೀತಿಯ ಆಟಿಕೆ ವಸ್ತುಗಳು ಶೋಧವಾಗಿದೆ.[೧೪೬] ಮಧುರಾವಾಡ ಪರದೆಸಿಪಾಲೆಂ ಮುಂತಾದ ಪ್ರದೇಶದಲ್ಲಿ ವೃತ್ತಾಕಾರ ಹಾಗೂ ಚೌಕಾಕಾರದ ಮನೆಗಳ ನೆಲವನ್ನು ಕಲ್ಲುಗಳಿಂದ ಗಟ್ಟಿಗೊಳಿಸಲಾಗಿದೆ. ಬೀಸುವಕಲ್ಲು, ರುಬ್ಬುವ ಕಲ್ಲು, ಮಡಿಕೆಗಳು, ಕಿತ್ತಳೆಯಾಕಾರದ ಮಡಿಕೆಗಳು ಚಿತ್ರಿತ ಮಡಿಕೆಗಳು ವಿವಿಧ ರೀತಿ ಅರೆಪ್ರಶಸ್ತ ಮಣಿಗಳು ಮನೆ ಬಳಕೆಯ ವಸ್ತುಗಳು

ಮುಂತಾದವು ದೊರೆತಿವೆ.[೧೪೭] ತಮಿಳುನಾಡಿನ ಪಯ್ಯಂಪಲ್ಲಿಯಲ್ಲಿ ಮನೆಗಳ ಕುಳಿಗಳು ಮತ್ತು ರಾಗಿ, ಜೋಳ, ಹುರುಳಿ ಕಾಳು, ಚಳಿಗಾಲದಲ್ಲಿ ಬೆಳೆಯುವ ಬೆಳೆಗಳು ದೊರೆತಿವೆ.[೧೪೮]

ಕರ್ನಾಟಕದ ಮೈಸೂರು ಜಿಲ್ಲೆಯ ಹೆಮ್ಮಿಗೆಯಲ್ಲಿ ನಡೆದ ಉತ್ಖನನದಲ್ಲಿ ಮನೆಯ ಕುಳಿಗಳು ದೊರೆತಿವೆ. ಅದರ ಜೊತೆಗೆ ಮನೆ ಬಳಕೆಯ ವಿವಿಧ ರೀತಿಯ ಮಡಿಕೆಗಳು ಕೈಯಿಂದ ಮಾಡಿದ, ಕಡಿಮೆ ಶಾಖದಲ್ಲಿ ಸುಟ್ಟ ಕೆಂಪು ಹಾಗೂ ಬೂದು ಮತ್ತು ಚಿತ್ರಿತ ಮಡಿಕೆಗಳು ದೊರಕಿವೆ.[೧೪೯] ಟೀ. ನರಸೀಪುರದಲ್ಲಿ ಗೀರುಚಿತ್ರಗಳಿರುವ ಕೆಂಪು ಮತ್ತ ಬೂದು ಬಣ್ಣದ ಮಡಿಕೆಗಳು ಮತ್ತು ವ್ಯವಸಾಯಕ್ಕೆ ಉಪಯೋಗಿಸುವ ಕಲ್ಲಿನ ವಸ್ತುಗಳು ಹಾಗೂ ಬಂಗಾರ ಉತ್ಪಾದಿಸುವ ಪರಿಕರಗಳು ಶೋಧಗೊಂಡಿವೆ.[೧೫೦] ದೊಡ್ಡಕಬಟೂರುನಲ್ಲಿ ಮನೆಯ ಕುಳಿಗಳು, ಸುಟ್ಟ ಅಕ್ಕಿ ಹೊಟ್ಟು ಮತ್ತು ತಿಳಿ ಬೂದು ಬಣ್ಣದ ಮಡಿಕೆಗಳು ಪತ್ತೆಯಾಗಿವೆ. ತಂಬರಹಳ್ಳಿಯಲ್ಲಿ ಕಡಿಮೆ ವೇಗದಲ್ಲಿ ತಿರುಗಿಸಿದ ಮಡಿಕೆಗಳ ಚೂರು ಮತ್ತು ಬೂದಿದಿಬ್ಬ ಕಂಡುಬಂದಿದೆ. ಬನಹಳ್ಳಿಯಲ್ಲಿ[೧೫೧] ಬೂದಿದಿಬ್ಬ ಹಾಗೂ ಸುಟ್ಟ ಮಣ್ಣಿನ ಮಡಿಕೆಗಳು ಮತ್ತು ಸಂಗನಕಲ್ಲಿನಲ್ಲಿ ಮನೆಯ ಕುಳಿಗಳು ರುಬ್ಬುವ, ಕುಟ್ಟುವ, ಬಿಸುವ ಕಲ್ಲುಗಳು ದೊರೆತಿವೆ. ಬೂದು, ಕೆಂಪು ಬಣ್ಣ ದೊಡ್ಡ ಮಡಿಕೆಗಳು ದೊರೆತಿದೆ.[೧೫೨] ತೆಕ್ಕಲಕೋಟೆಯಲ್ಲಿ ವೃತ್ತಾಕಾರ ಮತ್ತು ಚೌಕಾರದ ಮನೆಗಳ ಅವಶೇಷಗಳಿವೆ. ಇಲ್ಲಿ ಹುರುಳಿಕಾಳುಗಳು ಹಾಗೂ ಮಡಿಕೆಗಳ ತಯಾರಿಕಾ ಕೇಂದ್ರ ದೊರೆತಿದೆ. ಅಲ್ಲಿ ವಿವಿಧ ರೀತಿಯ ಮನೆ ಬಳಕೆಯ ಮಡಿಕೆಗಳು ಹಾಗೂ ಶವ ಪೆಟ್ಟಿಗೆಯ ಮಡಿಕೆಗಳು ತಾಮ್ರದಲ್ಲಿ ತಯಾರಿಸಿದ ಮೀನಿನ ಗಾಳದ ಮೊಳೆ, ತಂತಿ, ಕಿವಿಯ ಓಲೆ ಪದಕ, ಮಣಿಗಳು, ಅರೆಪ್ರಶಸ್ತ ಕಲ್ಲುಗಳು ದೊರೆತಿವೆ.[೧೫೩]

ಶಿಲಾ ತಾಮ್ರಯುಗದಲ್ಲಿ ವಸತಿನೆಲೆಗಳ ಬೆಳವಣಿಗೆಯ ಮುಂದುವರಿದ ಹಂತದಲ್ಲಿ ಜನರು ಕೊಠಡಿಗಳಿರುವ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ಮನೆ ಎಂದರೆ ಅದಕ್ಕೆ ಬೇಕಾಗುವ ಎಲ್ಲಾ ಸೌಕರ್ಯವನ್ನು ಮಾಡಿಕೊಂಡಿದ್ದರು. ಉದಾಹರಣೆಗೆ ಮನೆಯ ದಿನ ಬಳಕೆಯ ವಸ್ತುಗಳಾದ ಮಡಿಕೆಗಳು, ನೀರಿನ ಸೌಕರ್ಯಕ್ಕಾಗಿ ಬಾವಿಯ ನಿರ್ಮಾಣ ಮನೆಯ ಕೊಳಚೆ ನೀರು ಹೊರಗೆ ಹರಿದು ಹೋಗಲು ಚರಂಡಿಯ ವ್ಯವಸ್ಥೆಯನ್ನು ಮಾಡಿಕೊಂಡಿರುವವುದು ಗಮನಾರ್ಹ. ಕಾಲಿಬಂಗಾನ್ ನೆಲೆಯಲ್ಲಿ ಮಣ್ಣಿನ ಇಟ್ಟಿಗೆಯಿಂದ ಕಟ್ಟಿದ ಕೋಟೆಗೋಡೆಯಿದೆ. ಈ ಕೋಟೆಯ ಒಳಭಾಗದಲ್ಲಿ ಮನೆಗಳ ಅವಶೇಷಗಳಿವೆ. ಮನೆಯ ಒಂದು ಭಾಗದಲ್ಲಿ ವೃತ್ತಾಕಾರದ ಒಲೆಗಳು ಮನೆಯ ಚರಂಡಿ ನೀರು ಹೊರಗೆ ಹರಿಯಲು ಇಟ್ಟಿಗೆ ಮತ್ತು ಕಟ್ಟಿಗೆಯಿಂದ ಚರಂಡಿಯನ್ನು ರಚಿಸಿ ನೀರು ಇಂಗು ಗುಂಡಿಯನ್ನು ಸೇರುವ ವ್ಯವಸ್ಥೆ ಮಾಡಿದ್ದರು. ನಗರದಲ್ಲಿ ಉತ್ತರ-ದಕ್ಷಿಣ ಮತ್ತು ಪೂರ್ವ-ಪಶ್ಚಿಮವಾಗಿ ೭.೨೫ ಹಾಗೂ ೩.೨೫

ಅಗಲವಾದ ರಸ್ತೆಗಳನ್ನು ನಿರ್ಮಿಸಿರುವ ವಿವಿಧ ಚಿತ್ರಿತ ಮಡಿಕೆಗಳು ಹಾಗೂ ಬಳೆಗಳು, ತಾಮ್ರದ ಮಣಿಗಳು ಇತ್ಯಾದಿ ವಸ್ತುಗಳು ದೊರೆತಿವೆ.[೧೫೪]

ಕಚ್ ಜಿಲ್ಲೆಯ ಸುರ್‌ಕೋಟಡದಲ್ಲಿ ಕಲ್ಲಿನ ಕೋಟೆಗೋಡೆಯನ್ನು ನಗರದ ಸುತ್ತಲೂ ಕಟ್ಟಲಾಗಿದೆ. ಅದರ ಒಳಭಾಗದಲ್ಲಿ ವ್ಯವಸ್ಥಿತವಾಗಿ ನಿರ್ಮಿಸಿದ ಮನೆಯ ಕಟ್ಟಡಗಳಿವೆ. ಈ ಮನೆಗಳನ್ನು ಸುಟ್ಟು ಇಟ್ಟಿಗೆ ಹಾಗೂ ಮಣ್ಣಿನ ಇಟ್ಟಿಗೆಯಿಂದ ನಿರ್ಮಿಸಲಾಗಿದೆ. ಒಂದೇ ಅಳತೆಯ ಸುಟ್ಟ ಇಟ್ಟಿಗೆಯನ್ನು ಮನೆಯ ಗೋಡೆ ಸ್ನಾನದ ಕೊಠಡಿ ಮತ್ತು ಚರಂಡಿ ನಾಲೆಗೆ ಉಪಯೋಗಿಸುತ್ತಿದ್ದರು ಹಾಗೂ ಅದಕ್ಕೆ ಹೊಂದಿಕೊಂಡಂತೆ ಇಂಗು ಗುಂಡಿಗಳನ್ನು ಸಹ ನಿರ್ಮಿಸಿರುವುದು ಕಂಡುಬಂದಿದೆ. ಮನೆಯ ಭತ್ತಿಗೆ ಕಟ್ಟಿಗೆಯ ತೊಲೆಗಳನ್ನು ಹಾಕುತ್ತಿದ್ದರು. ಇಲ್ಲಿ ಒಂದು ಮತ್ತು ಎರಡು ಕೊಠಡಿಗಳು ಅಥವಾ ಅದಕ್ಕೆ ಹೆಚ್ಚಿನ ಸಂಖ್ಯೆ ಕೊಠಡಿಗಳುಳ್ಳ ಮನೆಗಳು ಇಲ್ಲಿ ದೊರಕಿವೆ. ಎಲ್ಲಾ ಮನೆಗಳಲ್ಲಿ ಸಾಮಾನ್ಯವಾಗಿ ಒಲೆ ಮತ್ತು ಸ್ನಾನದ ಕೊಠಡಿಯಿದೆ. ರಸ್ತೆಯ ಬಲಭಾಗದಲ್ಲಿ ಮಾತ್ರವೇ ಮನೆಗಳನ್ನು ನಿರ್ಮಿಸಿರುವುದು ಗಮನಾರ್ಹ.[೧೫೫]

ರಾಜಸ್ಥಾನದ ಆಗ್ನೇಯಕ್ಕಿರುವ ಬಾಣಾ ನದಿ ದಂಡೆಯ ಮೇಲೆ ಬಾಣಾ ಸಂಸ್ಕೃತಿಯು ವಿಕಾಸ ಹೊಂದಿತು. ಉದಯಪುರದ ಆಹಾರ್‌ನಲ್ಲಿ ಮನೆಗಳ ಕುರುಹುಗಳು, ತಾಮ್ರದ ಕಿಟ್ಟ ಹಾಗೂ ಇತರೆ ಅವಶೇಷಗಳು ದೊರೆತಿವೆ. ಅಹಾರ್‌ನ ತಂಬವತಿ (Tambavati) ಪ್ರದೇಶವನ್ನು ತಾಮ್ರದ ನಗರ ಎಂದು ಕರೆಯಲಾಗುತ್ತದೆ. ಇಲ್ಲಿ ಜೋರ್ವೆ ಸಂಸ್ಕೃತಿಯ ಮಡಿಕೆಗಳು ದೊರಕಿದ್ದು ಅವುಗಳ ಕೆಲವಲ್ಲಿ ಹೆಚ್ಚು ಅಕ್ಕಿಯು ದೊರೆತಿದೆ. ೭ X ೫ ಮೀಡರ್ ಮತ್ತು ೩ X ೩ ಮೀಟರ್ ಅಳತೆಯ ಕಟ್ಟಿಗೆಯನ್ನು ಇಲ್ಲಿನ ಒಂದು ಮನೆಯ ಭಾಗದಲ್ಲಿ ಹಾಕಲಾಗಿದೆ. ಮಣ್ಣಿನ ಇಟ್ಟಿಗೆ ಗೋಡೆಯಿಂದ ಉದ್ದವಾದ ಮನೆಯನ್ನು ಕಟ್ಟಲಾಗಿದೆ. ಈ ಗೋಡೆಗಳನ್ನು ಬೆಣಚು ಕಲ್ಲುಗಳಿಂದ ಶೃಂಗರಿಸಲಾಗಿದೆ. ಮನೆಯ ನೆಲವನ್ನು ಸುಟ್ಟ ಮಣ್ಣು ಅಥವಾ ನದಿಯ ಮಣ್ಣಿನಿಂದ ಗಟ್ಟಿಗೊಳಿಸಿದೆ. ಮನೆಗಳಲ್ಲಿ ಒಲೆಗಳು, ಮತ್ತು ಬೆಣಚು ಕಲ್ಲಿನ ಬೀಸುವ ಕಲ್ಲು ಮತ್ತು ವಿವಿಧ ರೀತಿಯ ಮಡಿಕೆಗಳು ದೊರಕಿವೆ.[೧೫೬] ಕಾಲಿಸಿಂಧ ನದಿ ದಂಡೆಯ ಚಂಬಲ್ ಪ್ರದೇಶದಲ್ಲಿ ಬೆಳೆದ ಸಂಸ್ಕೃತಿಗೆ "ಕಾಯತಾ" ಎಂದು ಹೆಸರಿಸಲಾಗಿದೆ. ಇಲ್ಲಿ ಮೂರು ವಿದಧ ಮಡಿಕೆಗಳು ದೊರಕಿವೆ. ಹೆಚ್ಚು ಕೆಂಪು ಬಣ್ಣ ಆಕಾರವಿರುವ ಗೆರೆಗಳ ಚಿತ್ರ ಮತ್ತು ಕಂಠ ಭಾಗದಲ್ಲಿ ಮಾತ್ರ ಬಣ್ಣವಿರುವ ಬಟ್ಟಲಗಳು, ದೊಡ್ಡ ಬುಟ್ಟಿಯಾಕಾರದ, ಜಾರ್‌ಗಳು ತಾಮ್ರದ ಪಾತ್ರೆಗಳು ಬಳೆಗಳು, ಬಾಣ, ಮುಂತಾದ ವಸ್ತುಗಳು ಇಲ್ಲಿ ದೊರಕಿವೆ.[೧೫೭]

ಮಹಾರಾಷ್ಟ್ರದ ಇನಾಮ್‌ಗಾವ್‌ನಲ್ಲಿ ಮಾಳ್ವಾ ಮತ್ತು ಜೋರ್ವೆ ಸಂಸ್ಕೃತಿಯು ಬೆಳೆಯಿತು. ಮಣ್ಣಿನಿಂದ ಮೆತ್ತಿದ ಗುಡಿಸಿಲಗಳಲ್ಲಿ ೩ ಸೆಂ.ಮೀ. ಅಗಲ, ೫೦ ಸೆಂ.ಮೀ. ಆಳವಾದ ಕುಳಿಗಳಿವೆ. ಅಲ್ಲಿ ಆಹಾರ ಧಾನ್ಯಗಳನ್ನು ಸಂಗ್ರಹಿಸುವ ಮಣ್ಣಿನ ವೃತ್ತಾಕಾರದ ತಗ್ಗುಗಳು (ಕಣಜ) ಇಲ್ಲಿವೆ.[೧೫೮] ಕಬ್ಬಿಣ ಯುಗಕ್ಕೆ ಸೇರಿದ ನಾಯ್‌ಕುಂಡ್‌ನಲ್ಲಿ ಕುಳಿಗಳು ಇರುವ ಗುಡಿಸಲುಗಳು, ಮಡಿಕೆಗಳು, ತಟ್ಟೆ, ಬಟ್ಟಲು ಮತ್ತು ಬಂಗಾರದ ಆಭರಣಗಳು ದೊರೆತಿವೆ.[೧೫೯] ಪಯ್ಯಂಪಲ್ಲಿಯಲ್ಲಿ ಕಂಬಕುಳಿಗಳಿರುವ ಮನೆಗಳು ಧಾನ್ಯ ಸಂಗ್ರಹಣೆಯ ಮಡಿಕೆಗಳು, ಹಾಗೂ ಬೇಳೆಕಾಳು, ರಾಗಿ ದೊರೆತಿದೆ.[೧೬೦]

## ೨.೩. ವಸತಿ ನೆಲೆಗಳ ರಚನಾ ವಿನ್ಯಾಸ

ನವಶಿಲಾಯುಗದಿಂದ ವಸತಿನೆಲೆಯ ರಚನಾ ವಿನ್ಯಾಸದ ಹಂತಗಳನ್ನು ಗುರುತಿಸಬಹುದು. ಈ ಕಾಲದ ನೆಲೆಗಳಲ್ಲಿ ಕೆಲವೊಂದು ಭಾಗಳನ್ನು ಮಣ್ಣಿನಿಂದ ಮೆತ್ತಿರುವ ಮನೆಗಳು, ಬಂಬೂಗಳನ್ನು ಉಪಯೋಗಿಸಿದ ಹಾಗೂ ಮಣ್ಣಿನ ಇಟ್ಟಿಗೆಗಳನ್ನು ಉಪಯೋಗಿಸಿ ನಿರ್ಮಿಸಿದ ಮನೆಗಳಿದ್ದು ಅವುಗಳು ತನ್ನದೇ ಆದ ವಿನ್ಯಾಸವನ್ನು ಹೊಂದಿವೆ.

ಕಾಶ್ಮೀರದ ಗುಫ್‌ಕ್ರಾಲ್‌ನಲ್ಲಿ ವೃತ್ತಾಕಾರ ಮತ್ತು ಚೌಕಾಕಾರದ ಮನೆಗಳಿವೆ. ಯಾವಾಗಲೂ ಮನೆಯ ಹೊರಭಾಗದಲ್ಲಿ ವೃತ್ತಾಕಾರದ, ಚೌಕಾಕಾರದ ಒಲೆಯಿರುತ್ತದೆ. ಇದನ್ನು ಹಸಿ ಮಣ್ಣಿನಿಂದ ರಚನೆ ಮಾಡಲಾಗಿದ್ದು ೯೩ ಸೆಂ.ಮೀ. ಅಗಲ, ೩೦ ಸೆಂ.ಮೀ. ಆಳವನ್ನು ಹೊಂದಿದೆ.[೧೬೧] ನಾಗಾರ್ಜುನಕೊಂಡದಲ್ಲಿ ವೃತ್ತಾಕಾರದ ಗುಡಿಸಲನ್ನು ೩.೬ ದಿಂದ ೬ ಅಡಿವರೆಗಿನ ಕುಳಿಗಳು ಮತ್ತು ಒಲೆಯ ಸುಟ್ಟ ಮಣ್ಣು ಇದೆ.[೧೬೨] ಪರದೇಸಿಪಾಲೆಂ, ಪ್ರದೇಶದಲ್ಲಿ ವೃತ್ತಾಕಾರದ ಮನೆಗಳನ್ನು ಮೂರು ಮೀಟರ್ ಮತ್ತು ಐದು ಮೀಟರ್ ಅಗಲವಾಗಿದ್ದವು.[೧೬೩] ಕೋಲಾರದ ಮಾಲೂರು ಗ್ರಾಮದಲ್ಲಿ ಮಣ್ಣಿನಿಂದ ಮೆತ್ತಿ ಗಟ್ಟಿಗೊಳಿಸಿದ ಮನೆ ಗೋಡೆಯ ಕುರುಹುಗಳು ದೊರೆತಿವೆ.[೧೬೪] ಅಲಹಬಾದ್ ಚೊಪಾಣಿ ಮಾಂಡುವಿನಲ್ಲಿ ದಿಬ್ಬದಲ್ಲಿ ದೊರೆತ ಗುಡಿಸಲಿನ ಗೋಡೆಯನ್ನು ಮಣ್ಣಿನಿಂದ ಮೆತ್ತಿ ಮೇಲೆ ಬಂಬೂಗಳನ್ನು ಜೋಡಿಸಿ ಹುಲ್ಲಿನ ಹೊದಿಕೆ ಹಾಕಲಾಗಿದೆ. ಗಫ್ಫರ್ ಮತ್ತು ಗಂಗಾನದಿಯ ದಂಡೆಯ ಮೇಲೆ ಬಂಬೂಗಳನ್ನು ಬಳಸಿ ವೃತ್ತಾಕಾರದ ಮತ್ತು ಚೌಕಾಕಾರದ ಗುಡಿಸಲನ್ನು ಕಟ್ಟಲಾಗಿದೆ. ಮತ್ತೊಂದು ಭಾಗದಲ್ಲಿ ಮಣ್ಣಿನಿಂದ ಮೆತ್ತಿದ ಗುಡಿಸಲುಗಳ ಕುರುಹುಗಳಿವೆ.[೧೬೫] ಪಯ್ಯಂಪಳ್ಳಿಯಲ್ಲಿ ಮನೆಗಳನ್ನು ಇಳಿಜಾರು ಪ್ರದೇಶದಲ್ಲಿ ಬಂಬೂಗಳಿಂದ ಕಟ್ಟಲಾಗಿದೆ. ಹಾಗೂ ನೆಲವನ್ನು ಮಣ್ಣಿನಿಂದ ಕುಟ್ಟಿ

ಗಟ್ಟಿಗೊಳಿಸಲಾಗಿದೆ, ಛತ್ತನ್ನು ಶಂಕುವಿನ ಅಥವಾ ಕೋನಾಕಾರವಾಗಿ ಕಟ್ಟಲಾಗಿದೆ.[೧೬೬] ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಬೆಟ್ಟದಲ್ಲಿ ಚೌಕಾಕಾರದ ಮತ್ತು ವೃತ್ತಾಕಾರವಾದ ಗುಡಿಸಲುಗಳ ಕುರುಹುಗಳಿವೆ. ಗುಡಿಸಲುಗಳನ್ನು ಬಂಬೂಗಳಿಂದ ನೆಟ್ಟು ಅದರ ಮೇಲೆ ಹಸಿ ಮಣ್ಣಿನಿಂದ ಮೆತ್ತಿ ನಂತರ ಬಿಳಿ ಜೇಡಿ ಮಣ್ಣನ್ನು ಮೆತ್ತುತ್ತಿದ್ದರು. ನೆಲಕ್ಕೆ ಬಿಳಿ ಸುಣ್ಣವನ್ನು ೨೦ ಸೆಂ.ಮೀ. ದಪ್ಪವಾಗಿ ಹಾಕಲಾಗಿದೆ. ಅಲ್ಲದೆ ಕೆಲವೊಮ್ಮೆ ನೆಲವನ್ನು ಚಿಕ್ಕ ಕಲ್ಲು, ಸುಣ್ಣದ ಜೊತೆ ಇದ್ದಿಲುಗಳನ್ನು ಸೇರಿಸಿ ೫ ಸೆಂ.ಮೀ. ದಪ್ಪವಾಗಿ ಮಾಡಲಾಗಿದೆ. ಛತ್ತಿನ ಭಾಗಕ್ಕೆ ಹುಲ್ಲಿನ ಹೊದಿಕೆ ಹಾಕಲಾಗಿದೆ.[೧೬೭] ತೆಕ್ಕಲಕೋಟೆಯಲ್ಲಿ ೫.೫ಮೀ. ಅಗಲವಾದ ವೃತ್ತಕಾರದ, ಚೌಕಾಕಾರದ ಮನೆಯ ಗೋಡೆಗಳನ್ನು ಕಡಿಮೆ ಎತ್ತರದಲ್ಲಿ ಅಥವಾ ಗಿಡ್ಡದಾಗಿ ಕಟ್ಟಿ ಅದರ ಮೇಲೆ ಬಂಬೂಗಳನ್ನು ಜೋಡಿಸಲಾಗಿತ್ತು. ಗೋಡೆಗೆ ಜೇಡಿ ಮಣ್ಣು ಮತ್ತು ಸುಣ್ಣವನ್ನು ಲೇಪನ ಮಾಡಲಾಗಿತ್ತು.[೧೬೮] ಬೂರ್ಜಹೋಮ್‌ದಲ್ಲಿ ಚೌಕವಾದ ಮತ್ತು ವೃತ್ತಾಕಾರದ ಗುಡಿಸಲನ್ನು ಕಟ್ಟಲಾಗಿದೆ. ಮನೆಯ ಗೋಡೆಗಳನ್ನು ಮಣ್ಣಿನಿಂದ ಮೆತ್ತುತ್ತಿದ್ದರು. ಕೆಲವೊಮ್ಮೆ ಮಣ್ಣಿನ ಇಟ್ಟಿಗೆಗಳನ್ನು ಬಳಸಲಾಗಿದೆ. ಚೌಕವಾದ ಮನೆಯ ಛತ್ತಿಗೆ ಕಲ್ಲು ಮತ್ತು ಮಣ್ಣನ್ನು ಬಳಸಲಾಗಿದೆ. ಯಾವಾಗಲು ಮನೆಯ ಹೊರಭಾಗದಲ್ಲಿ ಒಲೆಯಿರುತ್ತದೆ.[೧೬೯] ಉತ್ತರ ಪ್ರದೇಶದ ಮೆಹರ್‌ಘರ್‌ದಲ್ಲಿ ಇಟ್ಟಿಗೆ ಕಟ್ಟಡಗಳಿದ್ದು ಈ ಇಟ್ಟಿಗೆಗಳು ಮಣ್ಣಿನಿಂದ ತಯಾರಿಸಿದ್ದು ಅದರ ಮೇಲೆ ಚಿನ್ಹೆಗಳಿವೆ. ಇಲ್ಲಿನ ಕಟ್ಟಡಗಳಿಗೆ ಇಟ್ಟಿಗೆಗಳನ್ನು ಬಳಸಿ ಆರು ಮತ್ತು ಒಂಬತ್ತು ಕೊಠಡಿಗಳಿರುವ ದೊಡ್ಡ ಮನೆಗಳನ್ನು ಕಟ್ಟಿರುವರು. ಇಲ್ಲಿ ಹಸುಗಳನ್ನು ಕಟ್ಟುವ ದೊಡ್ಡಿಯು ಸಹ ಇದೆ.[೧೭೦] ನವಶಿಲಾಯುಗದಲ್ಲಿ ದೊರೆತ ಕುರುಹುಗಳಲ್ಲಿ ಮೂರು ರೀತಿಯ ಲಕ್ಷಣಗಳನ್ನು ಕಾಣಬಹುದು. ಆದರೆ ವಿನ್ಯಾಸದಲ್ಲಿ ಹೆಚ್ಚು ಕಡಿಮೆ ಒಂದೇ ರೀತಿಯಾಗಿರುವುದನ್ನು ಕಾಣುತ್ತೇವೆ.

ಶಿಲಾ ತಾಮ್ರಯುಗದಲ್ಲಿ ವಸತಿನೆಲೆಗಳಲ್ಲಿ ವಿನ್ಯಾಸದಲ್ಲಿ ಬದಲಾವಣೆ ಮತ್ತು ಬೆಳವಣಿಗೆಗಳನ್ನು ಗುರುತಿಸಬಹುದು. ಕಾಲಿಬಂಗಾನ್ ಪ್ರದೇಶದಲ್ಲಿ ಕೋಟೆ ಗೋಡೆಯನ್ನು ಮಣ್ಣಿನ ಇಟ್ಟಿಗೆಯಿಂದ ದಪ್ಪವಾದ ಕಟ್ಟಿದ ಕೋಟೆಯನ್ನು ಕಟ್ಟಲಾಗಿದೆ. ವೀಕ್ಷಣಾ ಗೋಪುರವನ್ನು ಚೌಕವಾಗಿ ಕಟ್ಟಲಾಗಿದೆ. ಈ ಕೋಟೆಗೆ ಮುಖ್ಯ ದ್ವಾರವು ಉತ್ತರಕ್ಕೆ ಮತ್ತೊಂದು ದಕ್ಷಿಣಕ್ಕೆ ಇರುತ್ತದೆ. ಇಲ್ಲಿ ರಸ್ತೆಗಳು ಮುಖ್ಯವಾಗಿ ಪೂರ್ವ-ಪಶ್ಚಿಮವಾಗಿದ್ದು ನಂತರ ಈ ಎರಡು ದಿಕ್ಕುಗಳಿಂದ ಕವಲೊಡೆದು ಇಡೀ ಪಟ್ಟಣವನ್ನು ಸುತ್ತುವರೆದಿದೆ. ಸಾಬರಮತಿ ನದಿ ದಂಡೆಯ ಮೇಲೆ ಕಂಡುಬಂದ ಲೋಥಾಲ್ ನಗರವನ್ನು ನದಿಯ ಪ್ರವಾಹ ತಡೆಗಟ್ಟಲು ದಪ್ಪವಾದ ಇಟ್ಟಿಗೆಯ ಗೋಡೆಯನ್ನು ಉತ್ತರದಿಂದ ದಕ್ಷಿಣದವರೆಗೆ ಉದ್ದವಾಗಿ ಕಟ್ಟಲಾಗಿದೆ. ಇಲ್ಲಿ ನಗರವನ್ನು ಪೂರ್ವ ದಿಕ್ಕಿನಲ್ಲಿ ಕಟ್ಟಲಾಗಿದೆ. ೨೧೯ X ೩೭ ಮೀ. ಉದ್ದದವರೆಗೆ ವಸತಿನೆಲೆಗಳು

ಕಂಡುಬಂದಿವೆ. ಈ ನಗರದಲ್ಲಿ ವಿಶೇಷವಾಗಿ ಹಡಗು ಕಟ್ಟೆಯನ್ನು ನೋಡುತ್ತೇವೆ. ಹಡಗುಗಳನ್ನು ನಿಲ್ಲಿಸಲು ಲಂಗರುಗಳು ಕಂಡುಬಂದಿವೆ. ಪೂರ್ವ ಭಾಗದಲ್ಲಿರುವ ನೆಲೆಗಳಿಗೆ ೪.೫ ಮೀಟರ್ ಉತ್ತರದ ಗೋಡೆಯನ್ನು ನಿರ್ಮಿಸಲಾಗಿತ್ತು. ಈ ನಗರದ ಆಗ್ನೇಯ ಭಾಗದಲ್ಲಿ ಅಧಿಕಾರಿ ವರ್ಗದವರು ಇರುತ್ತಿದ್ದರು ಮತ್ತು ಇಲ್ಲಿ ಆಹಾರ, ಮುಖ್ಯ ವಸ್ತುಗಳ ಸಂಗ್ರಹಣೆಯ ಪ್ರದೇಶವಿದೆ. ಈ ಸಂಗ್ರಹಣೆಯ ಕೊಠಡಿಯನ್ನು ಗಾಳಿ ಬರುವ ರೀತಿಯಲ್ಲಿ ಕಟ್ಟಲಾಗಿದೆ. ಈ ಪ್ರದೇಶದ ಸಂಪೂರ್ಣ ಅಳತೆ ೪೮.೫ X ೪೨.೫ ಮೀಟರ್ ಭಾಗವನ್ನು ಹೊಂದಿದೆ. ಈ ನಗರದ ಮುಖ್ಯ ಪ್ರದೇಶದಲ್ಲಿ ಮೂರು-ಕ್ವಾರ್ಟಸ್‌ಗಳು ಕಂಡುಬಂದಿವೆ. ಇಲ್ಲಿ ಮುಖ್ಯ ರಸ್ತೆಯು ಉತ್ತರದಿಂದ ದಕ್ಷಿಣಕ್ಕೆಯಿದೆ. ನಂತರ ಇವುಗಳಿಂದ ಕವಲೊಡೆದು ನಗರದ ಸುತ್ತ ಹರಡಿಕೊಂಡಿವೆ. ಈ ರಸ್ತೆಗಳು ೪ ರಿಂದ ೬ ಮೀ. ಅಗಲ ಮತ್ತು ೨ ರಿಂದ ೩ ಮೀಟರ್ ಉದ್ದವನ್ನು ಹೊಂದಿದೆ. ಇದು ಒಂದು ದೊಡ್ಡದಾದ ಮಹಾನಗರವಾಗಿದೆ. ಇಲ್ಲಿ ದೊರೆತ ೧೨ ಸ್ನಾನಗೃಹಗಳ ಸಾಲುಗಳು, ಒಳಚರಂಡಿ ವ್ಯವಸ್ಥೆಯನ್ನು ನೋಡುತ್ತೇವೆ.[೧೭೧] ಮಹಾರಾಷ್ಟ್ರದಲ್ಲಿ ಬೆಳೆದು ಬಂದ ಸಂಸ್ಕೃತಿಯನ್ನು ಮಾಳ್ವಾ ಸಂಸ್ಕೃತಿ ಎನ್ನುವರು. ಅದರಲ್ಲಿ ಮುಖ್ಯವಾಗಿ ಇನಾಂಗಾಂವ್‌ನ ವಿನ್ಯಾಸದಲ್ಲಿ ಎರಡು ವಿಧಗಳು ಕಂಡುಬಂದಿವೆ. ೧. ಮಣ್ಣಿನಿಂದ ಮೆತ್ತಿದ ಗೋಡೆಯಿರುವ ಚೌಕವಾದ ಮನೆ (ಅಗಲ ೮ X ೫ ಮೀಟರ್) ಅದರಲ್ಲಿ ಮತ್ತೊಂದು ಅವಶೇಷದಲ್ಲಿ ಮನೆಗಳ ಗೋಡೆಯನ್ನು ಗಿಡ್ಡವಾಗಿ ಅಥವಾ ಕಡಿಮೆ ಎತ್ತರದಲ್ಲಿ ಕಟ್ಟಲಾಗಿದೆ. ಹೆಚ್ಚಾಗಿ ಇಲ್ಲಿರುವ ಮನೆಯನ್ನು ಹತ್ತು ಭಾರಿ ದುರಸ್ತಿ ಮಾಡಿರುವುದಕ್ಕೆ ಪುರಾವೆಗಳು ದೊರಕಿದೆ.

ಇವರು ಮನೆಯ ಹಿಂಭಾಗದಲ್ಲಿ ಯಾವಾಗಲೂ ಒಲೆಯಿರುತ್ತದೆ. ೯.೭೫ ಮೀಟರ್ ಉದ್ದ ಮತ್ತು ೫.೫೫ ಮೀಟರ್ ಅಗಲ ಹೊಂದಿದ ಚೌಕವಾದ ಮನೆಯ ಅವಶೇಷದಲ್ಲಿ ಎರಡು ಭಾಗಗಳಿವೆ. ಪಶ್ಚಿಮದ ಕೊಠಡಿ ೪.೭೫ X ೫.೫೫ ಮೀಟರ್ ಅಗಲವಾಗಿದೆ. ಈಶಾನ್ಯ ಭಾಗದಲ್ಲಿ ಮಡಿಕೆಗಳನ್ನು ಸುಡುವ ಬಟ್ಟೆ ಆವಿಗೆಯಿದ್ದು, ಅದರ ಸುತ್ತಳತೆ ೧.೫೫ ಮೀಟರ್ ಬೆಂಕಿಯನ್ನು ಹಾಕುವ ಭಾಗ ೧.೮೬ ಮೀಟರ್ ಉದ್ದ ೦.೫೭ ಮೀಟರ್ ಅಗಲವಾಗಿದೆ. ಅದರ ಆಳ ೦.೫೧ ಮೀಟರ್ ಹೊಂದಿದೆ. ಗೋಡೆಯ ಎತ್ತರ ೧.೭ ಮೀಟರ್ ಮತ್ತು ೦.೦೭೫ ಮೀಟರ್ ದಪ್ಪವನ್ನು ಹೊಂದಿದೆ. ೨. ಕುಳಿಗಳನ್ನು ಹೊಂದಿದ ಮನೆಗಳು ವೃತ್ತಾಕಾರವಾಗಿವೆ. ಇದರ ಸುತ್ತಳತೆ ೩ ಮೀ. ಮತ್ತು ೧.೨೫ ಮೀಟರ್ ಆಳವನ್ನು ಹೊಂದಿದೆ. ಪಶ್ಚಿಮ ಭಾಗದಲ್ಲಿ ಎರಡು ಮೆಟ್ಟಿಲುಗಳಿವೆ. ಅವು ತಗ್ಗಿನ ಭಾಗದಲ್ಲಿ ಹೋಗಿ ಬರುವ ಮೆಟ್ಟಿಲು. ಈ ತೆಗ್ಗನ್ನು ತೆಳು ಮಣ್ಣಿನಿಂದ ಸಮಗೊಳಿಸಿ ಅದರ ಮೇಲೆ ಸುಣ್ಣವನ್ನು ಹಚ್ಚಲಾಗಿದೆ. ಇದರ ಮೇಲ್ಭಾಗದಲ್ಲಿ ಒರಟು ಮಣ್ಣಿನಿಂದ ಸಮಗೊಳಿಸಿದ ನಂತರ ಹಸುವಿನ ಸಗಣಿಯನ್ನು ಹಚ್ಚಲಾಗಿದೆ. ಈ ತೆಗ್ಗಿನ

ಸುತ್ತಲೂ ೭ ಕುಳಿಗಳಿವೆ. ಅದರ ಸುತ್ತಳತೆ ೦.೧೫ ಮೀ. ಉತ್ತರ ಭಾಗದ ಚಾಚುಗಳಿರುವ ವಿಶೇಷವಾದ ಒಲೆ ದೊರೆತಿದ್ದು ಅಂತಹ ಒಲೆ ಮಾಳ್ವ ಅಥವಾ ಜೋರ್ವೆ ಸಂಸ್ಕೃತಿಯ ನೆಲೆಗಳಿಲ್ಲಿ ದೊರಕಿಲ್ಲ. ಛತ್ತಿನ ಭಾಗಕ್ಕೆ ಹುಲ್ಲು ಅಥವಾ ಬೇರೆ ಬೇರೆ ವಸ್ತುಗಳನ್ನು ಬಳಸುತ್ತಿದ್ದರು. ಹೀಗೆ ಮೂರು ವಿವಿಧ ನೆಲೆಗಳನ್ನು ನೋಡುತ್ತೇವೆ. ಅವುಗಳಲ್ಲಿ ಚೌಕಾವಾದ ಮನೆಗಳು ೨೮, ಕುಳಿಗಳಿಂದ ಹೊಂದಿದ ಮನೆ ೩, ವೃತ್ತಾಕಾರದ ಮನೆ ಒಂದು ಎಂದು ಒಟ್ಟು ೩೨ ಮನೆಗಳ ಅವಶೇಷಗಳು ದೊರೆತಿದೆ.

ದೈಮಾಬಾದ್‌ಲ್ಲಿ ಅನೇಕ ವಿದಧ ಮನೆಗಳ ವಿನ್ಯಾಸಗಳು ಕಂಡುಬಂದಿದೆ. A. ತಾಮ್ರ ವಸ್ತುಗಳನ್ನು ತಯಾರು ಮಾಡುವ ಕೇಂದ್ರವಿದೆ. ತಾಮ್ರದ ಒಲೆಗಳು, ಎರಡು ಕತ್ತಿಯಾಕಾರದ ವಸ್ತುಗಳು ದೊರೆತಿವೆ. ತಾಮ್ರದ ವಸ್ತುಗಳನ್ನು ತಯಾರಿಸುವ ಮಣ್ಣಿನ ಅಗಲವಾದ ಕಟ್ಟೆಯಿದೆ. ಈ ನೆಲೆಯ ಎಲ್ಲ ಭಾಗದಲ್ಲಿ "U" ಆಕಾರದ ಮಣ್ಣಿನ ಗೋಡೆಯಿದೆ. ಮತ್ತೊಂದು ನೆಲೆಯಲ್ಲಿ ಕಲ್ಲಿನಿಂದ ತಯಾರಿಸುವ ಕೇಂದ್ರವಿದೆ. ಇಲ್ಲಿ ೪೦ ಅರೆಯುವ ಕಲ್ಲುಗಳು ಮತ್ತು ಅಳತೆಬದ್ಧವಾಗಿ ಕತ್ತರಿಸಿದ ಕಲ್ಲುಗಳು ದೊರೆತಿವೆ. B. ೩.೭ ಮೀಟರ್‌ದಿಂದ ೩.೯ ಮೀಟರ್ ಉದ್ದ ಮತ್ತು ೨.೪ ಮೀಟರ್ ದಿಂದ ೨.೫ ಮೀಟರ್ ಅಗಲವಾದ ವೇದಿಕೆ/ಚೌಕವಾದ, ಹೃದಯಾಕಾರದ, ಮತ್ತು ವೃತ್ತಾಕಾರದ ಮೂರು ಅಗ್ನಿ ಕುಂಡಗಳಿವೆ. ಇದನ್ನು ಧಾರ್ಮಿಕ ಎಂದು ಗುರುತಿಸಲಾಗಿದೆ. C. ಒಂದು ನೆಲೆಯಲ್ಲಿ ಮಣ್ಣಿನಿಂದ ಕಟ್ಟಿದ ಪೀಠವಿದೆ. ಈ ಪೀಠ ೧೮ ಮೀಟರ್ ಉದ್ದವಾಗಿದೆ. ಇಲ್ಲಿಯೇ ಶುದ್ಧ ನೀರು ಹರಿಯುವ ಅಗಲವಾದ ನಾಲೆಯಿದೆ ಮುಂದೆ ಹರಿದು ನೀರು ಇಂಗುಗುಂಡಿಯನ್ನು ಸೇರುತ್ತಿತ್ತು. ಈ ಇಂಗು ಗುಂಡಿಯನ್ನು ಬಿಳಿ ಮಣ್ಣಿನಿಂದ ವೃತ್ತಾಕಾರವಾಗಿ (Ring) ಮಾಡಲಾಗಿದೆ. D. ಮತ್ತೊಂದು ಭಾಗದಲ್ಲಿ ಸಾಕು ಪ್ರಾಣಿಗಳ ಕಾಲಿಗೆ ಲಾಳ ಹಾಕುವ ಪ್ರದೇಶವಾಗಿರಬಹುದು. ಇಲ್ಲಿ ಪ್ರಾಣಿ ಕಟ್ಟುವ ಕಟ್ಟಿಗೆಯ ಗೂಟ ದೊರಕಿದೆ. ಮಣ್ಣಿನಿಂದ ಕಟ್ಟಿದ ಕುದರೆಯ ಲಾಳದ ಆಕಾರದ ದಿಬ್ಬವಿದೆ. ಈ ರೀತಿಯ ಲಾಳದ ಆಕಾರ ದಿಬ್ಬವನ್ನು ಬಲಿಪೀಠವೆಂದು ತಿಳಿಯಲಾಗಿದೆ. ಇದನ್ನು ಪಶ್ಚಿಮ ದಿಕ್ಕಿನದೆ. ಆದ್ದರಿಂದ ಇದು ಪ್ರಾಣಿಗಳನ್ನು ಬಲಿಕೊಡುವ ಪ್ರದೇಶವಿರಬಹುದು ಅಥವಾ ಪ್ರಾಣಿಗೆ ಲಾಳ ಹಾಕುವ ಪ್ರದೇಶವಿರಬಹುದು. E. ಗಜಪೃಷ್ಠ ಆಕಾರದ ದೇವಾಲಯವಿದೆ. ಅದಕ್ಕೆ ತೆಳುವಾದ ಮಣ್ಣಿನ ಮೆಟ್ಟಿಲು ಇದೆ. ಈ ದೇವಾಲದ ಗೋಡೆಯ ಎತ್ತರ ೦.೦೫ ದಿಂದ ೦.೧೦ ಮೀಟರ್ ೨.೬ ಮೀಟರ್ ಉದ್ದ, ೧ ಮೀಟರ್ ಅಗಲವಾಗಿದೆ. ಅಲ್ಲಿ ವೃತ್ತಾಕಾರದ ಕಂದು ಬಣ್ಣದ ಮಣ್ಣಿನ ದಿಬ್ಬವಿದೆ. ಇದರ

ಹಿಂಭಾಗದಲ್ಲಿ ೦.೫೫ ಮೀ. ಸುತ್ತಳತೆಯ ಒಲೆಯಿದೆ. ಈ ಒಲೆಯ ತುದಿಯಲ್ಲಿ ಕಲ್ಲನ್ನು ಇಟ್ಟು ಅದಕ್ಕೆ ದಪ್ಪವಾಗಿ ಮಣ್ಣನ್ನು ಮೆತ್ತಿದ್ದಾರೆ.

ದಕ್ಷಿಣ ಭಾಗದಲ್ಲಿ ಹಸಿ ಮಣ್ಣಿನಿಂದ ಮಾಡಿದ ಸಿಲೆಂಡರ್ ಆಕಾರದ ವಸ್ತು ದೊರೆತಿದೆ. ಪೂರ್ವದ ಗೋಡೆಯ ಸುತ್ತ ಮಣ್ಣಿನ ಗೋಡೆಯನ್ನು ದಪ್ಪವಾಗಿ ಕಟ್ಟಲಾಗಿದೆ. ಈ ಗೋಡೆಯ ಸುತ್ತಳತೆ ೦.೪೫ ಮೀಟರ್ ಇದೆ. ಅಲ್ಲಿ ಮತ್ತೆ ಮೂರು ವೃತ್ತಾಕಾರದ ಕಲ್ಲುಗಳು ತ್ರಿಕೋನ ಆಕಾರದಲ್ಲಿಡಲಾಗಿದೆ. ಈ ದೇವಾಲಯದ ಹಿಂಭಾಗದಲ್ಲಿ ಸುತ್ತಲು ೯ ಮಡಿಕೆಗಳಿವೆ. ಅದರಲ್ಲಿ ಗೋಧಿ, ಬಾರ್ಲಿ, ರಾಗಿ, ಮಸೂರ ಬೀಜ, ದೊರೆತಿದೆ. ಈ ರೀತಿ ಇಲ್ಲಿ ಐದು ವಿಧಗಳ ನೆಲೆಗಳು ದೊರೆತಿವೆ. ಅವಶೇಷದ ಆಧಾರದ ಮೇಲೆ ಅಲ್ಲಿಯ ಜನರು ಸಿಂಧೂ ಜನರಷ್ಟು ಅಭಿವೃದ್ಧಿ ಹೊಂದಿದ್ದರು ಅದರಲ್ಲಿ ೭೫%ರಷ್ಟು ಅಭಿವೃದ್ಧಿ ಹೊಂದಿದ್ದರು ಎಂದು ತಿಳಿಯಲಾಗಿದೆ.[೧೭೨] ಕರ್ನಾಟಕದ ಶಿಲಾತಾಮ್ರಯುಗ ನೆಲೆಗಳ ದೊರಕಿರುವ ಕಟ್ಟಡ ಅವಶೇಷಗಳನ್ನು ಕುರಿತು ಈಗಾಗಲೇ ವಿವರಿಸಲಾಗಿದೆ. ಇಲ್ಲಿ ಯಾವುದೇ ರೀತಿಯ ಅಭಿವೃದ್ಧಿ ಹೊಂದಿದ ಸಂಪೂರ್ಣ ರೂಪದ ಅವಶೇಷಗಳು ದೊರೆತಿಲ್ಲ. ಇವರ ವಸತಿನೆಲೆಯಲ್ಲಿ ನವಶಿಲಾಯುಗದ ನೆಲೆಗಳ ವಿನ್ಯಾಸ ಮುಂದುವರೆದುಕೊಂಡಿವೆ. ಅವರ ಬಳಸುವ ಮತ್ತು ತಯಾರಿಸುವ ವಸ್ತುಗಳಲ್ಲಿ ಬದಲಾವಣೆಯನ್ನು ನೋಡುತ್ತೇವೆ. ಮಡಿಕೆಗಳು ಬೂದ ಬಣ್ಣದ, ನೇರಳೆ ಬಣ್ಣ ವಿವಿಧ ಮಡಿಕೆಗಳು, ಕಲ್ಲಾಸರೆಯಲ್ಲಿ ಗುಂಪು ಗುಂಪಾಗಿ ಬಿಡಿಸಿದ ಚಿತ್ರಗಳು ಅದರಲ್ಲಿ ಕುದುರೆ ಸವಾರಿಯ ಚಿತ್ರಗಳಿವೆ.[೧೭೩]

## ಕೊನೆಟಿಪ್ಪಣಿ

1. Agarwal D.P., 1984, *The Archaeology of India*, p.34
2. Bridget and Raymond Allchin., 2003, *The Rise of civilization in India and pakistan,* pp.38-39.
3. *Ibid*, pp.47-49
4. *Ibid*, pp.51-54
5. Agarwal D.P., *Op.cit*, pp.47-52
6. *Idid,* pp.52-53
7. ಷೇಕ್ ಅಲಿ.ಬಿ. (ಪ್ರ. ಸಂ.) ಸುಂದರ. ಅ., (ಸಂ.ಸಂ.), 1997, ಕರ್ನಾಟಕ ಚರಿತ್ರೆ ಸಂಪುಟ 1, ಪು. 136–137
8. Bridget and Raymond Allchin., *Op.cit*, p.44
9. ಸುಂದರ ಅ., (ಸಂ.ಸಂ.), 1997, ಪೂರ್ವೋಕ್ತ, ಪು. 138–139.
10. ಅದೇ, ಪು.136
11. ಅದೇ
12. Agarwal D.P., *Op.cit*, p.34
13. Bridget and Raymond Allchin., *Op.cit*, p.62
14. *Ibid,* p.69
15. Agarwal D.P., *Op.cit*, pp.60-65
16. *Ibid,* pp.66-67
17. Bridget and Raymond Allchin., *Op.cit*, pp.73-77
18. Agarwal D.P., *Op.cit*, p.75
19. Bridget and Raymond Allchin., *Op.cit*, p.87
20. Agarwal D.P., *Op.cit*, p.75
21. Bridget and Raymond Allchin., *Op.cit*, pp.86-87
22. Amarnath Khanna., 1992, *Archaeology of India,* p.83

23. Agarwal D.P., *Op.cit*, pp. 95-98
24. *Ibid,* p.102
25. Amarnath Khanna., *Op.cit*, p.84.
26. Agarwal D.P., *Op.cit*, p.102
27. Setter S, and Ravi Korisettar., 2002, *Prehistory (Archaeology of south Asia)* Vol. I, p.127
28. Amarnat Khanna., *Op.cit*, pp.85-86
29. Settar S, and Ravi Korisetter., Vol.I, *Op.cit*, pp.135-136
30. *Ibid,* 2002, pp.137-138
31. Bridget and Raymond Allchin., *Op.cit*, pp.117-118
32. *Indian Archaeolgoy - A Reviw 1962-63*, p.3
33. *I.A.R,1963-64,* pp.4-5
34. *I.A.R,1957-58*, p.5
35. *I.A.R,1958-59*, p.6
36. *I.A.R,1959-60,* p.6
37. *I.A.R,1960-61*, p.11
38. Thimma Reddy K., 2004, "Prehistory of North-East Andhra Pradesh", Sundara A,(Ed) *Indian Prehistory and protohistory*, pp.58-59
39. Narasimhaiah B., 1980, *Neolithic and Megalithic Cultures in Tamil Nadu,* pp.80-81
40. *Ibid*, pp.78-79
41. Purushottam Singh., 1991, *The Neolithic Origins*, p.137
42. Hanumantha Rao M, and Nagaraju S., 1974, *Excavation at Hemmige*, 1964 p.7
43. *Ibid,* pp.13-14
44. Seshadri M., 1971, *Excavations at T. Narasipur*, pp.1-8

45. Sundara A, and Bhatsoori K.G., 1990, *Archaeology in Karnataka*, pp.67-70

46. Ansari Z.D, and Nagaraja Rao M.S., 1969, *Excavation at Sanganakallu, (Early Neolithic House at Bellary)1964-65,* pp.1-35

47. *I.A.R, 1963-64,* pp.24-25

48. Bridget and Rayamond Allchin., *Op.cit*, p.131

49. *I.A.R, 1960-61,* pp.31-32

50. *I.A.R, 1961-62*, pp.43-44

51. *Ibid,* pp.41-43

52. *I.A.R, 1955-56,* pp.6-7

53. *I.A.R, 1957-58,* pp.12-13

54. *I.A.R, 1955-56*, pp.6-7; *1957-58,* pp.12-13

55. *I.A.R, 1958-59*, pp.13-14

56. *I.A.R, 1957-58,* pp.30-38; *1958-59,* pp.30-31

57. *I.A.R. 1970-71*, pp.25-26

58. *I.A.R. 1968-69*, pp.18-19

59. *I.A.R. 1969-70*, pp.25-27

60. *I.A.R. 1960-61*, p.28

61. Bridget and Raymond Allchin., *Op.cit*, pp.286-287

62. *Ibid,* pp.288-289

63. *Ibid,* pp.286-287

64. *Ibid,* pp.288-293

65. *Ibid,* pp.286-287

66. *Ibid,* pp.288-292

67. ಶಿವತಾರಕ್ ಕೆ.ಬಿ. 2001, ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. 64–65

68. ಅದೇ, ಪು. 67

69. ಅದೇ, ಪು. 352–359

70. Agarwal D.P., *Op.cit*, p.237

71. *Ibid*, p.255

72. Bridget and Raymond Allchin., *Op.cit*, p. 318

73. Agarwal D.P., *Op.cit*, p.255

74. Bridget and Raymond Allchin., *Op.cit*, p.318

75. Agarwal D.P., *Op.cit*, p.255

76. *I.A.R, 1963-64*, p.57

77. *I.A.R, 1962-63,* pp.31-32

78. *I.A.R, 1963-64*, p.39

79. *I.A.R, 1977-78*, p.39

80. *I.A.R, 1964-65*, pp.1-2

81. *I.A.R, 1964-65*, pp.22-23

82. *I.A.R, 1963-64,* pp.23-26

83. ವಾಸುದೇವನ್ ಸಿ.ಎಸ್., 2012, ಕರ್ನಾಟಕ ದೇವಾಲಯ ಕೋಶ: ರಾಯಚೂರು ಜಿಲ್ಲೆ, ಪು. 10–11

84. ಶಿವತಾರಕ್ ಕೆ.ಬಿ, ಪೂರ್ವೋಕ್ತ, ಪು.63–65

85. ಅದೇ, ಪು. 69–74.

86. Pande G.C., 1995, *Foundations of Indian Culture*, Vol. II, pp.101-102

87. Rajkumar., 2003, *Essays on Ancient India,* pp.262-263

88. Allchin F.R., 1995, *The Archaeology of Early Historic South Asia, The Emergence of Cities and States,* p.114

89. Agrawala V.S., 1953, *Indian as known to Panini. (A Study of the Cultural Materials in the Ashtadyayi*), p.69

90. *Ibid,* pp.141-142

91. Datta B.B., 1977, *Town Planning in Ancient India,* pp.149-151

92. Allchin F.R., *Op.cit*, p.196

93. *Ibid*, pp.202-203

94. *Ibid*, pp.237-238

95. Sankalia H.D, 1952, Dikshit M.G., *Excavation at Brahmapuri (Kolhapur) 1945-48* pp.30-32

96. Allchin F.R., 1995, *The Archaeology of Early Historic South Asia, The Emergence of Cities and States,* pp.281-238

97. *I.A.R, 1972-73*, pp.33-34

98. *I.A.R, 1971-72*, pp.48-49

99. *I.A.R, 1954-55,* pp.6-7

100. *I.A.R, 1960-61*, pp.20-21

101. *I.A.R, 1972-73*, pp.20-21

102. *I.A.R, 1974-75,* pp .39-41, *1975-76* pp. 47-49

103. *I.A.R, 1973-74*, p.3

104. *I.A.R, 1975-76*, pp.2-3

105. *I.A.R, 1976-77*, pp.4-5

106. *I.A.R, 1974-75*, pp.5-6

107. *I.A.R, 1975-76*, pp.5-6

108. *I.A.R, 1973-74*, p.31, *1974-75*, p.48

109. *I.A.R, 1974-75*, pp.48-50

110. *I.A.R, 1970-71,* pp.8-10

111. *I.A.R, 1964-65*, pp.13-14

112. *I.A.R, 1983-84,* pp.67-69

113. *I.A.R, 1997-93*, pp.39-54

114. Narasimha Murthy, A.V., Devaraja D.V. Krishanappa M.V, Krishna Murthy, M.S., Mahadevaiah M.P. Havalaiah N, Rangauraju N.S, Dayanada Patel T, Prabhu.K., 1997, *Excavations at Banavasi,* pp.21-77

115. *Ibid,* p.15

116. *Ancient India, Bulletin of the Archaeological Survey of India, No.4, July 1947-January 1948*, 1984, pp.185-186 (Reprint)

117. *Ibid,* p.15

118. ಸುಂದರ. ಅ., (ಸಂ.ಸಂ) ಪೂರ್ವೋಕ್ತ, ಪು.286

119. ಪಾಟೀಲ ಬಿ.ಸಿ., 1998, ಕೊಪ್ಪಳ : ಸಾಂಸ್ಕೃತಿಕ ಪರಂಪರೆ, ಪು.19–20

120. Devaraj D.V, and Taulwar H.T., 1996, *Interim Report on the Excavations Sannati, 1993-95,* pp.5-8

121. ವಾಸುದೇವನ್.ಸಿ.ಎಸ್., ಜನವರಿ–ಜೂನ್2012, ಕರ್ನಾಟಕದ ವಿಶ್ವವಿದ್ಯಾಲಯಗಳು ಹಾಗೂ ಪರಾತತ್ವ ಸಂಶೋಧನೆ, ಇತಿಹಾಸ ದಪರ್ಣ, ಪು.131–132

122. ಅದೇ, ಪು.144–148

123. Devaraj D.V, Talwar H.T., 1993-95, *Op.cit*, pp.1-11

124. *I.A.R, 1983-84,* p.40

125. *I.A.R, 1977-78,* pp.27-29

126. Ancient India, No.4, *Op.cit*, pp. 270-290

127. Devaraj D.V, Narasimha Murthy A.V, Krishana Murthy M.S, Swamy., 1996, *Excavations at Talakad, 1992-93*, pp.54-55

128. ಪಾಟೀಲ ಬಿ.ಸಿ., ಪೂರ್ವೋಕ್ತ, 1998 ಪು.19–20

129. ಸುಂದರ ಅ., (ಸಂ.), 2009, ಕನ್ನಡ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಪು.277

130. *I.A.R, 1963-64*, pp.23-25

131. *I.A.R, 1977-78*, pp.24-25

132. *I.A.R, 1992-93*, pp.41-42

133. ಕೃಷ್ಣಮೂರ್ತಿ ಎಂ.ಎಸ್., ಜನವರಿ–ಜೂನ್ 2012, "ಕರ್ನಾಟಕದಲ್ಲಿ ಪುರಾತತ್ವ ಉತ್ಖನನಗಳು", ಇತಿಹಾಸ ದಪರ್ಣ, ಪು. 40–41

134. ಅದೇ, ಪು.41–42

135. ವಾಸುದೇವನ್ ಸಿ.ಎಸ್., ಜನವರಿ–ಜೂನ್ 2012, ಪೂರ್ವೋಕ್ತ ಪು.131

136 .ಅದೇ, ಪು.139–140

137. ಅದೇ, ಪು.137–141

138. ಕೇಶಿರಾಜ, (ಶಬ್ದಪಾರಮಾರ್ಗಮಶಕ್ಯಂ) ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ಸಂ.೮, ೧೯೫೫ ಪು.೭೮೧೧

139. ಅದೇ, ಸಂ.೫, ಪು ಸಂ.೪೯೩೭–೪೯೩೮

140. Amarnath Khanna, (Foreword by) Deshpande M.N., *Op.cit*, pp.85-86

141. Agarwal D.P., *Op.cit*, pp.95-98

142. Amarnath Khanna., *Op.cit*, p.84

143. Setter S, Ravi Korisettar., *Op.cit*, pp.135-136

144. Bridget and Raymond Allchin., *Op.cit*, pp.117-118

145. *I.A.R, 1957-58*, p.5

146. *I.A.R, 1960-61*, p.11

147. Thimma Reddy K., *Op.cit*, pp.58-59

148. Narasimhaiah B., *Op.cit*, pp.78-81

149. Hanumantha Rao M, Nagaraju S., 1974, *Excavations at Hemmige, 1964*, pp.13-14

150. Seshadri M., 1971, *Excavations at T. Narasipur*, pp.1-8

151. Sundra A, Bhatsoori K.G., *Op.cit*, pp .67-70

152. Ansari Z.D., Nagaraja Rao, M.S., *Op.cit*, pp.1-35

153. *I.A.R, 1963-64*, pp.24-25

154. *I.A.R,* 1961-62, pp.41-44

155. Bridget and Raymond Allchin., *Op.cit*, pp.175-177

156. Agarwal D.P., *Op.cit*, pp.211-241

157. *Ibid,* pp.218-221

158. *Ibid,* PP 231-232.

159. *I.A.R, 1977-78*, p. 39

160. *I.A.R,1964-65*, pp. 22-23

161. Amarnath Khanna, (Foreword by) Deshpande M.N., *Op.cit*, pp. 85-86

162. *I.A.R, 1962-63*, p.3, *1963-64*, pp.4-5.

163. Thimma Reddy K., 2004, 'Prehistory of North-East Andhra Pradesh', Sundara A, *Indian Prehistory and Protohistory*, pp.58-59

164. Sundara A, Bhatsoori K.G., *Op.cit*, pp.67-70

165. Settar. S, Ravi Korisettar., Vol. I, *Op.cit*, pp.135-138

166. Narasimhaih B., *Op.cit*, pp.80-81

167. Ansari Z.D, Nagaraja Rao M.S., *Op.cit*, pp.1-35

168. *I.A.R, 1963-64*, pp.24-25

169. Agarwal D.P., *Op.cit*, pp.95-102

170. Bridget and Raymond Allchin., *Op.cit*, pp.105-118

171. *Ibid,* pp.171-175

172. Vasant Shinde., "The Malwa Culutre in Maharashtra", A Study of Settelement and Subststence Patterns, *Man and Enviornment*, XV (2) 1990 N-1 (January-June), pp.56-58

173. Murty M.L.K., "Pre-Iron Age Agricultural Settlements in South India : An Ecological Purspective *Man and Environment* XIV (I), 1989, pp.65-66

# ಕೋಷ್ಟಕಗಳು

## ಹಳೇಶಿಲಾಯುಗ

### ಗುಹೆಗಳಲ್ಲಿ ಮತ್ತು ಹಳ್ಳದ ಮೇಲೆ ಬೆಳೆದ ಕೆಲವು ಹಳೇಶಿಲಾಯುಗದ ವಸತಿನೆಲೆಗಳು

| ರಾಜ್ಯ | ಸ್ಥಳ | ವಿನ್ಯಾಸ | ಅವಶೇಷ | ಕಾಲಮಾನ |
|---|---|---|---|---|
| ಮಧ್ಯಪ್ರದೇಶ | ಭೀಮ್‌ಬೇಟ್ಕಾ | ನೈಸರ್ಗಿಕ ಗುಹೆಗಳು | ಶಿಲಾಯುಗ | ಕ್ರಿ.ಪೂ ೧೮,೦೦೦ ರಿಂದ ೧೭,೦೦೦ |
| ಮಹಾರಾಷ್ಟ್ರದ ಅರಾವಲಿ ಬೆಟ್ಟ ಉತ್ತರದ ವಾಯವ್ಯ | ಸಂಗಾವೋ | ನೈಸರ್ಗಿಕ ಗುಹೆಗಳು | ಶಿಲಾಯುಗ | ಕ್ರಿ.ಪೂ ೧೮,೦೦೦ ರಿಂದ ೧೭,೦೦೦ |
| ಕರ್ನಾಟಕ | ಹುಣಸಗಿ | ಪೊಟರೆ / ಕಲ್ಲಿನ ಫಡಿ | ಶಿಲಾಯುಗ | ಕ್ರಿ.ಪೂ ೧೮,೦೦೦ ರಿಂದ ೧೭,೦೦೦ |

## ಸೂಕ್ಷ್ಮಶಿಲಾಯುಗ

### ಅಭಿವೃದ್ಧಿ ಹೊಂದಿದ ಕೆಲವು ಸೂಕ್ಷ್ಮಶಿಲಾಯುಗದ ವಸತಿನೆಲೆಗಳು

| ರಾಜ್ಯ | ಸ್ಥಳ | ವಿನ್ಯಾಸ | ಅವಶೇಷ | ಕಾಲಮಾನ |
|---|---|---|---|---|
| ರಾಜಸ್ಥಾನ | ಭಾಗೋರ್ | ವೃತ್ತಾಕಾರದ ಗುಡಿಸಿಲಿನ ಕುಳಿಗಳು | ರಸ್ತೆಯ ಕುರುಹು | ಕ್ರಿ.ಪೂ ೫೦೦೦ ರಿಂದ ೨೮೦೦ |
| ಮಧ್ಯಪ್ರದೇಶ | ಸರ್ರೈ–ನಹರ್ರೈ | ವೃತ್ತಾಕಾರದ ಗುಡಿಸಿಲಿನ ಕುಳಿಗಳು | ಒಲೆ, ಸುಟ್ಟ ಹೆಂಟೆ | ಕ್ರಿ.ಪೂ ೫೦೦೦ ರಿಂದ ೨೮೦೦ |
| ಪಶ್ಚಿಮ ಬಂಗಾಲ | ಬರ್‌ಬಾನ್‌ಪುರ್ | ಕಲ್ಲಾಸರೆ / ಸಮತಟ್ಟಾದ ನೆಲದ ಮೇಲೆ ಗುಡಿಸಲಿನ ಕುಳಿಗಳು | ಕೈಗಾರಿಕೆ ಕೇಂದ್ರ | ಕ್ರಿ.ಪೂ ೫೦೦೦ ರಿಂದ ೨೮೦೦ |
| ಆಂಧ್ರಪ್ರದೇಶ | ನಾಗಾರ್ಜುನಕೊಂಡ | –– | ಕೈಗಾರಿಕೆ ಕೇಂದ್ರ | ಕ್ರಿ.ಪೂ. ೫೦೦೦ ರಿಂದ ೨೮೦೦ |
| ಕರ್ನಾಟಕ | ರಾಯಚೂ/ಬಳ್ಳಾರಿ | ಕಲ್ಲಾಸರೆ | ವ್ಯವಸಾಯ ಪ್ರಾರಂಭ | –– |

## ನವಶಿಲಾಯುಗದ ವಸತಿನೆಲೆಗಳ ರಚನಾ ವಿನ್ಯಾಸ

### ಉತ್ಖನನದಲ್ಲಿ ದೊರಕಿರುವ ಕೆಲವು ವಸತಿನೆಲೆಗಳಲ್ಲಿನ ಮನೆಗಳ ರಚನಾ ವಿನ್ಯಾಸ

| ರಾಜ್ಯ | ಸ್ಥಳ | ವಿನ್ಯಾಸ | ಕೊಠಡಿಗಳು/ ಕೊಠಡಿಯ ವಿನ್ಯಾಸ | ಇತರೆ | ಕಾಲ ಮಾನ |
|---|---|---|---|---|---|
| ಉತ್ತರ ಭಾರತ | ಕಾಶ್ಮೀರ | ವೃತ್ತಾಕಾರ/ಚೌಕಾಕಾರದ ಮನೆ | ಎರಡು ಕೊಠಡಿಗಳು | ಮನೆಯ ಹೊರಭಾಗ ದಲ್ಲಿ ಒಲೆ | ಕ್ರಿ.ಪೂ ೨,೦೦೦ |
| ಗುಜರಾತ್ | ಅಲಹಾ ಬಾದ್– ಚೊಪಾಣಿ ಮಾಂಡ | ವೃತ್ತಾಕಾರ/ಚೌಕಾಕಾರದ ಮನೆ, ಮಣ್ಣಿಂದ ಕಟ್ಟಿದ ಗೋಡೆಯ ಮೇಲೆ ಬಂಬೂಗಳನ್ನು ಜೋಡಿಸಲಾಗಿದೆ. | – | – | ಕ್ರಿ.ಪೂ ೨,೦೦೦ |
| ಉತ್ತರ ಭಾರತ | ಶ್ರೀನಗರ ಬೂರ್ಜ ಹೋಮ್ | ವೃತ್ತಾಕಾರ/ಚೌಕಾಕಾರದ ಮನೆಯ ಗೋಡೆಯನ್ನು ಮಣ್ಣಿನಿಂದ ಮೆತ್ತಿಕಟ್ಟುತ್ತಿದ್ದರು. ಕೆಲವೊಮ್ಮೆ ಮಣ್ಣಿನ ಇಟ್ಟಿಗೆಯನ್ನು ಬಳಸುತ್ತಿದ್ದರು.ಮನೆ ಮೇಲೆ ಕಲ್ಲು ಮತ್ತು ಮಣ್ಣನ್ನು ಹಾಕುತ್ತಿದ್ದರು. | – | ಮನೆ ಹೊರಭಾಗ ದಲ್ಲಿ ಒಲೆ | ಕ್ರಿ.ಪೂ ೨,೦೦೦ |
| ಉತ್ತರ ಪ್ರದೇಶ | ಮೆಹರ್ ಘರ್ | ವೃತ್ತಾಕಾರದ/ಚೌಕಾ ಕಾರದ ಮನೆ, ಇಟ್ಟಿಗೆಯಿಂದ ಕಟ್ಟಿದ ಮನೆಗಳಿವೆ. | ಆರರಿಂದ ಒಂಬತ್ತು ಕೊಠಡಿಗಳಿವೆ. | ಹಸುಗಳನ್ನು ಕಟ್ಟುವ ದೊಡ್ಡಿಯಿದೆ. | ಕ್ರಿ.ಪೂ ೨,೦೦೦ |
| ತಮಿಳು ನಾಡು | ಪಯ್ಯಂ ಪಳ್ಳಿ | ಮನೆಯನ್ನು ಇಳಿಜಾರು ಪ್ರದೇಶದಲ್ಲಿ ಬಂಬೂಗಳನ್ನು ನೆಟ್ಟು | ಮನೆಯ ನೆಲವನ್ನು ಮಣ್ಣಿನಿಂದ ಕುಟ್ಟಿ ಗಟ್ಟಿಗೊಳಿಸ ಲಾಗಿದೆ. | | ಕ್ರಿ.ಪೂ ೨,೦೦೦ |
| ಕರ್ನಾಟಕ | ಕೋಲಾರ– ಮಾಲೂರ | ಮಣ್ಣಿನಿಂದ ಮೆತ್ತಿ ಗಟ್ಟಿಗೊಳಿಸಿದ ಮನೆಯ ಗೋಡೆ | – | – | ಕ್ರಿ.ಪೂ ೨,೦೦೦ |
| ಕರ್ನಾಟಕ | ಸಂಗನಕಲ್ಲು | ಗುಡಿಸಲುಗಳನ್ನು ಬಂಬೂಗಳಿಂದ ನೆಟ್ಟು ಅದರ ಮೇಲೆ ಹಸಿ | ಮನೆಯ ನೆಲವನ್ನು ಬಿಳಿ ಸುಣ್ಣವನ್ನು ೨೦ | ಛತ್ತಿನ ಭಾಗಕ್ಕೆ ಹುಲ್ಲಿನ ಹೊದಿಕೆ | ಕ್ರಿ.ಪೂ ೨,೦೦೦ |

| | | | | | |
|---|---|---|---|---|---|
| | | ಮಣ್ಣನ್ನು ಮೆತ್ತಿ ನಂತರ ಬಿಳಿ ಜೇಡಿ ಮಣ್ಣನ್ನು ಮೆತ್ತಲಾಗಿದೆ. | ಸೆಂ.ಮೀ. ದಪ್ಪವಾಗಿ ಹಾಕಲಾಗಿದೆ. ಅಥವಾ ಚಿಕ್ಕ ಕಲ್ಲು ಮತ್ತು ಇದ್ದಿಲು ಗಳನ್ನು ಹಾಕಿ ಗಟ್ಟಿಗೊಳಿಸ ಲಾಗಿದೆ. | ಯನ್ನು ಹಾಕಲಾಗಿದೆ. | |
| ಕರ್ನಾಟಕ | ತೆಕ್ಕಲ ಕೋಟೆ | ಗುಡಿಸಿಲಿನ ಗೋಡೆಯನ್ನು ಗಿಡ್ಡದಾಗಿ ಕಟ್ಟಿ ಅದರ ಮೇಲೆ ಬಂಬೂಗಳನ್ನು ಜೋಡಿಸಿ ಜೇಡಿ ಮಣ್ಣು ಮತ್ತು ಸುಣ್ಣವನ್ನು ಹಚ್ಚುತ್ತಿದ್ದರು. | ಕೆಂಪುಬಣ್ಣದ ದೊಡ್ಡ ಜಾರ್ ಮಡಿಕೆಗಳ ಕೈಗಾರಿಕೆ, ಶವದಪೆಟ್ಟಿಗೆ | ತಾಮ್ರದ ಮೀನಿನ ಗಾಳದ ಮೊಳೆ, ತಂತಿ, ಆಭರಣ ಕಿವಿಓಲೆ, ಅರೆಪ್ರಶಸ್ತ ಮಣಿಗಳು | ಕ್ರಿ.ಪೂ ೨,೦೦೦ |

## ಶಿಲಾತಾಮ್ರಯುಗದ ಮನೆಯ ಲಕ್ಷಣಗಳು

### ಉತ್ಖನನದಲ್ಲಿ ದೊರಕಿರುವ ಕೆಲವು ಮುಖ್ಯನೆಲೆಗಳ ವಸತಿನೆಲೆಗಳಲ್ಲಿನ ಮನೆಗಳ ಲಕ್ಷಣಗಳು

| ರಾಜ್ಯ | ಸ್ಥಳ | ಬಳಸಿದ ವಸ್ತುಗಳ ಮತ್ತು ಲಕ್ಷಣ | ಮನೆಯಲ್ಲಿ ದೊರೆತ ಕುರುಹು | ಮನೆಯ ಇತರೆ ಲಕ್ಷಣಗಳು | ಕಾಲಮಾನ |
|---|---|---|---|---|---|
| ರಾಜಸ್ಥಾಸ | ಕಾಲಿಬಂಗಾನ್ | ಮಣ್ಣಿನ ಇಟ್ಟಿಗೆ ಬಳಕೆಯ ಮನೆಗಳು, ಕೋಟೆಗೋಡೆ | ವೃತ್ತಾ ಕಾರದ ಒಲೆ | ನೀರಿನ ನಾಲೆ, ಇಂಗು– ಗುಂಡಿ | ಕ್ರಿ.ಪೂ. ಎರಡನೇ ಸಹಸ್ರಮಾನ |
| ಕಚ್ | ಸುರ್ ಕೋಟಡ್ | ಮಣ್ಣಿನ ಇಟ್ಟಿಗೆ ಬಳಕೆಯ ಮನೆಗಳು, ಕೋಟೆಗೋಡೆ | ವೃತ್ತಾಕಾರದ ಒಲೆ | ಬಾವಿ, ನೀರಿನ ನಾಲೆ | ಕ್ರಿ.ಪೂ. ಎರಡನೇ ಸಹಸ್ರಮಾನ |
| ರಾಜಸ್ಥಾಸ ಆಗ್ನೇಯ | ಬಾಣ | – | ತಾಮ್ರದ ಕಿಟ್ಟ | – | ಕ್ರಿ.ಪೂ. ಎರಡನೇ ಸಹಸ್ರಮಾನ |
| ಗುಜರಾತ್ | ತಂಬಾವತಿ | ಛತ್ತಿಗೆ ಕಟ್ಟಿಗೆ, ಮಣ್ಣಿನ ಇಟ್ಟಿಗೆಯ | ಒಂದಕ್ಕಿಂತ ಹೆಚ್ಚು | – | ಕ್ರಿ.ಪೂ. |

| | | | | | |
|---|---|---|---|---|---|
| | (ಜೋರ್ವೆ) | ಗೋಡೆ, ನೆಲವನ್ನು ಮಣ್ಣಿನಿಂದ ಗಟ್ಟಿಗೊಳಿಸಲಾಗಿದೆ. | ಒಲೆಗಳು | | ಎರಡನೇ ಸಹಸ್ರಮಾನ |
| ಮಹಾರಾಷ್ಟ್ರ | ಇನಾಂ ಗಾಂವ (ಮಾಳ್ವಾ) | ಚೌಕವಾದ ಮನೆ ಮಣ್ಣಿನಿಂದ ಮೆತ್ತಿದ ಗೋಡೆ, ಮನೆ ಗಿಡ್ಡವಾಗಿರುತ್ತವೆ | ಒಂದಕ್ಕಿಂತ ಹೆಚ್ಚು ಕೊಠಡಿ, ಮನೆಯ ನೆಲವನ್ನು ಸಮಗೊಳಿಸಿ ಹಸುವಿನ ಸಗಣೆ ಯನ್ನು ಹಚ್ಚಲಾಗಿದೆ | ಮನೆಯ ಹಿಂಭಾಗ ಒಲೆಯಿದೆ | ಕ್ರಿ.ಪೂ. ಎರಡನೇ ಸಹಸ್ರಮಾನ |

## ಬೃಹತ್ ಶಿಲಾಯುಗದ ಮನೆಯ ಲಕ್ಷಣಗಳು

## ಉತ್ಖನನದಲ್ಲಿ ದೊರಕಿರುವ ಕೆಲವು ವಸತಿನೆಲೆಗಳಲ್ಲಿನ ಮನೆಗಳ ಲಕ್ಷಣಗಳು

| ರಾಜ್ಯ | ಸ್ಥಳ | ಬಳಸಿದ ವಸ್ತುಗಳ ಮತ್ತು ಲಕ್ಷಣ | ಮನೆಯಲ್ಲಿ ದೊರೆತ ಕುರುಹು | ಮನೆಯ ಇತರೆ ಲಕ್ಷಣಗಳು | ಕಾಲಮಾನ |
|---|---|---|---|---|---|
| ಉತ್ತರ ಪ್ರದೇಶ | ಅತ್‌ರಂಜಿ ಖೇರ್ | ಮಣ್ಣಿನ ಇಟ್ಟಿಗೆಯಿಂದ ಮಣ್ಣಿನಿಂದ ಮೆತ್ತಿದ ಮನೆಗಳು | ಮಡಿಕೆಗಳನ್ನು ಸುಡುವ ಭಟ್ಟಿ | ಮನೆಯಲ್ಲಿ ಒಲೆ ದೊರೆತಿದೆ. ೪.೨೫ ಮೀ. ಅಗಲವಾದ ರಸ್ತೆಯಿದೆ. ಬಟ್ಟೆಯನ್ನು ನೇಯುತ್ತಿದ್ದರು | ಕ್ರಿ.ಪೂ. ಮೊದಲ ಸಹಸ್ರಮಾನ |
| ಉತ್ತರ ಪ್ರದೇಶ | ಭಗವಾನ್ ಪುರ | ವೃತ್ತಾಕಾರದ ಮತ್ತು ಚೌಕಾಕಾರದ ಮನಗಳು, ಗೋಡೆಯನ್ನು ಕಟ್ಟಿಗೆಯಿಂದ ಕಟ್ಟಿ ಮಣ್ಣಿಟಿಂದ ಮೆತ್ತುತ್ತಿದ್ದರು | – | – | ಕ್ರಿ.ಪೂ. ಮೊದಲ ಸಹಸ್ರಮಾನ |

| | | | | | |
|---|---|---|---|---|---|
| ಮಹಾರಾಷ್ಟ್ರ | ನಾಯ್ ಕುಂಡ್ | ಗುಡಿಸಲನ್ನು ಕಟ್ಟಲು ಸುತ್ತಲೂ ಮಾಡಿದ ಕುಳಿಗಳಿವೆ. | ಮನೆಯ ನೆಲವನ್ನು ಮಣ್ಣು ಮತ್ತು ಸುಣ್ಣದಿಂದ ಗಟ್ಟಿಗೊಳಿಸಿದ್ದಾರೆ | – | ಕ್ರಿ.ಪೂ. ಮೊದಲ ಸಹಸ್ರಮಾನ |
| ಧಾರನಿ ಕೋಟ್ | – | ಮನೆಯನ್ನು ಕಟ್ಟಿದ ಕುಳಿಗಳು | – | ಚರಂಡಿಯ ನಾಲೆ ಮತ್ತು ಇಂಗುಗುಂಡಿ ದೊರತಿದೆ. | ಕ್ರಿ.ಪೂ. ಮೊದಲ ಸಹಸ್ರಮಾನ |

## ಆದಿಇತಿಹಾಸಕಾಲದ ಮನೆಯ ಲಕ್ಷಣಗಳು

### ಉತ್ಖನನದಲ್ಲಿ ದೊರಕಿರುವ ಕೆಲವು ಮುಖ್ಯನೆಲೆಗಳ ವಸತಿನೆಲೆಗಳಲ್ಲಿನ ಮನೆಗಳ ಲಕ್ಷಣಗಳು

| ಆಳ್ವಿಕೆ ಕಾಲ | ಬಳಸಿದ ವಸ್ತುಗಳ ಮತ್ತು ಲಕ್ಷಣ | ಮನೆಯಲ್ಲಿ ದೊರೆತ ಕುರುಹು | ಮನೆಯ ಇತರೆ ಲ್ಷಣಗಳು | ಕಾಲಮಾನ |
|---|---|---|---|---|
| ಮೌರ್ಯ | ಇಟ್ಟಿಗೆ ಮತ್ತು ಕಲ್ಲು | – | ಒಂದಕ್ಕಿಂತ ಹೆಚ್ಚು ಕೊಠಡಿಗಳು, ಕೋಟೆ ಭವನ, ರಸ್ತೆ | ಕ್ರಿ.ಪೂ. ಮೊದಲ ಸಹಸ್ರಮಾನ |
| ಶಾತವಾಹನ | ಇಟ್ಟಿಗೆ ಮನೆಯ ಒಳಗೆ ಒಲೆ, ಮುಂಭಾಗದಲ್ಲಿ ವರಾಂಡವಿದೆ. | ಛತ್ತಿಗೆ ಕಟ್ಟಿಗೆ ಮತ್ತು ಹೆಂಚನ್ನು ಜೊಡಿಸಲಾಗಿದೆ<br>ಸುಟ್ಟ ಮತ್ತು ಸೂರ್ಯನ ಶಾಖದಲ್ಲಿ ಸುಟ್ಟ ಇಟ್ಟಿಗೆ ಬಳಕೆ | ಒಂದಕ್ಕಿಂತ ಹೆಚ್ಚು ಕೊಠಡಿಗಳು | ಕ್ರಿ.ಪೂ. ಮೊದಲ ಸಹಸ್ರಮಾನ |
| ಕುಷಾಣ | ಇಟ್ಟಿಗೆ | – | ಒಂದಕ್ಕಿಂತ ಹೆಚ್ಚು ಕೊಠಡಿಗಳು, ಭವನಗಳು | ಕ್ರಿ.ಪೂ. ಮೊದಲ ಸಹಸ್ರಮಾನ |
| ಚೋಳ | ಇಟ್ಟಿಗೆ ಮತ್ತು ಕಲ್ಲಿನ ಕಟ್ಟಡಗಳು | – | ಒಂದಕ್ಕಿಂತ ಹೆಚ್ಚು ಕೊಠಡಿಗಳು | ಕ್ರಿ.ಪೂ. ಮೊದಲ ಸಹಸ್ರಮಾನ |

# ಅಧ್ಯಾಯ ೩

## ಹಂಪಿ ಪರಿಸರದ ವಸತಿನೆಲೆಗಳು

೩.೧ ಹಂಪಿ ಪರಿಸರದ ಭೌಗೋಳಿಕ ಹಿನ್ನಲೆ

೩.೨ ಹಂಪಿ ಪರಿಸರದ ವಸತಿನೆಲೆಗಳು

೩.೩ ವಿದೇಶಿ ಪ್ರವಾಸಿಗರ ಸಾಹಿತ್ಯದಲ್ಲಿನ ಉಲ್ಲೇಖಗಳು

## ಅಧ್ಯಾಯ ೩

## ಹಂಪಿ ಪರಿಸರದ ವಸತಿ ನೆಲೆಗಳು

### ೩.೧ ಹಂಪಿ ಪರಿಸರದ ಭೌಗೋಳಿಕ ಹಿನ್ನೆಲೆ

ಹಂಪಿ ಪರಿಸರವು ಭೌಗೋಳಿಕವಾಗಿ ಸಮೃದ್ಧಿಯನ್ನು ಹೊಂದಿದ ಪ್ರದೇಶ. ಈ ಪರಿಸರದಲ್ಲಿ ಮಾನವನು ವಾಸಿಸಲು ಬೇಕಾದ ಎಲ್ಲಾ ರೀತಿಯ ಸೌಲಭ್ಯಗಳಿವೆ. ಪ್ರಸ್ತುತ ಈ ಪರಿಸರದಲ್ಲಿ ಬೆಟ್ಟಗುಡ್ಡ, ಕಣಿವೆ, ನದಿ, ಕಲ್ಲುಬಂಡೆಗಳು ಸಸ್ಯ ಮತ್ತು ಪ್ರಾಣಿ ಸಂಪತ್ತು ಹಾಗೂ ಖನಿಜಗಳು ಯಥೇಚ್ಚವಾಗಿ ದೊರೆಯುತ್ತವೆ.

ಕಣಶಿಲೆ ಬೆಟ್ಟದಲ್ಲಿ ಕ್ರಿಸ್ಟಲ್ ಲೈನ್‌ಸಿಸ್ಟ್, ಎಪಿಡಿಯೋರಾಯಿಟ್ಸ್ ಗ್ರಾನೈಟ್ ಹಾಗೂ ಅಲಲ್ಲಿ ಡೈಕ್ ಶಿಲೆಗಳು ದೊರೆತಿವೆ. ಮರಳು ಮಿಶ್ರಿತ ಕೆಂಪುಮಣ್ಣು ಮತ್ತು ಜೇಡಿಮಣ್ಣು ಹರಡಿಕೊಂಡಿವೆ. ಕಬ್ಬಿಣದ ಅದಿರು, ಮ್ಯಾಂಗನೀಸ್, ತಾಮ್ರ, ಸತು, ಮಾಗ್ನಸೈಟ್, ಜಿಪ್ಸ್‌ಮ್, ಸುಣ್ಣಕಲ್ಲು, ಬಳಪದ ಕಲ್ಲು, ಹಳದಿ ಮಣ್ಣು, ಕೆಮ್ಮಣ್ಣು ಬಸಾಲ್ಟ್, ಮುಂತಾದ ಖನಿಜ ಸಂಪತ್ತಿವೆ.[೧] ತುಂಗಭದ್ರಾ ನದಿಯು ಕೃಷ್ಣಾ ನದಿಯ ಉಪನದಿಯಾಗಿದ್ದು ಹಂಪಿ ಪರಿಸರದ ಪ್ರಸಿದ್ಧ ಮತ್ತು ಪ್ರಮುಖ ನದಿಯಾಗಿದೆ.[೨]

ಹಂಪಿ ಪರಿಸರವು ಅನೇಕ ಬೆಟ್ಟ ಸಾಲುಗಳಿಂದ ಕೂಡಿದೆ. ಇವುಗಳಲ್ಲಿ ಅನೇಕ ಗುಹೆಗಳು ಹಾಗೂ ಕಡಿದಾದ ಕಣಿಗಳಿವೆ. ಬೆಟ್ಟಗಳಿಗೆ ವಿವಿಧ ಹೆಸರುಗಳನ್ನು ಇರಿಸಲಾಗಿದೆ. ಅವುಗಳು ಹೇಮಕೂಟ, ರತ್ನಕೂಟ, ಮತಂಗ ಪರ್ವತ, ಮಾಲ್ಯವಂತ ಬೆಟ್ಟ, ಋಷ್ಯಮೂಖ ಪರ್ವತ, ಅಂಜನಾದ್ರಿ ಬೆಟ್ಟ, ಜಂಬುನಾಥ ಬೆಟ್ಟ ಮುಂತಾದವುಗಳು. ತುಂಗಭದ್ರಾ ನದಿಯು

ಬೆಟ್ಟ ಕಣಿವೆಗಳ ಮಧ್ಯದಲ್ಲಿ ಹರಿದುಬಂದು ಫಲವತ್ತಾದ ಮಣ್ಣಿನಿಂದ ಕೂಡಿದೆ ಈ ಭೂಮಿಯಲ್ಲಿ ಕಬ್ಬು, ಭತ್ತ, ರಾಗಿ, ಜೋಳ, ಬಾಳೆ, ತೆಂಗು, ಮಾವು, ಬೇವು, ಹುಣಸೆ, ನಿಂಬೆ, ಮುಂತಾದವುಗಳನ್ನು ಬೆಳೆಯಲಾಗುತ್ತದೆ. ವಿವಿಧ ಬಗೆಯ ಹೂವು. ಕರಡಿ, ಚಿರತೆ, ವಿವಿಧ ಜಾತಿಯ ಹಾವು, ನವಿಲು, ತೋಳ, ಕಡವೆ, ಮುಳ್ಳು ಹಂದಿ, ಮೊಲ, ಮುಂತಾದ ಜಾತಿಯ ಪ್ರಾಣಿಗಳಿವೆ. ಈ ಎಲ್ಲಾ ಸಂಪತ್ತುಗಳು ಹಂಪಿ ಪರಿಸರದಲ್ಲಿರುವುದರಿಂದ ಪ್ರಾಗಿತಿಹಾಸಿಕ ಕಾಲದಿಂದ ಇಂದಿನವರೆಗೆ ಮಾನವನು ತನ್ನ ವಾಸಸ್ಥಾನ ಮಾಡಿಕೊಂಡಿರುವನು.

## ೩.೨ ಹಂಪಿ ಪರಿಸರದ ವಸತಿನೆಲೆಗಳು

**ಹಂಪಿ**

ಹಂಪಿಯು (೧೫°೧೫೪೬೧೬ ಉತ್ತರ ಅಕ್ಷಾಂಶ ೭೬°೯೦೨೩೬೦೧ ಪೂರ್ವ ರೇಖಾಂಶ) ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ಚಿಕ್ಕ ಗ್ರಾಮ. ದಕ್ಷಿಣಕ್ಕೆ ಕಡ್ಡಿರಾಮಂಪುರ, ಆಗ್ನೇಯಕ್ಕೆ ಕಮಲಾಪುರ ಮತ್ತು ಹೊಸಪೇಟೆಯ ಈಶಾನ್ಯಕ್ಕೆ ಹಂಪಿಯು ೧೪ ಕಿ.ಮೀ. ದೂರದಲ್ಲಿದೆ. ಹಂಪಿಯು ತುಂಗಭದ್ರಾ ಬಲದಂಡೆಯ ಮೇಲಿದ್ದು ವಿಶ್ವ ಪರಂಪರೆಯ ತಾಣವಾಗಿದೆ. ವಿರೂಪಾಕ್ಷ ದೇವಾಲಯದಿಂದ ಈ ಗ್ರಾಮವು ಜನಪ್ರಿಯತೆಯನ್ನು ಪಡೆದಿದೆ. ದೇವಾಲಯದ ಎಡಭಾಗದಲ್ಲಿ ಹೇಮಕೂಟ ಬೆಟ್ಟ ಮತ್ತು ತೇರು ಬೀದಿಯ ದಕ್ಷಿಣ ಬಲಬದಿಯಲ್ಲಿ ರತ್ನಕೂಟ ಪರ್ವತಗಳಿವೆ. ಪ್ರಸ್ತುತ ದೇವಾಲಯದ ಹಿಂಭಾಗದಲ್ಲಿ ಎಂ.ಪಿ. ಪ್ರಕಾಶನಗರ ಮತ್ತು ಜನತಾ ಮನೆಗಳ ಬಡಾವಣೆಗಳಿವೆ. ೩೪೩.೩೦ ಹೆಕ್ಟೇರ್ ಪ್ರದೇಶವನ್ನು ಹೊಂದಿದ್ದು, ಒಟ್ಟು ೬೩೨ ಮನೆಗಳಿದ್ದು ಅದರಲ್ಲಿ ಒಟ್ಟು ೨,೭೭೭ ಜನಸಂಖ್ಯೆಯಿದೆ.[೩] ಪ್ರಾಗಿತಿಹಾಸ ಕಾಲದಿಂದ ಇಂದಿನವರೆಗೆ ಈ ಪ್ರದೇಶವು ಜನವಸತಿ ಪ್ರದೇಶವಾಗಿದೆ. ಪ್ರಾಗಿತಿಹಾಸ, ಆದಿಇತಿಹಾಸ, ಚಾರಿತ್ರಿಕ ಮತ್ತು ವಿಜಯನಗರ ಕಾಲದ ನೆಲೆಗಳು ಇಲ್ಲಿದ್ದರೂ, ಪ್ರಾಗಿತಿಹಾಸ ಕಾಲದ ಮತ್ತು ಆದಿಇತಿಹಾಸ ಕಾಲದ ಅವಶೇಷಗಳು ಕಡಿಮೆ ಪ್ರಮಾಣದಲ್ಲಿವೆ. ನವಶಿಲಾಯುಗದ ನೆಲೆಯು ಹಂಪಿ ವಿರೂಪಾಕ್ಷ ದೇವಾಲಯದಿಂದ ೧ ಕಿ.ಮೀ. ದೂರದಲ್ಲಿರುವ ವಿಜಯವಿಠಲ ದೇವಾಲಯದ ಈಶಾನ್ಯಕ್ಕಿರುವ ಮೊಸಳಯ್ಯನ ಗುಡ್ಡದಲ್ಲಿದೆ. ಇಲ್ಲಿ ಬೆಟ್ಟದ ಮೂರು ಭಾಗಗಳಲ್ಲಿರುವ ಬಂಡೆಗಳನ್ನು ಗೋಡೆಯ ಹಾಗೆ ಜನರು ಬಳಸಿಕೊಂಡಿದ್ದಾರೆ. ಅದೇ ರೀತಿ ಒಂದು ಕಲ್ಲು ಬಂಡೆಯನ್ನು ಬಳಸಿಕೊಂಡು ಗುಡಿಸಲನ್ನು ಕಟ್ಟಿಕೊಂಡಿರುವ ಕುರುಹುಗಳಿವೆ. ಮತ್ತೊಂದು ಭಾಗದಲ್ಲಿ ಚಿಕ್ಕ ಚಿಕ್ಕ ಕಲ್ಲುಗಳನ್ನು ಮಣ್ಣಿನಲ್ಲಿ

ಮೆತ್ತಿದ ಗೋಡೆಯ ರೀತಿಯ ಭಾಗವಿದೆ. ಈ ನೆಲೆಯ ಒಂದು ಭಾಗದಲ್ಲಿ ಅಡುಗೆ ಮಾಡಿದ ಕುರುಹುಗಳಿವೆ. ಅಲ್ಲಿ ಸುಟ್ಟ ಮಣ್ಣು, ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆ ಚೂರುಗಳು ಹಾಗೂ ಪ್ರಾಣಿಯ ಎಲುಬುಗಳು ದೊರಕಿವೆ.




ನಯಗೊಳಿಸಿದ ಕೊಡಲಿಗಳು, ಹೆರಚುವ ಚಕ್ಕೆಗಳು, ಕಲ್ಲಿನ ಬಾಣದ ತುದಿಗಳು ಹಾಗೂ ವಿವಿಧ ಬಗೆಯ ಕಲ್ಲಿನ ಆಯುಧಗಳು ದೊರೆತಿವೆ. ಬಂಡೆಯ ಮೇಲೆ ಕಾಡುಕೋಣ, ಜಿಂಕೆ, ಹುಲಿ ಮತ್ತು ಗೂಳಿಯ ಕೆಂಪು ಬಣ್ಣದ ಗೀರುಚಿತ್ರಗಳಿವೆ.[೪] ವಿರೂಪಾಕ್ಷ ದೇವಾಲಯದ ಅನತಿ ದೂರದ ಬಲಭಾಗದಲ್ಲಿ, ಎದುರು ಬಸವಣ್ಣ ಎಡಭಾಗದಲ್ಲಿ ಮತಂಗ ಪರ್ವತವಿದೆ. ಅದರ ಪಶ್ಚಿಮ ಭಾಗದಲ್ಲಿ ನವಶಿಲಾಯುಗದ ಮಡಿಕೆ ಚೂರುಗಳು ದೊರಕಿವೆ.[೫] ಹಂಪಿ ಚಕ್ರತೀರ್ಥದ ಈಶಾನ್ಯದ ಬೆಟ್ಟದಲ್ಲಿ ನವಶಿಲಾಯುಗದಿಂದ ಶಿಲಾತಾಮ್ರಯುಗದವರೆಗಿನ ಕಾಲದ ವರ್ಣಚಿತ್ರಗಳಿವೆ. ಅದರಲ್ಲಿ ಮಾನವನು ಆಯುಧ ಹಿಡಿದಿರುವ ಕ್ರಿಸ್-ಕ್ರಾಸ್ ರೀತಿಯ ಚಿತ್ರಗಳಿವೆ. ಈ ಚಿತ್ರಗಳು ಇರುವ ಗುಹೆಯಲ್ಲಿ ಸುಣ್ಣದ ಕಲ್ಲಿನಿಂದ ಮಾಡಿದ ಮೂರ್ತಿಯ ಮುಖದ ಭಾಗ ಮಾತ್ರ ದೊರೆತಿದೆ. ಅದರ ಸುತ್ತಳತೆಯು ೧೧ ಸೆಂ.ಮೀ. ಮತ್ತು ೨೫ ಸೆಂ.ಮೀ. ಮುಖದಲ್ಲಿ ನೇರವಾದ ಮೂಗನ್ನು ಹೊಂದಿದ್ದು ತಲೆಯಿಂದ ಕಿವಿಯವರೆಗೆ ಉಡುಪಿನಿಂದ (ಕವಚ) ಸಂಪೂರ್ಣವಾಗಿ ಮುಚ್ಚಲಾಗಿದೆ. ತಲೆಯ ಮೇಲೆ ಗಂಟು ಮತ್ತು ಅಲೆಗಳ ರೀತಿಯ ಗೆರೆಗಳ ಗುರುತುಗಳಿವೆ.[೬] ಪ್ರಾಗಿತಿಹಾಸ ಕಾಲದ ವಸತಿನೆಲೆಗಳ ಕುರುಹುಗಳು ಕಡಿಮೆ ಪ್ರಮಾಣದಲ್ಲಿ ದೊರೆತರೂ ಸಹ ಕ್ರಮಬದ್ಧವಾಗಿ ಒಂದಾದ ನಂತರ ಒಂದರಂತೆ ದೊರೆತಿರುವ ನೆಲೆಗಳ ಕುರುಹುಗಳು ಪೂರಕವಾದ ಮಾಹಿತಿಯನ್ನು ಒದಗಿಸುತ್ತವೆ. ಆದಕಾರಣ

ಈ ಪ್ರದೇಶದಲ್ಲಿ ಪ್ರಾಗಿತಿಹಾಸ ಕಾಲದಿಂದ ಮಾನವನ ವಸತಿನೆಲೆಗಳು ಮತ್ತು ಅವನು ಬಳಸಿ ಬಿಟ್ಟು ಹೋದ ವಸ್ತುಗಳು ದೊರಕುತ್ತವೆ.

ಆದಿಇತಿಹಾಸದ ಕುರುಹುಗಳು ಇದೇ ನೆಲೆಯಲ್ಲಿ ದೊರೆಯದಿದ್ದರೂ ಸಹ ಈ ಪ್ರದೇಶದ ಅನತಿ ದೂರದಲ್ಲಿರುವ ಕಮಲಾಪುರ ಗ್ರಾಮದಲ್ಲಿ ಮತ್ತು ತುಂಗಭದ್ರಾ ನದಿಯ ಎಡದಂಡೆಯ ಆನೆಗೊಂದಿಯಲ್ಲಿ ದೊರೆತಿವೆ. ತದನಂತರ ಈ ನೆಲೆಯಲ್ಲಿ ಮಧ್ಯಕಾಲಿನ ಇತಿಹಾಸದ ಕುರುಹುಗಳು ದೊರೆತಿವೆ.

ಇತಿಹಾಸ ಕಾಲದ ಕುರುಹುಗಳು ಬಾದಾಮಿ ಚಲುಕ್ಯರ ಕಾಲದಿಂದ ದೊರೆತಿವೆ. ಕ್ರಿ.ಶ. ೬೮೧ರ ಹಂಪಿ ಶಾಸನದಲ್ಲಿ ಪಂಪಾತೀರ್ಥದ ಉಲ್ಲೇಖವಿದೆ.[೭] ಕ್ರಿ.ಶ. ೬೮೬ರ ತಾಮ್ರಫಲಕ ಶಾಸನದಲ್ಲಿ ಪಂಪಾತಟ, ಪಂಪಾ-ತೀರ್ಥ, ವಿರೂಪಾಕ್ಷದೇವ, ಎಂಬ ಉಲ್ಲೇಖಗಳಿವೆ. ಬಾದಾಮಿ ಚಲುಕ್ಯರ ಶಾಸನದಲ್ಲಿ ವಿನಯಾದಿತ್ಯನು ಸೇನಾಶಿಬಿರವನ್ನು ಪಂಪಾತಟದಲ್ಲಿ ಬೀಡುಬಿಟ್ಟಿದ್ದನು. ಈ ಸೇನಾಶಿಬಿರ ತಾತ್ಕಾಲಿಕವಾಗಿರದೆ ಒಂದು ರೀತಿ ರಾಜಧಾನಿಯಂತೆ ನಿರ್ಮಾಣವಾಗಿತ್ತು.[೮] ಕ್ರಿ.ಶ. ೬೮೯ರ ವಿನಯಾದಿತ್ಯನ ಮತ್ತೊಂದು ಶಾಸನದಲ್ಲಿ "ಪಂಪಾತೀರ್ಥದ ಉಲ್ಲೇಖವಿದೆ.[೯] ಬಾದಾಮಿ ಚಲುಕ್ಯರ ಶಾಸನಗಳು ಮಾತ್ರವಲ್ಲದೆ ಅವರ ಕಾಲದ ದೇವಾಲಯವನ್ನು ಸಹ ಗುರುತಿಸಲಾಗಿದೆ. ಹೇಮಕೂಟ ಬೆಟ್ಟದ ವಾಯವ್ಯ ಭಾಗದ ಇಳಿಜಾರಿನಲ್ಲಿ ಇಂದಿನ ವಿರೂಪಾಕ್ಷ ದೇವಾಲಯದ ದಕ್ಷಿಣ ದಿಕ್ಕಿನ ಪ್ರವೇಶದ್ವಾರ ಹಾಗೂ ತ್ರಿಕೂಟ ದೇವಾಲಯದ ಮಧ್ಯದಲ್ಲಿ ಒಂದು ಸಣ್ಣ ದೇವಾಲಯವಿದೆ. ಇದನ್ನು ಮರುಳುಕಲ್ಲಿನಿಂದ ಕಟ್ಟಿದ್ದು ಇತರ ದೇವಾಲಯಗಳಿಗಿಂತ ಭಿನ್ನವಾಗಿದೆ. ಈ ಮರಳುಗಲ್ಲು ಸವೆದಿರುವುದರಿಂದ ಮಧ್ಯಯುಗೀನ ಕಾಲದಲ್ಲಿ ಗಾರೆಯ ಲೇಪನ ಮಾಡಲಾಗಿದೆ. ಈ ದೇವಾಲಯವನ್ನು ಬಾದಾಮಿ ಚಲುಕ್ಯರ ಕಾಲದ ದೇವಾಲಯ ಎಂದು ಅದರ ವಾಸ್ತು ಶೈಲಿಯ ಆಧಾರದಲ್ಲಿ, ಮುಖ್ಯವಾಗಿ ಅಧಿಷ್ಠಾನ ಮಾದರಿಯಿಂದ, ಇದನ್ನು ಕ್ರಿ.ಶ. ೮ನೇ ಶತಮಾನದ್ದೆಂದು ನಿರ್ಧರಿಸಲಾಗಿದೆ.[೧೦]

ಹೇಮಕೂಟದ ಉತ್ತರಕ್ಕೆ ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಿತವಾದ ದುರ್ಗಾ ದೇವಾಲಯ ಮತ್ತು ಮನ್ಮಥ ಕೊಂಡವಿದೆ.[೧೧] ಇದು ಕ್ರಿ.ಶ. ೮ ಮತ್ತು ೯ನೇ ಶತಮಾನಕ್ಕೆ ಸೇರಿದ್ದಾಗಿದೆ. ಕ್ರಿ.ಶ. ೯-೧೦ನೇ ಶತಮಾನಕ್ಕೆ ಸೇರಿದ ದುರ್ಗಾದೇವಾಲಯವನ್ನು ಕೆಂಪು ಮರಳು ಕಲ್ಲಿನಿಂದ ಕಟ್ಟಲಾಗಿದೆ. ಈ ದೇವಾಲಯವು ವಿರೂಪಾಕ್ಷ ದೇವಾಲಯದ ಉತ್ತರಕ್ಕಿದೆ. ಪೂರ್ವ ದಿಕ್ಕಿಗೆ ಮುಖ ಮಾಡಿದ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ನಾಲ್ಕು ಕೈಗಳನ್ನು ಹೊಂದಿದ ಮಹಿಷಮರ್ಧಿನಿಯ

ಶಿಲ್ಪವಿದೆ. ಇವಳ ಮೇಲಿನ ಎರಡು ಕೈಗಳು ಶಂಖ ಮತ್ತು ಚಕ್ರಗಳನ್ನು ಹೊಂದಿದೆ. ಕೆಳಗಿನ ಎರಡು ಕೈಗಳನ್ನು ತ್ರಿಶೂಲದಿಂದ ಕೋಣವನ್ನು ಸಂಹಾರ ಮಾಡುವ ರೀತಿಯಲ್ಲಿ ತೋರಿಸಲಾಗಿದೆ. ಮುಂದಿರುವ ನವರಂಗದಲ್ಲಿ ದುರ್ಗಾದೇವಿಯ ವಾಹನವಾದ ಸಿಂಹವನ್ನು ಪ್ರತಿಷ್ಠಾಪಿಸಲಾಗಿದೆ.

ಕ್ರಿ.ಶ. ೧೦ನೇ ಶತಮಾನದ ಮತ್ತೊಂದು ದೇವಾಲಯವು ದುರ್ಗಾ ದೇವಾಲಯದ ದಕ್ಷಿಣಕ್ಕಿದೆ. ಇದು ಪೂರ್ವಾಭಿಮುಖವಾಗಿದ್ದು, ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ದೇವಾಲಯದ ಅಧಿಷ್ಠಾನ, ಅಂತರಾಳ, ನವರಂಗ, ಕಪೋತ ಮುಂತಾದ ರಚನಾ ವಿನ್ಯಾಸದಿಂದ ದೇವಾಲಯವನ್ನು ೧೦ನೇ ಶತಮಾನದ್ದೆಂದು ಗುರುತಿಸಲಾಗಿದೆ. ಕ್ರಿ.ಶ. ೧೧ನೇ ಶತಮಾನಕ್ಕೆ ಸೇರಿದ ನಂದಿಯನ್ನು ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಲಾಗಿದೆ. ಹೇಮಕೂಟ ದೇವಾಲಯದ ಉತ್ತರ ಗೋಪುರದ್ವಾರದ ಬಳಿಯಲ್ಲಿ ಪೂರ್ವಾಭಿಮುಖವಾಗಿರುವ ಒಂದು ಚಿಕ್ಕ ದೇವಾಲಯವಿದೆ. ಇದರಲ್ಲಿ ಗರ್ಭಗೃಹ ಮತ್ತು ಅಂತರಾಳ ಹಾಗೂ ಮುಂಭಾಗದಲ್ಲಿ ಎರಡು ಕಂಬಗಳ ಅಂಕಣವಿದೆ. ಅಧಿಷ್ಠಾನವು ದುರ್ಗಾ ದೇವಾಲಯದ ರೀತಿಯಲ್ಲಿದೆ. ಆದರೆ ಯಾವ ದೇವರ ದೇವಾಲಯ ಎಂಬುದು ಸ್ಪಷ್ಟವಿಲ್ಲ. ಇದರ ಕಾಲವನ್ನು ಕ್ರಿ.ಶ. ೧೦ನೇ ಶತಮಾನ ಎಂದು ನಿರ್ಧರಿಸಲಾಗಿದೆ.

ಮಲ್ಲಿಕಾರ್ಜುನ ದೇವಾಲಯವು ದುರ್ಗಾ ದೇವಾಲಯದ ಉತ್ತರಕ್ಕಿದೆ. ಪೂರ್ವಕ್ಕೆ ಮುಖ ಮಾಡಿರುವ ದೇವಾಲಯದಲ್ಲಿ ಗರ್ಭಗೃಹ ಮತ್ತು ಅಂತರಾಳವಿದೆ. ಇಂದು ದೇವಾಲಯ ಸಂಪೂರ್ಣವಾಗಿ ನಾಶವಾಗಿದೆ. ಇದನ್ನು ರಾಷ್ಟ್ರಕೂಟರ ಕಾಲದ ದೇವಾಲಯವೆಂದು ಗುರುತಿಸಲಾಗಿದೆ.[೧೨] ರಾಷ್ಟ್ರಕೂಟರ ನಂತರ ಕಲ್ಯಾಣ ಚಾಲುಕ್ಯರ ಸಾಮಂತ ಇರಿವನೊಳಂಬಾದಿ ರಾಜನ ಕ್ರಿ.ಶ. ೧೦೧೪ರ ಗೋನಾಳ ಶಾಸನವು ಹಂಪಿಯನ್ನು ಪಂಪಾತೀರ್ಥ ಎಂದು ಹಾಗೂ ಪಂಪಾಪುರವೆಂದು ಕ್ರಿ.ಶ. ೧೦೧೮ ಬಾಗಳಿ ಶಾಸನವು ಉಲ್ಲೇಖಿಸಿದೆ.[೧೩] ಕ್ರಿ.ಶ. ೧೦೪೬ ಶಾಸನವು ವಿರೂಪಾಕ್ಷ ದೇವಾಲಯದ ಮುಖ್ಯ ದೇವತೆಯ ಹೆಸರನ್ನು 'ವಿರೂಪಾಕ್ಷ ದೇವ' ಎಂದು ಉಲ್ಲೇಖಿಸಲಾಗಿದೆ. ಕ್ರಿ.ಶ. ೧೦೭೬ರ ಕಲ್ಯಾಣ ಚಾಲುಕ್ಯ ರಾಜ ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಎಂಬತ್ತು ಲೊಕ್ಕಿ ಗದ್ಯಾಣಗಳನ್ನು ಮಠದಲ್ಲಿ ಪುರಾಣ ಹೇಳುವವರಿಗೆ ಪ್ರಧಾನ ದಂಡನಾಯಕನು ಸೋಮೇಶ್ವರ ಭಟ್ಟೋಪಾಧ್ಯಾಯರಿಗೆ ಪ್ರತಿ ವರ್ಷ ಕೊಡಲಾಗುತ್ತದೆ ಎಂಬ ವಿವರವಿದೆ. ವಿರೂಪಾಕ್ಷ ದೇವಾಲಯದ ಹಿಂಭಾಗದ ದುರ್ಗಾ ದೇವಾಲಯ ಶಾಸನದಲ್ಲಿ ಕುರುಗೋಡನ್ನು ಆಳುತ್ತಿದ್ದ ೨ನೇ ರಾಚಮಲ್ಲನು ಹಂಪಿತೀರ್ಥದ ವಿರೂಪಾಕ್ಷದೇವ, ಹಂಪಾದೇವಿ ಮತ್ತು ಭೈರವ ದೇವರಿಗೆ ದಾನ ಕೊಟ್ಟ ಉಲ್ಲೇಖವಿದೆ. ಕ್ರಿ.ಶ. ೧೧೬೪ ಕಲಚುರಿ

ಬಿಜ್ಜಳನ ಕಾಲದ ಶಾಸನವು ಕುಕುನೂರಿನ ಮಲ್ಲಿಕಾರ್ಜುನ ಗ್ರಾಮವನ್ನು ಹಂಪೆಯ ಹದಿನೈದು ಜನ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಸೂರ್ಯಗ್ರಹಣದಂದು ಹಂಪೆಯ ವಿರೂಪಾಕ್ಷದೇವನಿಗೆ ದಾನ ಕೊಟ್ಟ ಉಲ್ಲೇಖವಿದೆ.[೧೪] ಕ್ರಿ.ಶ. ೧೧೯೯ರ ಶಾಸನದಲ್ಲಿ ವಿರೂಪಾಕ್ಷ ದೇವಾಲಯಕ್ಕೆ ದಾನ ನೀಡಿದನೆಂದು ಉಲ್ಲೇಖಿಸಲಾಗಿದೆ.[೧೫] ಹೇಮಕೂಟದ ಗೋಪುರ ದ್ವಾರದ ನೈರುತ್ಯದಲ್ಲಿ ೧೨ನೇ ಶತಮಾನದ ಚಿಕ್ಕ ದೇವಾಲಯವಿದ್ದು ಅದರಲ್ಲಿ ಗರ್ಭಗೃಹ, ಅಂತರಾಳ ಮತ್ತದರ ಮುಂಭಾಗದಲ್ಲಿ ಚಿಕ್ಕ ಅಂಕಣವಿದೆ. ಆದರೆ ಅದರ ಸುತ್ತಲೂ ನಂತರ ಕಾಲದ ಪ್ರದಕ್ಷಿಣಾಪಥವಿದೆ.

೧೨ನೇ ಶತಮಾನದ ಕಣಶಿಲೆಯಲ್ಲಿ ನಿರ್ಮಿಸಿದ ಮೂಲವಿರೂಪಾಕ್ಷ ದೇವಾಲಯವು ಹೇಮಕೂಟದ ಬೆಟ್ಟದಲ್ಲಿದೆ. ಇದರಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಳಿವೆ. ಇದರ ಮುಂದೆ ನೈಸರ್ಗಿಕ ಕೊಂಡವಿದೆ. ಇಮ್ಮಡಿ ರಾಚಮಲ್ಲೇಶ್ವರ ದೇವಾಲಯವು ದುರ್ಗಾ ದೇವಾಲಯದ ಉತ್ತರಕ್ಕೆ ಮತ್ತು ಮನ್ಮಥಕೊಂಡದ ಪಶ್ಚಿಮಕ್ಕಿದೆ. ದೇವಾಲಯವು ಪೂರ್ವಾಭಿಮುಖವಾಗಿದ್ದು, ಇದರಲ್ಲಿ ಗರ್ಭಗೃಹ ನವರಂಗ ಮತ್ತು ಅಗಲವಾದ ಅಂಕಣವಿದೆ. ದಕ್ಷಿಣ ಭಾಗದಲ್ಲಿ ನವರಂಗ ಮುಂದುವರೆದು ಅದಕ್ಕೆ ಹೊಂದಿಕೊಂಡಂತೆ ಅಂತರಾಳ ಮತ್ತು ಗರ್ಭಗೃಹಗಳು ದಕ್ಷಿಣಕ್ಕಿದೆ. ದೇವಾಲಯದ ಕಾಲವನ್ನು ಕ್ರಿ.ಶ. ೧೧೯೯ ಎಂದು ನಿರ್ಧರಿಸಲಾಗಿದೆ. ಕುರುಗೋಡನ್ನು ಆಳುತ್ತಿದ್ದ ಕಲಿದೇವರಸ ಇಮ್ಮಡಿ ರಾಚಮಲ್ಲೇಶ್ವರನು ಈ ದೇವಾಲಯವನ್ನು ನಿರ್ಮಿಸಿದನು ಎಂದು ಕ್ರಿ.ಶ. ೧೧೯೯ ಶಾಸನದಲ್ಲಿ ಉಲ್ಲೇಖಿತವಾಗಿದೆ.[೧೬] ವಿರೂಪಾಕ್ಷ ದೇವರಿಗೆ ಸೇವೆಗಾಗಿ ಹಣವನ್ನು ದಾನ ಮಾಡಲಾಗಿದೆ ಎಂದು ಕ್ರಿ.ಶ. ೧೨೩೭ರ ಶಾಸನವು ಉಲ್ಲೇಖಿಸುತ್ತದೆ.[೧೭]

ಕ್ರಿ.ಶ. ೧೩೩೯ರಲ್ಲಿ ಹೊಯ್ಸಳ ವೀರಬಲ್ಲಾಳನು ಹಂಪಿಗೆ ಭೇಟಿ ನೀಡಿ ತನ್ನ ಮಗ ವಿರೂಪಾಕ್ಷ ಬಲ್ಲಾಳನನ್ನು ಹಂಪೆಯ ಒಡೆಯನನ್ನಾಗಿ ನೇಮಿಸಿ ಹಂಪೆಯನ್ನು ವಿರೂಪಾಕ್ಷ ಹೊಸಪಟ್ಟಣವೆಂದು ಹೆಸರಿಸಿದನು.[೧೮] ನಂತರ ೩ನೇ ಬಲ್ಲಾಳನು ಇಲ್ಲಿ ನಗರವನ್ನು ನಿರ್ಮಿಸಿ ಅದಕ್ಕೆ ವಿರೂಪಾಕ್ಷಪಟ್ಟಣ ಅಥವಾ ಹೊಸಪಟ್ಟಣ ಎಂದು ಹೆಸರಿಸಿದನು.[೧೯] ಈ ಹೊಸಪಟ್ಟಣ ಅಥವಾ ವಿರೂಪಾಕ್ಷಪಟ್ಟಣವನ್ನು ೩ನೇ ಬಲ್ಲಾಳನು ಮಗನಾದ ವೀರ ಬಲ್ಲಾಳನು ವೀರ-ವಿಜಯ-ವಿರೂಪಾಕ್ಷಪುರ ಎಂದು ಹೆಸರಿಸಿದನು.[೨೦]

ವಿರೂಪಾಕ್ಷ ದೇವಾಲಯದ ಉತ್ತರಕ್ಕೆ ಭುವನೇಶ್ವರಿಯ ದೇವಾಲಯವಿದೆ. ಇದನ್ನು ಕ್ಲೊರೈಟಿಕ್ ಸಿಸ್ಟ್ ಕಲ್ಲಿನಿಂದ ಕಟ್ಟಲಾಗಿದೆ. ದಕ್ಷಿಣಕ್ಕೆ ಮುಖ ಮಾಡಿದ ದೇವಾಲಯದಲ್ಲಿ ಗರ್ಭಗೃಹ ಮತ್ತು ನವರಂಗವಿದೆ. ಗರ್ಭಗೃಹವು ಕ್ರಿ.ಶ. ೧೩ನೇ ಶತಮಾನದ ಹೊಯ್ಸಳರ

ವಾಸ್ತುಶೈಲಿಯಲ್ಲಿದೆ. ಮನ್ಮಥಕೊಂಡದ ಉತ್ತರಕ್ಕೆ ೧೩ನೇ ಶತಮಾನಕ್ಕೆ ಸೇರಿದ ಉತ್ತರಾಭಿಮುಖ ದೇವಾಲಯದಲ್ಲಿ ಗರ್ಭಗೃಹ ಮತ್ತು ಅಂತರಾಳವಿದೆ.[೨೧] ವಿಜಯನಗರ ಪೂರ್ವ ಕಾಲದ ಶಾಸನ ಉಲ್ಲೇಖದ ಜೊತೆಗೆ ದೇವಾಲಯದ ಕುರುಹುಗಳು ಸಹ ದೊರೆತಿವೆ. ಹೇಮಕೂಟದಲ್ಲಿ ಎಂಟು ದೇವಾಲಯಗಳಿವೆ. ಅದರಲ್ಲಿ ಮೂರು ದೇವಾಲಯಗಳು ವಿಜಯನಗರ ಪೂರ್ವ ಕಾಲಕ್ಕೆ ಸೇರಿದವುಗಳಾಗಿವೆ. ವಿರೂಪಾಕ್ಷ ದೇವಾಲಯ ಹತ್ತಿರದಲ್ಲಿ ಚಿಕ್ಕ ಪ್ರಮಾಣದಲ್ಲಿ ಹೊಯ್ಸಳರ ಕಾಲದ ನೆಲೆಯು ದೊರೆತಿದೆ. ಹೇಮಕೂಟದ ಐದು ದೇವಾಲಯಗಳು ೧೪ನೇ ಶತಮಾನಕ್ಕೆ ಸೇರಿವೆ. ಇಲ್ಲಿನ ಒಂದು ಶಾಸನವು ೧೪ನೇ ಶತಮಾನದಲ್ಲಿ ಆಳುತ್ತಿದ್ದ ಕಂಪಿಲನ ಬಗೆಗೆ ತಿಳಿಸುತ್ತದೆ. ಮನ್ಮಥಕೊಂಡದ ಹತ್ತಿರವಿರುವ ದೇವಾಲಯಗಳು ೧೩–೧೪ನೇ ಶತಮಾನಕ್ಕೆ ಸೇರಿವೆ.[೨೨]

ಪಂಪಾಪುರದ ಅಧಿದೇವತೆಯಾದ ವಿರೂಪಾಕ್ಷನ ಉಲ್ಲೇಖವು ೧೧ನೇ ಶತಮಾನದಲ್ಲಿ ಆಳುತ್ತಿದ್ದ ಕಳಚೂರಿ ಅರಸ ಬಿಜ್ಜಳನ ಕ್ರಿ.ಶ. ೧೧೬೩ರ ಶಾಸನವು ಹಂಪಿ ವಿರೂಪಾಕ್ಷ ಎಂದು ಮೊದಲ ಬಾರಿಗೆ ಉಲ್ಲೇಖಿಸಿದೆ. ಕ್ರಿ.ಶ. ೧೨ನೇ ಶತಮಾನದಲ್ಲಿ ಕನ್ನಡದ ಪ್ರಸಿದ್ಧ ಕವಿ ಹರಿಹರನು ವಿರೂಪಾಕ್ಷನನ್ನು ಗಮನದಲ್ಲಿಟ್ಟುಕೊಂಡು "ಗಿರಿಜಾ ಕಲ್ಯಾಣ" ರಚಿಸಿದ್ದಾನೆ. ಇವನು ತನ್ನ 'ಪಂಪಾಶತಕ'ದಲ್ಲಿ ವಿರೂಪಾಕ್ಷನನ್ನು ಹಂಪಿಯರಸ ಎಂದೇ ಸಂಬೋಧಿಸಿದ್ದಾನೆ. ರಾಘವಾಂಕನು ತನ್ನ "ಹರಿಶ್ಚಂದ್ರ" ಕಾವ್ಯದಲ್ಲಿ ಪಂಪಾ–ವಿರೂಪಾಕ್ಷ ಮತ್ತು ಪಂಪಾಂಬಿಕೆಯ ಸ್ತುತಿಯನ್ನು ಮಾಡಿದ್ದಾನೆ.[೨೩]

ಹೇಮಕೂಟದಲ್ಲಿರುವ ತ್ರಿಕೂಟ ದೇವಾಲಯವನ್ನು (ಪಾಂಫಸನ) ಕಲಿಂಗ ರೀತಿಯಲ್ಲಿ ಕಟ್ಟಲಾಗಿದೆ. ದೇವಾಲಯದ ಕಂಬದ ಮೇಲಿನ ಶಾಸನವು ವೀರ ಕಂಪಿಲದೇವನ ಮಗ ಮುಮ್ಮಡಿ ಸಿಂಗಯ ನಾಯಕ ಶಿವಾಲಯ ಮತ್ತು ಮೂರು ಭಾಗಗಳ ಲಿಂಗವನ್ನು ಪ್ರತಿಷ್ಠಾಪಿಸಿದ ಉಲ್ಲೇಖವಿದೆ. ಉತ್ತರಕ್ಕೆ ಮುಖ ಮಾಡಿದ ತ್ರಿಕೂಟ ದೇವಾಲಯವು ಮೂರು ಗರ್ಭಗೃಹಗಳನ್ನು ಹೊಂದಿದೆ. ಪ್ರತಿ ಗರ್ಭಗೃಹಕ್ಕೆ ಅಂತರಾಳವಿದೆ. ಎಲ್ಲಾ ಗರ್ಭಗೃಹಗಳಿಗೆ ಹೊಂದಿಕೊಂಡಿರುವಂತೆ ನವರಂಗವಿದೆ; ಉತ್ತರಕ್ಕೆ ಮುಖಮಂಟಪವಿದೆ. ಕ್ರಿ.ಶ. ೧೪ನೇ ಶತಮಾನದ ದೇವಾಲಯವಿದಾಗಿದೆ.

ಮೇಲೆ ಉಲ್ಲೇಖಿಸಿದ ದೇವಾಲಯದ ಆಗ್ನೇಯಕ್ಕೆ ಮೂರು ಗರ್ಭಗೃಹಗಳು ಅದರ ಮುಂದೆ ೧೪ನೇ ಶತಮಾನದ ಉತ್ತರಾಭಿಮುಖ ತ್ರಿಕೂಟ ದೇವಾಲಯವಿದೆ. ಅದರಲ್ಲಿ ಅಂತರಾಳಗಳು, ನವರಂಗ ಮತ್ತು ಮುಖಮಂಟಪಗಳಿವೆ. ೧೪ನೇ ಶತಮಾನದ ಜೋಡಿ

ದೇವಾಲಯವು ಪೂರ್ವಾಭಿಮುಖವಾಗಿದೆ. (Twin Temples) ಇದು ಕಲಿಂಗ ಶೈಲಿಯಲ್ಲಿದ್ದು ಹೇಮಕೂಟದ ತ್ರಿಕೂಟ ದೇವಾಲಯದ ವಾಯವ್ಯ, ದಕ್ಷಿಣ ಮತ್ತು ಉತ್ತರಕ್ಕೆ ಇವೆ.

**ದಕ್ಷಿಣ ದೇವಾಲಯ**

ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಗರ್ಭಗೃಹದ ದ್ವಾರಕ್ಕೆ ಕೆಂಪು ಬಣ್ಣದ ಲೇಪನವಿದೆ. ದಕ್ಷಿಣ ದೇವಾಲಯದ ಗರ್ಭಗೃಹವು ಚೌಕವಾಗಿದೆ.

**ಉತ್ತರ ದೇವಾಲಯ**

ಗರ್ಭಗೃಹ, ಅಂತರಾಳ, ನವರಂಗ, ಮತ್ತು ಮುಖಮಂಟಪವಿದೆ. ತ್ರಿಕೂಟ ದೇವಾಲಯದ ಈಶಾನ್ಯಕ್ಕೆ ಶಿವ ದೇವಾಲಯವಿದೆ. ಇದನ್ನು ಉತ್ತರ–ದಕ್ಷಿಣವಾಗಿ ಕಟ್ಟಲಾಗಿದೆ. ದೇವಾಲಯದ ದ್ವಾರವು ಪೂರ್ವ ಮತ್ತು ಪಶ್ಚಿಮಕ್ಕಿದೆ ಹಾಗೂ ಇದರಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗವಿದೆ.

ದ್ರಾವಿಡ ಶೈಲಿಯ ೧೪ನೇ ಶತಮಾನದ ತ್ರಿಕೂಟ ದೇವಾಲಯದ ವಾಯವ್ಯಕ್ಕೆ ಮತ್ತೊಂದು ತ್ರಿಕೂಟ ದೇವಾಲಯವಿದೆ. ಇದು ಮೂರು ಗರ್ಭಗೃಹ, ಅದರ ಮುಂದೆ ಮೂರು ಅಂತರಾಳಗಳಿದ್ದು, ಅವು ನವರಂಗಕ್ಕೆ ತೆರೆದುಕೊಳ್ಳುತ್ತವೆ. ಅದರ ಮುಂಭಾಗದಲ್ಲಿ ಮುಖಮಂಟಪವಿದೆ. ತ್ರಿಕೂಟ ದೇವಾಲಯದ ಪಶ್ಚಿಮಕ್ಕೆ ಮತ್ತೊಂದು ದೇವಾಲಯವಿದೆ. ಈ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಉತ್ತರಕ್ಕೆ ಮುಖಮಂಟಪವಿದೆ.[೨೪]

ವಿಜಯನಗರ ಕಾಲಕ್ಕಿಂತ ಪೂರ್ವದಲ್ಲಿ ದೊರೆತ ಕುರುಹುಗಳು ಹಂಪಿ ಪ್ರದೇಶದಲ್ಲಿ ಜನ ವಸತಿಯಿತ್ತೆಂದು ಮೇಲೆ ಉಲ್ಲೇಖಿಸಿದ ಎಲ್ಲಾ ಆಧಾರಗಳು ದೃಢಪಡಿಸುತ್ತವೆ. ವಸತಿನೆಲೆಗಳಿಗೆ ಸಂಬಂಧಿಸಿದ ಕಟ್ಟಡಗಳ ಕುರುಹುಗಳು ಮತ್ತು ದಿನ ಬಳಕೆಯ ವಸ್ತುಗಳು ಅಲ್ಪ ಪ್ರಮಾಣದಲ್ಲಿ ದೊರೆತಿವೆ. ಇವರ ಕಾಲದ ಕಟ್ಟಡಗಳು ಮುಂದೆ ವಿಜಯನಗರ ಕಾಲದಲ್ಲಿ ಪರಿವರ್ತನೆಯಾಗಿರುವ ಸಾಧ್ಯತೆಗಳಿವೆ. ದೇವಾಲಯ ಮತ್ತು ಶಾಸನಗಳ ಆಧಾರದ ಮೂಲಕ ಇಲ್ಲಿ ವಿಜಯನಗರ ಪೂರ್ವಕಾಲದಲ್ಲಿಯೂ ಜನ ವಸತಿ ಪ್ರದೇಶವಾಗಿತ್ತು ಎಂದು ಹೇಳಬಹುದು.

ವಿಜಯನಗರ ಸಾಮ್ರಾಜ್ಯವನ್ನು ಕ್ರಿ.ಶ. ೧೩೩೬ರಲ್ಲಿ ಹರಿಹರ ಮತ್ತು ಬುಕ್ಕ ಸ್ಥಾಪಿಸಿದರು. ಒಂದನೇ ಬುಕ್ಕನು ಕ್ರಿ.ಶ. ೧೩೭೮ರಲ್ಲಿ ಹೇಮಕೂಟ ಬೆಟ್ಟ ಪ್ರದೇಶವನ್ನು ಸುತ್ತುವರೆದು ರಾಜಧಾನಿ ಪಟ್ಟಣದ ಸುತ್ತ ಕೋಟೆಯನ್ನು ನಿರ್ಮಿಸಿದನು.[೨೫] ಈ ಕೋಟೆಯನ್ನು

ನಿರ್ಮಿಸಿದ ಉಲ್ಲೇಖವು ಜೈನ ಬಸದಿಯ ಸಮೀಪದ ಸೋಮವಾರ ಬಾಗಿಲಿನ ಉತ್ತರದ ಬೆಟ್ಟದ ಮೇಲಿನ ಬಂಡೆಯ ಶಾಸನವು ದಾಖಲಿಸಿದೆ. ಅದರಲ್ಲಿ "ಶ್ರೀ ವೀರಬುಕ್ಕರಾಯನ ವಿಜಯನಗರಪಟ್ಟಣದ ಮೂಡಣ ಸೋಮವಾರದ ಬಾಗಿಲ ಬಡಗಣ ಬೆಟ್ಟ ಸೋಮಯ ದೇವರ ಕೊತ್ತಳ ಎಂದು ದಾಖಲಿಸಿದೆ. ಸಿಂಘಾರದ ಹೆಬ್ಬಾಗಿಲನ್ನು ಉಲ್ಲೇಖಿಸುವ ಶಾಸನ[೨೬] ಈ ಕೆಳಗಿನಂತಿದೆ.

"ಶ್ರೀ ವೀರ ಬುಕ್ಕರಾಯನ ವಿಜಯ
ನಗರ ಪಟ್ಟಣದ ಮೂಡಣ ಸಿಂ
ಘಾರದ ಹೆಬ್ಬಾಗಿಲ ಬಡಗಣ ಮೂಲೆ
ಯ ಅರೆಯ ಮೇಲಣ ಆನೆಯ ಗೋಂದಿಯ ಕೊತ್ತಣಕ್ಕೆ ಮಂಗಳಮ
ಹಾ ಶ್ರೀ ಶ್ರೀ ................."

ಲಕ್ಕಣದಂಡೇಶ ತನ್ನ "ಶಿವತತ್ವ ಚಿಂತಾಮಣಿ"ಯಲ್ಲಿ ಉಲ್ಲೇಖಿಸಿದ ಹಾಗೆ ಪ್ರೌಢದೇವರಾಯನು ವಿರೂಪಾಕ್ಷಪುರದ ಬೆಳವಣಿಗೆಯಲ್ಲಿ ಆಸಕ್ತಿ ವಹಿಸಿದ್ದನು. ಕ್ರಿ.ಶ. ೧೫೧೦ರ ಶಾಸನದಲ್ಲಿ ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕೋತ್ಸವ ನೆನಪಿಗಾಗಿ ಸಿಂಗನಾಯಕಹಳ್ಳಿಯನ್ನು ವಿರೂಪಾಕ್ಷ ದೇವಾಲಯಕ್ಕೆ ದತ್ತಿ ಬಿಟ್ಟನು ಮತ್ತು ವಿರೂಪಾಕ್ಷ ದೇವಾಲಯಕ್ಕೆ ಮಹಾಮಂಟಪ ಹಾಗೂ ರಾಯ ಗೋಪುರವನ್ನು ನಿರ್ಮಿಸಿದನು. ವಿರೂಪಾಕ್ಷ ದೇವಾಲಯದ ಮುಂಭಾಗದಿಂದ ಎದುರು ಬಸವಣ್ಣನ ಮಂಟಪದವರೆಗೆ "ಪಂಪಾರಥಬೀದಿ", ತೇರುಬೀದಿ ಮತ್ತು ಹಂಪೆ ಬಜಾರ್ ಎಂದು ಕರೆಯಲಾಗುತ್ತದೆ. ಈ ವಿರೂಪಾಕ್ಷ ಬಜಾರ್ ದೇವಾಲಯದಷ್ಟೇ ಪುರಾತನವಾದದ್ದು ಅದರ ಉದ್ದ ೭೨೦ ಮೀ. ದೇವಾಲಯದ ಹತ್ತಿರ ಅದರ ಅಗಲ ೩೦ ಮೀ. ಬಜಾರ್‌ನ ಕೊನೆಯ ಭಾಗವಾದ ಎದುರು ಬಸವ ಭಾಗದಲ್ಲಿ ೩೮ ಮೀ. ಅಗಲವಿದೆ.[೨೭]

ಪ್ರೌಢದೇವರಾಯನು ವಿರೂಪಾಕ್ಷ ದೇವಾಲಯದ ಮುಂಭಾಗದಲ್ಲಿನ ಬೀದಿಯನ್ನು ಸ್ವಚ್ಛಗೊಳಿಸಿ ವಿಶಾಲಗೊಳಿಸಿದ್ದನೆಂದು ಲಕ್ಕಣ್ಣ ದಂಡೇಶ ತನ್ನ "ಶಿವತತ್ವ ಚಿಂತಾಮಣಿ"ಯಲ್ಲಿ ಈ ರೀತಿಯಲ್ಲಿ ಉಲ್ಲೇಖಿಸಿರುವನು.

"ತ್ರಿಪುರ ವಿಜಯಿತ ವಿರೂಪಾಕ್ಷನ ಮನೋರಥಕ್ಕೆ
ಸುಪಥವಾದುದು ದೇವರಾಜೇಂದ್ರನುದಯದಿಂ

ವಿಪುಳೆಯೊಳು ದೃಷ್ಟವಿದೆಯಿಂದೆಂಬ ಮಾಳ್ಕೆಯಿಂದ ಪಂಪಾಪುರದೊಳನುದಿನಂ

ಅಪರಿಮಿತಗೋಪುರಂಗಳ ಮಧ್ಯಮೀತಿಯಂ

ರಿಪುಕಂಟರಂಗಳಂ ಸವರುವಂದವಿ ಸವರಿ

ಸುಪವಿತ್ರವೆನಿಸಿದಂ ರಥಪಥವನರುವವರ ಚರಣಾಂಬುಜಕ್ಕೆ ಶರಣ" ಎಂದು ರಥದ ರಸ್ತೆಯ/ಮಾರ್ಗವನ್ನು ಇದರಲ್ಲಿನ ಇನ್ನೊಂದು ಪದ್ಯವು ಕಲ್ಲು ಮುಳ್ಳುಗಳನ್ನು ಸ್ವಚ್ಛಗೊಳಿಸಿ ಬೀದಿಯಾಗಿ ನಿರ್ಮಿಸಿದ ವಿಶೇಷತೆಯನ್ನು ವರ್ಣಿದೆ.

"ಪಂಪಾಪತಿಯ ಮನೋರಥರೂಪ ತಾನಾದ

ಪೆಂಪಂ ಜಗಕ್ಕರೂಪಿ ತೋರಿದನೋ ಎಂಬಂತೆ

ಸೊಂಪೇರಿ ಮೆರೆಸುವ ವಿರೂಪಾಕ್ಷನತುಳ ರಥ ಪಂಪಾಂಬಿಕಾರಥವನ್ನು

ಝುಂಪಳಿಪ ನಾನು ರಸದ ಗಣಾಧಿಪ ರಥವ

ಗುಂಪರಿವರಳಲ್ಲವೆನೆ ರೂಡಿವರಿಸಿದನು

ದೇಂ ಪ್ರತಾಪನೋ ದೇವರಾಜೇಂದ್ರನವರುವವರ ಚರಣಾಂಬುಜಕ್ಕೆ ಶರಣು"

ಈ ಬೀದಿಯಲ್ಲಿ ವಿರೂಪಾಕ್ಷ, ಪಂಪಾಂಬಿಕಾ ಮತ್ತು ಗಣಾಧಿಪರ ರಥವನ್ನು ಎಳೆಯಲು ಬೀದಿಯನ್ನು ನಿರ್ಮಾಣ ಮಾಡಿದನು.[೨೮] ನಿಕೋಲೊ-ಡಿ-ಕೊಂತಿ, ಡೊಮಿಂಗೊ ಪಯಾಸ್, ವಿದೇಶಿ ಪ್ರವಾಸಿಗರ ಪ್ರಕಾರ ವಿಜಯನಗರದಲ್ಲಿ ದೇವರ ವಿಗ್ರಹವನ್ನು ಎರಡು ರಥಗಳ ಮಧ್ಯೆ ಇಟ್ಟು ಮೆರವಣಿಗೆ ಮಾಡುತ್ತಾರೆ. ಈ ರಥೋತ್ಸವದ ಜೊತೆಗೆ ಉತ್ಸವಗಳು, ಮೆರವಣಿಗೆಗಳು ನಡೆಯುತ್ತಿದ್ದವು. ಹೋಳಿ ಹಬ್ಬದಲ್ಲಿ ಬಣ್ಣವನ್ನು ಬೀದಿಯ ಎರಡು ಬದಿಯಲ್ಲಿಟ್ಟು ರಾಜ-ರಾಣಿಯನ್ನು ಎಲ್ಲರ ಮೇಲೆ ಎರಚುತ್ತಿದ್ದರೆಂದು ಕೊಂತಿ ಹೇಳಿದ್ದಾರೆ.

ವಿರೂಪಾಕ್ಷ ದೇವಾಲಯದ ಸುತ್ತಲೂ ವಿರೂಪಾಕ್ಷಪುರವು ಬೆಳೆಯಿತು. ದೇವಾಲಯದ ಮುಂಭಾಗದಲ್ಲಿ ಎಡ ಬಲಭಾಗದಲ್ಲಿ ಮೂರು ಅಡಿ ಎತ್ತರದ ಅಧಿಷ್ಠಾನದ ಮೇಲೆ ಮಂಟಪವನ್ನು ಕಟ್ಟಲಾಗಿದೆ. ಮಂಟಪದಲ್ಲಿ ಎರಡು ಅಂಕಣ ಮತ್ತು ಎರಡಕ್ಕಿಂತ ಹೆಚ್ಚು ಅಂಕಣದ ಮಂಟಪಗಳನ್ನು ಕಟ್ಟಲಾಗಿದೆ. ಈ ಮಂಟಪಗಳನ್ನು ಅನೇಕ ಧಾರ್ಮಿಕ ಆಚರಣೆ ಹಾಗೂ ವ್ಯಾಪಾರದ ಮಳಿಗೆಗಳಾಗಿ ಉಪಯೋಗಿಸಲಾಗುತ್ತಿತ್ತು. ಅದಕ್ಕಾಗಿ ಈ ಮಾರುಕಟ್ಟೆಗೆ ವಿರೂಪಾಕ್ಷ ಬಜಾರ್ ಎಂದು ಹೆಸರಿಸಲಾಗಿದೆ. ಈ ಬೀದಿಯಲ್ಲಿ ನಿತ್ಯದಾಸೋಹ ನಡೆಸುತ್ತಿದ್ದು ದಕ್ಷಿಣಾಮೂರ್ತಿ ಚಕ್ರವರ್ತಿಗಳು, ಗುರುಮೂರ್ತಿ ಒಂದೊತ್ತಿನಯ್ಯಗಳು, ಕ್ರಿಯಾಶಕ್ತಿ

ಒಡೆಯತಿರಾಯ, ಇವರೆಲ್ಲಾ ಪಂಪಾಪತಿ ರಥಬೀದಿಯಲ್ಲಿ ನೆಲೆಸಿದ್ದರೆಂದು ಲಕ್ಕಣ್ಣ ದಂಡೇಶ "ಶಿವತತ್ವ" ಚಿಂತಾಮಣಿಯಲ್ಲಿ ಪ್ರಸ್ತಾಪಿಸಿದ್ದಾನೆ. ಬಜಾರದಲ್ಲೇ ಕೆಲವು ವೀರಶೈವ ಮಠಗಳಿವೆ. ಇವು ಮಂಟಪದ ರೂಪದಲ್ಲಿದ್ದು ಅವುಗಳಲ್ಲಿ ಕೆಲವೊಂದು ಎರಡು ಅಂತಸ್ತುಗಳನ್ನು ಹೊಂದಿದೆ. ಎಲ್ಲಾ ಮಠಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದು ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ಬಟ್ಟೆಗಳನ್ನು ಕೊಡುವ ವ್ಯವಸ್ಥೆಯಿತ್ತು.[೨೯]

ಅಬ್ದುಲ್ ರಜಾಕ್ ಎಂಬ ವಿದೇಶಿ ಪ್ರವಾಸಿಗನು ವಿರೂಪಾಕ್ಷ ಬಜಾರ್‌ನ ಕುರಿತು ಈ ರೀತಿ ವಿವರಿಸಿದ್ದಾನೆ. "ಈ ಮಾರುಕಟ್ಟೆಯಲ್ಲಿ ಎಲ್ಲ ರೀತಿಯ ಅಂಗಡಿಳಿದ್ದವು, ಆಭರಣಗಳಾದ ಮುತ್ತು, ಹವಳ, ಪಚ್ಚೆ, ವಜ್ರದ ಅಂಗಡಿಗಳಿದ್ದವು. ಮಾರುಕಟ್ಟೆಯು ವಿರೂಪಾಕ್ಷ ದೇವಾಲಯದ ಮುಂಭಾಗದಿಂದ ಪೂರ್ವ ನಂದಿ ಮಂಟಪದವರೆಗೆ ೭೨೦ ಮೀ. ಉದ್ದವಾಗಿದೆ. ೩೫ ಮೀ. ಅಗಲವಾಗಿದೆ."[೩೦]

ಈ ಮೇಲಿನ ಉಲ್ಲೇಖಗಳಂತೆ ವಿರೂಪಾಕ್ಷಪುರವು ವಿಜಯನಗರ ಕಾಲದಲ್ಲಿ ಒಂದು ಪ್ರಮುಖ ಪುರ ಅಥವಾ ಪಟ್ಟಣವಾಗಿ ಬೆಳವಣಿಗೆವಾಗಿತ್ತು ಎಂದು ದೃಢಪಡುತ್ತದೆ. 'ಪುರ' ಎಂದರೆ ಅಮರಕೋಶದಲ್ಲಿ ಪಟ್ಟಣ ಅಥವಾ ನಗರ ಎಂದು ವಿವರಿಸಿದೆ. ಇದಕ್ಕೆ ಪರ್ಯಾಯವಾದ ಪದಗಳೆಂದರೆ ಪರ್, ಪುರಿ, ನಗರಿ ಎಂಬುದಾಗಿದೆ.[೩೧] ಪುರ ಎಂದು ಕರೆಯಲು ಅನೇಕ ಅರ್ಥಗಳು ಮತ್ತು ಕೆಲವು ಗುಣಲಕ್ಷಣಗಳು ಇರಬೇಕು. ಅದರಲ್ಲಿ ಹೆಚ್ಚು ಜನಸಂಖ್ಯೆಯಿದ್ದು ಮಾರುಕಟ್ಟೆಯನ್ನು ಹೊಂದಿರಬೇಕು. ಎಲ್ಲದಕ್ಕಿಂತ ಮುಖ್ಯವಾಗಿ ಕೋಟೆ ಇರಬೇಕು.[೩೨] ವಿಜಯನಗರ ಕಾಲದ ವಿರೂಪಾಕ್ಷಪುರವು ಒಂದು ರಾಜಧಾನಿ ಪಟ್ಟಣವಾಗಿ ಕಾರ್ಯನಿರ್ವಹಿಸುತ್ತಿತ್ತು. ರಾಜಧಾನಿಗೆ ಇರಬೇಕಾದ ಎಲ್ಲಾ ಲಕ್ಷಣಗಳನ್ನು ಹೊಂದಿತ್ತು. ಇದಕ್ಕೆ ಇರಬೇಕಾದ ಲಕ್ಷಣಗಳು ಇಂತಿವೆ : ಅಲ್ಲಿ ಕಂದಕಗಳು, ಪ್ರಾಕಾರ ಗೋಡೆ, ಸೈನಿಕರ ಪಡೆ, ಸೈನಿಕರ ವೀಕ್ಷಣಾ ಗೋಪುರ, ಅರಮನೆಗಳು, ಅಧಿಕಾರಿಗಳ ಮನೆಗಳು, ಎತ್ತರವಾದ ಗೋಪುರಗಳು, ತೋಟಗಳು, ಸಾಮಾನ್ಯರ ಮನೆಗಳು ಇರಬೇಕು. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಆನೆಗಳು ಕುದುರೆಗಳು, ಸೈನಿಕರು, ಸೈನಿಕರ ಅಧಿಕಾರಿಗಳು ವಾಸಿಸುತ್ತಾರೆ. ಎಲ್ಲಾ ಜನಾಂಗದವರ ದೇವಾಲಯವಿರುತ್ತವೆ.[೩೩] ವಿಜಯನಗರದ ರಾಜಧಾನಿಪಟ್ಟಣದಲ್ಲಿ ಅರಮನೆ, ರಾಜ ನಿವಾಸ, ಅಧಿಕಾರಿಗಳು, ಮಂತ್ರಿಗಳು ವಾಸಿಸುವ ಸ್ಥಳಗಳಿವೆ. ಅದರಲ್ಲಿ ಡಣಾಯಕನ ಆವರಣ, ಜನಾನ ಆವರಣ, ಗುಹಾಂತರ ದೇವಾಲಯದ ಸಮೀಪದ ಅಷ್ಟಕೋನಾಕೃತಿಯ ನೀರಿನ ಕಾರಂಜಿ, ಕೋಟೆಯ ಉತ್ತರಕ್ಕೆ ಪ್ರವೇಶದ್ವಾರ, ಗಜಶಾಲೆ ಆವರಣ ಮತ್ತು ಶ್ರೇಷ್ಠರ ಮನೆಗಳು ಹಾಗೂ ಅರಮನೆಗಳು ಟಂಕಸಾಲೆ, ಮುಂತಾದವುಗಳು ವಿಜಯನಗರ ರಾಜಧಾನಿಪಟ್ಟಣದಲ್ಲಿ

ಕಂಡುಬಂದಿವೆ.[೩೪] ಅಬ್ದುಲ್ ರಜಾಕ್‌ನು ತನ್ನ ವರದಿಯಲ್ಲಿ ರಾಜಧಾನಿಪಟ್ಟಣದಲ್ಲಿ ತಾನು ನೋಡಿದ ವಿಷಯವನ್ನು ವಿವರಿಸಿದ್ದಾನೆ. "ಸುಲ್ತಾನನ ಮುಖಮಂಟಪದ ಎಡಕ್ಕೆ ದಿವಾನಖಾನೆ ಇದೆ. ಅದು ಅತ್ಯಂತ ದೊಡ್ಡದಾಗಿದ್ದು ಅರಮನೆಯಂತೆ ಕಾಣುತ್ತದೆ. ಅದರ ಮುಂದೆ ಒಂದು ಸಭಾಂಗಣವಿದೆ. ಅದರ ಎತ್ತರ ಮನುಷ್ಯನ ನಿಲುವಿಗಿಂತ ಹೆಚ್ಚಿದೆ. ಅದರ ಉದ್ದ ಮೂವತ್ತು ಮತ್ತು ಅಗಲ ಹತ್ತು ಗಜ ಇದೆ. ಅದರಲ್ಲಿ ದಫ್ತರ-ಖಾನವನ್ನು (ನ್ಯಾಯಾಲಯ) ಇರಿಸಲಾಗಿದೆ ಮತ್ತು ಇಲ್ಲಿ ಲಿಪಿಕಾರರು ಕೂಡುತ್ತಾರೆ. ಈ ಅರಮನೆಯ ಮಧ್ಯದಲ್ಲಿ ಎತ್ತರದ ಜಗಲಿಯ ಮೇಲೆ ಡಣಾಯಿಕ ಎಂದು ಕರೆಯಲಾದ ನಪುಂಸಕ ಕೂತಿರುತ್ತಾನೆ. ಅವನೇ ನ್ಯಾಯಸ್ಥಾನದ ಏಕೈಕ ಅಧಿಪತಿ. ಭವನದ ಕೊನೆಯಲ್ಲಿ ಸಾಲಾಗಿ ನಿಂತ ಜೋಬದಾರರು ಇರುವರು. ದಿವಾನ ಅಥವಾ ಡಣಾಯಿಕ ಜನರ ವ್ಯಾಜ್ಯಗಳನ್ನು ತೀರ್ಮಾನಿಸುತ್ತಾನೆ. ಇಲ್ಲಿ ಕೆಲಸ ಮುಗಿಸಿ ಡಣಾಯಿಕ ಏಳು ಬಾಗಿಲುಗಳ ಮೂಲಕ ಹಾಯ್ದು ಅರಮನೆ ಪ್ರವೇಶಿಸುತ್ತಾನೆ. ಮತ್ತು ಕೊನೆಯದನ್ನು ತಾನೊಬ್ಬನೇ ಪ್ರವೇಶಿಸಿ ರಾಜನಿಗೆ ವರದಿ ನೀಡುತ್ತಾನೆ. "ರಾಜನ ಅರಮನೆಯ ಹಿಂದೆ ಡಣಾಯಕನಿಗೆ ಕೊಡಲಾದ ಮನೆ ಮತ್ತು ಸಭಾಂಗಣಗಳಿವೆ. ಆ ಅರಮನೆಯ ಉತ್ತರಕ್ಕೆ ಟಂಕಸಾಲೆಯಿದೆ. "ಈ ಸಾಮ್ರಾಜ್ಯವು ಎಷ್ಟೊಂದು ಜನಸಂಖ್ಯೆ ಪಡೆದಿದೆಯೆಂದರೆ ವ್ಯಾಪಕ ವಿವರಗಳನ್ನು ಬಳಸದೆ ಅದರ ಕಲ್ಪನೆ ಮಾಡಿಕೊಡುವುದು ಅಸಾಧ್ಯ. ರಾಜನ ಅರಮನೆಯಲ್ಲಿ ಹೊಂಡಗಳನ್ನು ಹೋಲುವ ಹಲವಾರು ಗೂಡುಗಳಿವೆ. ಅವುಗಳಲ್ಲಿ ತುಂಬಿಡಲಾದ ಬಂಗಾರದ ಗಟ್ಟಿಗಳು ಅವಿಚ್ಛಿನ್ನ ವಿಸ್ತಾರ ರಾಜ್ಯವನ್ನು ನಿರ್ಮಿಸಿವೆ."

"ದಿವಾನಖಾನೆಯ ಎದುರಿಗೆ ಗಜಶಾಲೆಯಿದೆ. ಪ್ರತಿಯೊಂದು ಆನೆಗೆ ಒಂದು ಪ್ರತ್ಯೇಕ ಅಂಕಣವಿದೆ. ಅದರ ಗೋಡೆಗಳು ಗಟ್ಟಿಯಾಗಿದ್ದು ಮಾಳಿಗೆಯನ್ನು ಕಟ್ಟಿಗೆಯ ಗಟ್ಟಿ ತುಂಡುಗಳಿಂದ ಮಾಡಲಾಗಿದೆ. ಟಂಕಸಾಲೆಯ ಎದುರಿಗೆ ಮಂಡಲಾಧಿಪತಿಯ ಮನೆಯಿದೆ. ಅಲ್ಲಿ ಹನ್ನೆರಡು ಸಾವಿರಕ್ಕೂ ಹೆಚ್ಚು ಸೈನಿಕರು ಸನ್ನದ್ಧರಾಗಿ ಇಡಲ್ಪಟ್ಟಿರುವರು. ಟಂಕಸಾಲೆಯ ಹಿಂದೆ ಒಂದು ತರಹದ ಪೇಟೆಯಿದೆ. ಅದು ಮುನ್ನೂರು ಘಜಕ್ಕಿಂತ ಹೆಚ್ಚು ಉದ್ದ, ಇಪ್ಪತ್ತಕ್ಕಿಂತ ಹೆಚ್ಚು ಅಗಲವಿದೆ. ಎರಡೂ ಬದಿಗಳಲ್ಲಿ ಮನೆಗಳು ಮತ್ತು ಅಂಗಳಗಳು ಸಾಲುಗಟ್ಟಿವೆ. ಅವುಗಳ ಮುಂದೆ ಬೆಂಚು (ಕುರ್ಸಿ) ಗಳ ಬದಲು ಸುಂದರ ಕಲ್ಲುಗಳಿಂದ ಕಟ್ಟಿದ ಹಲವಾರು ಉನ್ನತ ಆಸನಗಳಿವೆ. ಕೊಠಡಿಗಳಿಂದಾದ ಸಾಲು ಬೀದಿಯ ಎರಡೂ ಬದಿಗಳ ಮೇಲೆ ಸಿಂಹಗಳು, ಚಿರತೆಗಳು, ಹುಲಿಗಳು ಮತ್ತು ಇತರ ಪ್ರಾಣಿಗಳ ಆಕೃತಿಗಳನ್ನು ಬಿಡಿಸಲಾಗಿದೆ".[೩೫]

ಶುಕ್ರಚಾರ್ಯರು ತಮ್ಮ ಕೃತಿಯಲ್ಲಿ ರಾಜಧಾನಿಪಟ್ಟಣವನ್ನು ಕುರಿತು ಹೀಗೆ ವಿಶ್ಲೇಷಿಸಿದ್ದಾರೆ. ರಾಜಧಾನಿಪಟ್ಟಣದಲ್ಲಿ ವಿವಿಧ ರೀತಿಯ ಮರಗಳು ಇರುತ್ತವೆ. ಸಸಿಗಳು ಮತ್ತು

ಕಂಟಿ ಪೊದೆಗಳು, ಹೆಚ್ಚು ಹಸುಗಳು, ಪಕ್ಷಿಗಳು ಇತರ ಪ್ರಾಣಿಗಳಿರುತ್ತವೆ. ಇಲ್ಲಿ ಎಲ್ಲಾ ರೀತಿಯ ನೀರಿನ ಅನುಕೂಲತೆಯನ್ನು ಹೊಂದಿರುತ್ತದೆ. ಅನೇಕ ನಾಲೆಗಳ ಮುಖಾಂತರ ಹರಿಸಿದ ನೀರಿನಿಂದ ಪಟ್ಟಣವು ಹಸಿರಾಗಿರುತ್ತದೆ. ಈ ಹಸಿರು ಕಾಡಿನಿಂದ ಪಟ್ಟಣವು ಸುಂದರವಾಗಿರುತ್ತದೆ. ಬೆಟ್ಟಗಳಿಂದ ಸುತ್ತುವರೆದಿರುತ್ತದೆ.[೩೬] ಅದೇ ರೀತಿಯಾಗಿ ವಿಜಯನಗರದ ರಾಜಧಾನಿಪಟ್ಟಣವನ್ನು ಡೊಮಿಂಗೊಸ್ ಪಯಾಸ್‌ನು ತನ್ನ ಪ್ರವಾಸಿ ಕಥಾನಕದಲ್ಲಿ ಹೀಗೆ ವಿವರಿಸಿದ್ದಾನೆ. ನಾನು ನೋಡಿದುದು ರೋಮ್‌ನಷ್ಟು ವಿಶಾಲವಾಗಿಯೂ ಮತ್ತು ಬಹಳ ಸುಂದರವಾಗಿಯೂ ಕಂಡಿತ್ತು. ಅದರೊಳಗೆ ಮನೆಗಳ ತೋಟಗಳಲ್ಲಿ ಅನೇಕ ಗಿಡಗಳಿವೆ ಮತ್ತು ಅದರ ಮಧ್ಯೆ ಹರಿಯುವ ನೀರಿನ ಅನೇಕ ನಾಲೆಗಳಿವೆ. ಅಲ್ಲಲ್ಲಿ ಸರೋವರಗಳಿವೆ. ರಾಜನ ಅರಮನೆಯ ಹತ್ತಿರವೇ ತೆಂಗಿನ ಮರಗಳು ಮತ್ತು ಇತರ ಸಂಪದ್ಭರಿತ ಹಣ್ಣಿನ ಗಿಡಗಳಿವೆ. ಮೂರರ ವಾಸಸ್ಥಾನದ ಕೆಳಗಡೆ ಒಂದು ಚಿಕ್ಕ ನದಿಯಿದೆ. ಅದರ ಈ ಬದಿಗೆ ಅನೇಕ ಹಣ್ಣಿನ ತೋಟಗಳು ಮತ್ತು ಅನೇಕ ಹಣ್ಣಿನ ಗಿಡಗಳುಳ್ಳ ತೋಟಗಳು ಇವೆ. ಅವುಗಳಲ್ಲಿ ಬಹುಮಟ್ಟಿಗೆ ಇರುವುದು ಮಾವು, ಅಡಿಕೆ, ಹಲಸು ಮತ್ತು ಅನೇಕ ನಿಂಬೆ, ಕಿತ್ತಲೆ ಗಿಡಗಳು, ಅವುಗಳೋ ಒಂದಕ್ಕೊಂದು ಎಷ್ಟು ಗುತ್ತಾಗಿ ಬೆಳೆದಿವೆಯೆಂದರೆ ಅದು ದಟ್ಟ ಅರಣ್ಯದಂತೆ ತೋರುತ್ತದೆ."[೩೭] ಈ ರೀತಿಯಾಗಿ ಹಂಪಿಯು ಮಧ್ಯಯುಗೀನ ಕಾಲದ ವಸತಿ ಪ್ರದೇಶವಾಗಿತ್ತು.

## ಕೃಷ್ಣಾಪುರ

ಪ್ರಸ್ತುತ ಕೃಷ್ಣಾಪುರ (೧೫°೩೩೧೦೪೮ ಉತ್ತರ ಅಕ್ಷಾಂಶ ೭೬°೪೫೧೧೦೬ ಪೂರ್ವ ರೇಖಾಂಶ) ಗ್ರಾಮದ ಯಾವುದೇ ಅವಶೇಷಗಳು ಇಲ್ಲಿಯವರೆಗೆ ದೊರಕಿಲ್ಲ. ಇದು ಕೃಷ್ಣ ದೇವಾಲಯವನ್ನು ನಿರ್ಮಿಸಿದಾಗ ಅದಕ್ಕೆ ಹೊಂದಿಕೊಂಡು ನಿರ್ಮಿಸಿರುವ ಗ್ರಾಮವಾಗಿದೆ. ಶಾಸನಗಳಲ್ಲಿ ಮಾತ್ರ ಕೃಷ್ಣಾಪುರದ ಉಲ್ಲೇಖ ದೊರೆಯುತ್ತವೆ. ಇದು ಹೊಸಪೇಟೆಯಿಂದ ಪೂರ್ವಕ್ಕೆ ೧೪ ಕಿ.ಮೀ. ದೂರದಲ್ಲಿದೆ. ಕಮಲಾಪುರದಿಂದ ಹಂಪಿಗೆ ಹೋಗುವ ಮಾರ್ಗದಲ್ಲಿ ಉದ್ದಾನ ವೀರಭದ್ರ ಮತ್ತು ಬಡವಿಲಿಂಗದ ಹತ್ತರವಿದೆ. ಈ ಕೃಷ್ಣಾಪುರದ ಮೊದಲ ಹೆಸರು ಹಂಪದೇವನಹಳ್ಳಿ[೩೮] ಕೃಷ್ಣಾಪುರ ಎನ್ನುವ ಹೆಸರು ಕ್ರಿ.ಶ. ೧೫೧೩ರ ಕೃಷ್ಣದೇವರಾಯನ ಶಾಸನದಲ್ಲಿ ಉಲ್ಲೇಖವಿದೆ.

ಕೃಷ್ಣದೇವರಾಯನು ಉದಯಗಿರಿಯಿಂದ ಗೆದ್ದು ತಂದ ಬಾಲಕೃಷ್ಣನ ವಿಗ್ರಹವನ್ನು ಪ್ರತಿಷ್ಠಾಪಿಸಿ ಕೃಷ್ಣ ದೇವಾಲಯವನ್ನು ನಿರ್ಮಿಸಿದ ಈ ದೇವಾಲಯವು ಸುತ್ತಲೂ ಅಗ್ರಹಾರ ಅಥವಾ ಕೃಷ್ಣಾಪುರ ಎಂಬ ಹೆಸರಿನ ಊರನ್ನು ನಿರ್ಮಿಸುತ್ತಾನೆ. ಕೃಷ್ಣ ದೇವಾಲಯ

ಸ್ಥಾಪಿಸಿರುವುದು ವಿಶೇಷ. ದೇವಾಲಯದ ಮುಂಭಾಗದಲ್ಲಿ ರಥ ಬೀದಿಯಿದೆ. ಇಲ್ಲಿ ನಿರ್ಮಿಸಿದ ಪುರವು ಉದ್ಧಾನ ವೀರಭದ್ರ ದೇವಾಲಯದಿಂದ ಕೃಷ್ಣಾ ದೇವಾಲಯದ ಸುತ್ತಲೂ ಮತ್ತು ಸಾಸಿವೆಕಾಳು ಗಣಪತಿ ದೇವಾಲಯದವರೆಗೆ ವ್ಯಾಪಿಸಿತು. ಅಲ್ಲಿ ದವಸ ಧಾನ್ಯಗಳ ಮಾರುಕಟ್ಟೆಯು ಇದ್ದ ಕುರಿತು ಶಾಸನ ದಾಖಲಿಸಿದೆ.[೩೯] ಕೃಷ್ಣಾ ಬಜಾರದ ಉದ್ದ ೫೭೦ ಮೀ. ಮತ್ತು ೪೯.೫ ಮೀ. ಅಗಲವಿದೆ. ಅಚ್ಯುತರಾಯನ ಶಾಸನವು ಈ ಕೃಷ್ಣಾಪುರ ಬಜಾರು ದವಸ




ಧಾನ್ಯಗಳ ಮಾರುಕಟ್ಟೆಯಾಗಿತ್ತು ಎಂದು ದಾಖಲಿಸಿದೆ. ದೇವಾಲಯದ ಬಲಬದಿಯಲ್ಲಿ ಉಗ್ರಾಣಗಳಿವೆ. ಕ್ರಿ.ಶ. ೧೫೪೫ರ ಸದಾಶಿವರಾಯನ ಶಾಸನವು ಕೃಷ್ಣಾಪುರದ ಪೇಟೆಯಲ್ಲು ಮೂಲೆ ವೀಸ ನಾನಹೇರು ಒಂದಕ್ಕೆ ಸಲ್ಲುವ ಕಾಸು ಒಂದು ಎಂದು ಉಲ್ಲೇಖಿಸಿದೆ. ಸೋಮವಾರದಲ್ಲು ಅಂಗಡಿ ಒಂದಕ್ಕೆ ಸಲ್ಲುವ ಕಾಸು, ಬಜಾರದಲ್ಲಿ ವಸ್ತುಗಳನ್ನು ತಂದು ಹಾಕುವ ಎತ್ತಿನ ಗಾಡಿಗೆ ಒಂದು ಕಾಸು ಸುಂಕವನ್ನು ಹಾಕುತ್ತಿದ್ದರು ಎಂಬ ಉಲೇಖವಿದೆ. ಇಲ್ಲಿ ಸೋಮವಾರ ದಿನದಂದು ಸಂತೆ ಇರುವುದರಿಂದ ಎಲ್ಲಾ ವ್ಯಾಪಾರದ ಅಂಗಡಿಗಳಿಂದ ಸುಂಕವನ್ನು ವಸೂಲಿ ಮಾಡುತ್ತಿದ್ದರು. ಈ ಅಂಗಡಿಗಳಿಂದ ಬರುವ ಆದಾಯವನ್ನು ಕೃಷ್ಣಾ ದೇವಾಲಯಕ್ಕೆ ಬಿಡಲಾಗುತ್ತಿತ್ತು.[೪೦]

ಕನಕದಾಸರು ಶ್ರೀಕೃಷ್ಣನ ದ್ವಾರಕಾಪುರಪಟ್ಟಣವನ್ನು 'ಕೃಷ್ಣನಗರಿ' ಎಂದು ಈ ಕೃಷ್ಣಾಪುರ ನಗರಕ್ಕೆ ಹೋಲಿಸಲಾಗಿದೆ. ಇಲ್ಲಿ ಹೇಳಿದ ಸೋಮವಾರ ಬೀದಿಯು, ಕೃಷ್ಣಾಪುರ ಪೇಟೆಯ ಬೀದಿಯೇ ಸೋಮಬೀದಿ ಎಂದು ಹೇಳಿದೆ.[೪೧] ಕೃಷ್ಣಾಪುರವು ಒಂದು ಉತ್ತಮ ನಗರವಾಗಿ ಬೆಳೆದಿತ್ತು. ಒಂದು ನಗರ ಎಂದು ಕರೆಸಿಕೊಳ್ಳಲು ಅಲ್ಲಿ ಮನೆಗಳು, ಬೀದಿಗಳು, ಪೇಟೆ,

ದೇವಾಲಯಗಳಿರಬೆಕು. ಈ ಎಲ್ಲಾ ಲಕ್ಷಣಗಳು ಕೃಷ್ಣಾಪುರವು ಹೊಂದಿತ್ತು. ಕೃಷ್ಣದೇವರಾಯನು ನಿರ್ಮಿಸಿದ ಕೃಷ್ಣಾಪುರವು ಒಂದು ಅಗ್ರಹಾರವಾಗಿತ್ತು. ಅದು ಹಂಪಿ ಪಟ್ಟಣದ ಉಪನಗರವಾಗಿತ್ತು.[೪೨] ಈ ಅಗ್ರಹಾರವು ಘಟಿಕಾಸ್ಥಾನವಾಗಿ ಹಾಗೂ ವಿದ್ಯಾಕೇಂದ್ರವಾಗಿ ಕಾರ್ಯನಿರ್ವಹಿಸುತ್ತಿತ್ತು. ಕೃಷ್ಣದೇವರಾಯನು ನಿರ್ಮಿಸಿದ ಅನೇಕ ನಗರಗಳಲ್ಲಿ ಕೃಷ್ಣಾಪುರವು ಒಂದು.

**ನಿಂಬಾಪುರ**

ನಿಂಬಾಪುರ ಗ್ರಾಮವು (೧೫°೩೩೮೨೮೮ ಉತ್ತರ ಅಕ್ಷಾಂಶ ೭೬°೪೭೪೩೭ ಪೂರ್ವ ರೇಖಾಂಶ) ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ಚಿಕ್ಕ ಬೇಚಿರಾಕ್ ಗ್ರಾಮ. ಇದರ ವಿಸ್ತೀರ್ಣ ೧೨೬.೧೫. ಹೆಕ್ಟೇರ್‌ಗಳು. ನಿಂಬಾಪುರವು ತುಂಗಭದ್ರಾ ನದಿಯ ದಕ್ಷಿಣ ದಂಡೆಯಮೇಲಿದೆ. ಇಲ್ಲಿ ನವಶಿಲಾಯುಗದ ಕಾಲದ ಬೂದಿದಿಬ್ಬವಿದೆ. ಅದು ೪೧




ಮೀ ಉದ್ದ, ೧೬ ಮೀ. ಅಗಲ, ೩ ರಿಂದ ೪ ಮೀ. ಎತ್ತರವಾಗಿದೆ.[೪೩] ಇದನ್ನು ಹೊರತುಪಡಿಸಿ ಬೇರೆ ಅವಶೇಷಗಳು ದೊರಕಿಲ್ಲ. ಆದರೆ ವಿಜಯನಗರ ಕಾಲದಲ್ಲಿ ಚಟುವಟಿಕೆಗಳು ಆಗಿರುವುದನ್ನು ಇಲ್ಲಿನ ಸೌಮ್ಯಸೋಮೇಶ್ವರ ದೇವಾಲಯದಿಂದ ತಿಳಿದುಬರುತ್ತದೆ. ಕ್ರಿ.ಶ. ೧೪೫೦ರಲ್ಲಿ ಪ್ರೌಢದೇವರಾಯನು ನಿರ್ಮಿಸಿದ ಈ ದೇವಾಲಯಕ್ಕೆ

ಸಂಬಂಧಿಸಿದ ಶಾಸನದಲ್ಲಿ ಅರಸನ ಆದೇಶದ ಮೇರೆಗೆ ರಾಯಪಣ್ಣಯ್ಯ ಎನ್ನುವವನು ಸೋಮಲಾಪುರ ಗ್ರಾಮವನ್ನು ನಿರ್ಮಿಸಿದನು.[೪೪] ಈ ಸೋಮಲಾಪುರ ಗ್ರಾಮದಲ್ಲಿ ದೇವಾಲಯ ಮತ್ತು ಮನೆಗಳು ನಿರ್ಮಾಣವಾದವು.[೪೫]

ವಿಜಯನಗರ ಕಾಲದಲ್ಲಿ ಒಂದು ಚಿಕ್ಕ ಗ್ರಾಮವಾಗಿತ್ತು. ಇದು ತುಂಗಭದ್ರಾ ನದಿ ದಂಡೆಯಲ್ಲಿರುವುದರಿಂದ ನದಿಯ ಪ್ರವಾಹದ ನೀರು ಪದೇ ಪದೇ ಗ್ರಾಮದ ಒಳಗೆ ಬರುತ್ತಿದ್ದ ಪರಿಣಾಮವಾಗಿ ಜನರು ಗ್ರಾಮವನ್ನು ತೊರೆದ ನಿಮಿತ್ತ ಇಂದು ವಸತಿರಹಿತ ಗ್ರಾಮವಾಗಿದೆ.

**ಗಾಳೆಮ್ಮಗುಡಿ**

ಗಾಳೆಮ್ಮನಗುಡಿಯು (೧೫°೧೬'೫೦ ಉತ್ತರ ಅಕ್ಷಾಂಶ ೭೬°೨೯'೩೦ ಪೂರ್ವ ರೇಖಾಂಶ) ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ೨೦ನೇ ಶತಮಾನದ ಹೊಸ ಗ್ರಾಮ. ಹೊಸಪೇಟೆಯಿಂದ ಈಶಾನ್ಯಕ್ಕೆ ಹಂಪಿಗೆ ತೆರಳುವ ಮಾರ್ಗದ ಎಡಭಾಗದಲ್ಲಿದೆ. ಇದು




ಹೊಸಪೇಟೆಯಿಂದ ಸುಮಾರು ೦೭ ಕಿ.ಮೀ. ದೂರದಲ್ಲಿದೆ. ಗ್ರಾಮದ ಒಟ್ಟು ವಿಸ್ತೀರ್ಣ ೩೦೦ ಹೆಕ್ಟೇರ್ ಪ್ರದೇಶವಾಗಿದ್ದು ಅಲ್ಲಿ ೫೦ ಮನೆಗಳಿವೆ. ಗಾಳೆಮ್ಮನಗುಡಿ ಪ್ರದೇಶವು ವಿಜಯನಗರ ಕಾಲದಲ್ಲಿ ಕುರುಚಲು ಕಾಡು ಪ್ರದೇಶ ಅಥವಾ ಬೇಸಾಯದ ಭೂಮಿಯಾಗಿರುವ ಸಾಧ್ಯಗಳಿವೆ.

ಗಾಳೆಮ್ಮನಗುಡಿ ಪ್ರದೇಶವು ವಿಜಯನಗರ ಕಾಲದಲ್ಲಿ ಕುರುಚಲು ಕಾಡು ಪ್ರದೇಶ ಅಥವಾ ಬೇಸಾಯದ ಭೂಮಿಯಾಗಿರುವ ಸಾಧ್ಯಗಳಿವೆ. ಈ ಪ್ರದೇಶದಲ್ಲಿ ವಿಜಯನಗರದ ಕಾಲದ ಶಿಥಿಲ ಚಿಕ್ಕ ದೇವಾಲಯವಿದೆ. ಇದು ಯಾವ ಧರ್ಮಕ್ಕೆ ಸೇರಿದ್ದು ಎಂಬುದು ತಿಳಿದಿಲ್ಲ. ಈ ಒಂದು ಅವಶೇಷದಿಂದ ನಾವು ವಿಜಯನಗರ ಕಾಲದ ಜನವಸತಿಯಿದ್ದ ಪ್ರದೇಶವೆಂದು ಹೇಳಲು ಸಾಧ್ಯವಿಲ್ಲ. ಪ್ರಾಯಶಃ ಇದು ಪ್ರಾಚೀನ ಮಾರ್ಗದ ಬದಿಯ ದೇವಾಲಯವಾಗಿರುವ ಸಾಧ್ಯತೆಗಳಿವೆ. ಗ್ರಾಮದ ಸುತ್ತಮುತ್ತ ಯಾವುದೇ ಪ್ರಾಚ್ಯಾವಶೇಷ ದೊರೆತಿಲ್ಲ. ೨೦ನೇ ಶತಮಾನದಲ್ಲಿ ಈ ಗ್ರಾಮವು ರೂಪುಗೊಂಡಿತು. ಗಾಳೆಮ್ಮ ಎನ್ನುವ ಗ್ರಾಮದೇವತೆಯ ಹೆಸರಿನಿಂದ ದೇವಾಲಯವನ್ನು ಸದರಿ ಗ್ರಾಮವನ್ನು ಗಾಳೆಮ್ಮನಗುಡಿ ಎಂದು ಕರೆಯಲಾಗುತ್ತಿದೆ. ದೇವಾಲಯದ ನೂತನ ಗೋಪುರವನ್ನು ಶಾಸಕರಾದ ಶ್ರೀ ಆನಂದಸಿಂಗ್ ಅವರು ಕಟ್ಟಿಸಿದ್ದಾರೆ.

**ಕಡ್ಡಿರಾಮಪುರ**

ಕಡ್ಡಿರಾಮಪುರ ಗ್ರಾಮವು (೧೫°೧೬೫೯ ಉತ್ತರ ಅಕ್ಷಾಂಶ, ೭೬°೨೯೩೩ ಪೂರ್ವ ರೇಖಾಂಶ) ಹೊಸಪೇಟೆಯಿಂದ ೧೨ ಕಿ.ಮೀ. ಈಶಾನ್ಯಕ್ಕೆ ಕಮಲಾಪುರಕ್ಕೆ ಹೋಗುವ ಮಾರ್ಗದ ಮಧ್ಯದಲ್ಲಿದೆ. ಗ್ರಾಮದ ಒಟ್ಟು ವಿಸ್ತೀರ್ಣ ೩೦೪.೧೬ ಹೆಕ್ಟೇರ್‌ಗಳು ಮತ್ತು ಒಟ್ಟು ೨೬೪ ಮನೆಗಳಿವೆ. ಗ್ರಾಮದ ಜನಸಂಖ್ಯೆ ೧,೩೩೯.



ಈ ಗ್ರಾಮದಲ್ಲಿ ಪ್ರಾಗಿಹಾಸಿಕ ಕಾಲದ ಯಾವುದೇ ನೆಲೆಗಳು ದೊರೆತಿಲ್ಲವಾದರೂ ಮಧ್ಯಯುಗೀನ ಕಾಲದ ಅವಶೇಷಗಳು ದೊರೆತಿವೆ. ವಿಜಯನಗರ ಕಾಲದ ಕೋಟೆಗೋಡೆಯ ಅವಶೇಷವು ಅಲ್ಪ ಪ್ರಮಾಣದಲ್ಲಿ ಉಳಿದುಬಂದಿದೆ.[೪೬] ಕ್ರಿ.ಶ. ೧೩೬೬ರ ಬುಕ್ಕರಾಯನ ಶಾಸನದಲ್ಲಿ ರಾಮಪುರವೆಂದು, ಕ್ರಿ.ಶ. ೧೫೦೫ರ ಶಾಸನದಲ್ಲಿ ಕಡೆರಾಮಾಪುರವೆಂದು ಉಲ್ಲೇಖಿಸಲಾಗಿದೆ. ಗ್ರಾಮದಲ್ಲಿ ವಿಜಯನಗರ ಕಾಲದ ಇಸ್ಲಾಂ ಧರ್ಮೀಯರ ಗೋರಿಗಳು ಇವೆ. ಇವುಗಳು ಕಲ್ಲಿನ ಕಟ್ಟಡಗಳಾಗಿದ್ದು, ವಿಭಿನ್ನ ಶೈಲಿಯಲ್ಲಿವೆ. ಇವೆಲ್ಲವೂ ಕೇಂದ್ರ ಪುರಾತತ್ವ ಇಲಾಖೆಯ ಸಂರಕ್ಷಿತ ಸ್ಮಾರಕವಾಗಿವೆ. ಇಲ್ಲನ ಪ್ರಚಲಿತ ಐತಿಹ್ಯದ ಪ್ರಕಾರ ರಾಮನು ತನ್ನ ಪತ್ನಿಯಾದ ಸೀತೆಯನ್ನು ಹುಡುಕಿಕೊಂಡು ಈ ಸ್ಥಳಕ್ಕೆ ಬಂದಾಗ ಚಿಂತೆಯಿಂದ ಸೊರಗಿ ಕಡ್ಡಿಯಂತಾಗಿದ್ದರಿಂದ ಕಡ್ಡಿರಾಮಪುರವೆಂದು ಹೆಸರು ಬಂದಿತು ಎನ್ನುವ ಬಲವಾದ ನಂಬಿಕೆಯಿದೆ.[೪೭]

**ಹೊಸ ಮಲಪನಗುಡಿ**

ಹೊಸ ಮಲಪನಗುಡಿಯು (೧೫°೨೮'೪೪'೨೫ ಉತ್ತರ ಅಕ್ಷಾಂಶ, ೭೬°೪೨'೮೨'೪೦ ಪೂರ್ವ ರೇಖಾಂಶ) ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ೨೦ನೇ ಶತಮಾನದ




200 m

ಹೊಸ ಗ್ರಾಮ. ಹೊಸಪೇಟೆಯಿಂದ ಈಶಾನ್ಯಕ್ಕೆ ಹಂಪೆಗೆ ಬರುವ ಮಾರ್ಗದ ಮಧ್ಯದಲ್ಲಿದೆ. ಇದು ಹೊಸಪೇಟೆಯಿಂದ ೯ ಕಿ.ಮೀ. ದೂರದಲ್ಲಿದೆ. ಇಂದು ಒಟ್ಟು ೧೦೦ ಮನೆಗಳಿವೆ.

ಈ ಗ್ರಾಮವು ಹಳೇ ಮಲಪನಗುಡಿಯ ಗ್ರಾಮ ಪಂಚಾಯತಿಯ ಭಾಗವಾಗಿದೆ. ಈ ಪ್ರದೇಶದಲ್ಲಿ ಯಾವುದೇ ಪ್ರಾಚೀನ ಅವಶೇಷಗಳು ಮತ್ತು ವಿಜಯನಗರ ಕಾಲದ ಅವಶೇಷಗಳು ಕಂಡುಬಂದಿಲ್ಲ. ಮಲಪನಗುಡಿ ಮತ್ತು ಹೊಸಮಲಪನಗುಡಿ ಮಧ್ಯದಲ್ಲಿ ವಿಜಯನಗರ ಕಾಲದ ಕಾಲುವೆ ಮತ್ತು ಕೃಷಿಭೂಮಿಯಲ್ಲಿ ಕೆರೆ ತುಂಬಿದೆ.

**ಮಲಪನಗುಡಿ**

ಮಲಪನಗುಡಿ (೧೫°೨೮೪೪೪೫ ಉತ್ತರ ಅಕ್ಷಾಂಶ ೭೬°೪೨೮೨೫೪ ಪೂರ್ವ ರೇಖಾಂಶ) ಗ್ರಾಮವು ಹೊಸಪೇಟೆಯಿಂದ ಈಶಾನ್ಯಕ್ಕೆ ಹಂಪೆಗೆ ಬರುವಮಾರ್ಗದ ಮಧ್ಯದಲ್ಲಿದೆ.




200 m

ಇದು ಹೊಸಪೇಟೆಯಿಂದ ೦೬ ಕಿ.ಮೀ. ದೂರದಲ್ಲಿದೆ. ಗ್ರಾಮದ ಒಟ್ಟು ವಿಸ್ತೀರ್ಣವು ೧,೦೪೨.೯೮ ಹೆಕ್ಟೇರ್ ಆಗಿದೆ. ಒಟ್ಟು ೨,೦೩೭ ಮನೆಗಳಿದ್ದು, ಅಲ್ಲಿನ ಒಟ್ಟು ಜನಸಂಖ್ಯೆ ೩,೫೮೨, ಈ ಗ್ರಾಮದ ನೈರುತ್ಯ ಭಾಗದಲ್ಲಿ ಹಳೇಶಿಲಾಯುಗದ ಆಯುಧಗಳು, ಕಪ್ಪು ಬಣ್ಣದ ಮಡಿಕೆ ಚೂರುಗಳು ಮತ್ತು ಶಿಲಾಕೊಡಲಿಗಳು ದೊರಕಿವೆ.[೪೮] ಪ್ರಾಗಿತಿಹಾಸ ಮತ್ತು

ಆದಿಇತಿಹಾಸ ಕಾಲದ ನೆಲೆಗಳು ದೊರೆತಿಲ್ಲವಾದರೂ ಮಧ್ಯಯುಗಿನ ಕಾಲದ ಅವಶೇಷಗಳು ದೊರೆತಿವೆ. ಈ ಗ್ರಾಮದಲ್ಲಿ ಎರಡು ಶಾಸನಗಳಿವೆ. ಒಂದು ಬಾವಿಯ ಬಗೆಗೆ ತಿಳಿಸಿದರೆ ಮತ್ತೊಂದು ಶಾಸನ ಕೃಷ್ಣದೇವರಾಯನ ಕುಟುಂಬ ಮತ್ತು ಸಿಂಹಾಸರೂಢನಾಗಿರುವುದನ್ನು ತಿಳಿಸುತ್ತದೆ.

ಮಲಪನಗುಡಿ ಪ್ರದೇಶದಲ್ಲಿ ವಿಜಯನಗರ ಕಾಲದಲ್ಲಿ ನಿರ್ಮಿಸಿದ ಐದನೇ ಸುತ್ತಿನ ಕೋಟೆಗೋಡೆಯ ಭಾಗಗಳನ್ನು ಊರಿನೊಳಗೆ ಕಾಣಬಹುದು. ಈ ಗ್ರಾಮದ ಮೂಲಕ ಪೂರ್ವ ಮತ್ತು ಪಶ್ಚಿಮವಾಗಿ ಹೊಸಪೇಟೆಯಿಂದ ಕಮಲಾಪುರಕ್ಕೆ ತೆರಳುವ ಮುಖ್ಯ ರಸ್ತೆಯಿದೆ. ಈ ರಸ್ತೆಯು ವಿಜಯನಗರ ಕಾಲದಲ್ಲಿ ಮುಖ್ಯ ರಸ್ತೆಯಾಗಿತ್ತು. ಅಂದಿನಿಂದ ಇಂದಿನವರೆಗೆ ಸದರಿ ರಸ್ತೆಯು ಬಳಕೆಯಲ್ಲಿರುವುದು ಗಮನಾರ್ಹ. ಇಂದಿಗೂ ಬಳಕೆಯಲ್ಲಿರುವ ರಸ್ತೆಯ ಎಡಭಾಗದಲ್ಲಿ ಕೂಪರಾಮ ಬಾವಿಯ ಮುಂಭಾಗದಲ್ಲಿ ಒಂದು ಪ್ರವೇಶದ್ವಾರ ಮಂಟಪವಿದೆ. ಮತ್ತೊಂದು ತಂಗುದಾಣ ಊರ ಮಧ್ಯೆಯಿದೆ. ಇದನ್ನು ಒಂದು ತಂಗುದಾಣ ಮತ್ತ ತಪಾಸಣಾ ಕೇಂದ್ರವಾಗಿ (Check-Post) ಬಳಸಿರುವ ಸಾಧ್ಯತೆಗಳಿವೆ.

ಈ ಬಾವಿಯನ್ನು ಅಷ್ಟಕೋನಾಕೃತಿಯಲ್ಲಿ ಕಟ್ಟಲಾಗಿದೆ. ಈ ದಾರಿಯಲ್ಲಿ ಹಾದು ಹೋಗುವ ವ್ಯಾಪಾರಿಗಳು ಪ್ರಯಾಣಿಕರು ಮತ್ತು ಸಾಮಾನ್ಯ ಜನ ನೀರಿನ ದಾಹವನ್ನು ನೀಗಿಸಿಕೊಳ್ಳಲು ಈ ರೀತಿಯ ವ್ಯವಸ್ಥೆಯನ್ನು ಮಾಡಲಾಗಿತ್ತು. ಈ ಬಾವಿಯ ಮೇಲೆ ಛಾವಣಿಯಿದ್ದು, ಒಳ ಭಾಗಗಳಲ್ಲಿ ಎಡ ಮತ್ತು ಬಲ ಭಾಗಗಳಲ್ಲಿ ಮೆಟ್ಟಿಲುಗಳಿವೆ. ಅಲ್ಲಿ ವರಾಂಡ ರೀತಿಯ ಆವರಣವಿದೆ. ಇಲ್ಲಿ ದಣಿದು ಬಂದು ಜನರು ನೀರು ಕುಡಿದು ಆರಾಮದಿಂದ ಕುಳಿತುಕೊಳ್ಳುವ ರೀತಿಯಲ್ಲಿ ವಿಶಾಲವಾಗಿ ನಿರ್ಮಿಸಲಾಗಿದೆ. ಈ ಆವರಣದ ಹೊರಭಾಗದಲ್ಲಿ ಸುತ್ತಲೂ ಗಿಡ ಮರಗಳನ್ನು ಬೆಳೆಸಿ ಅಲ್ಲಿಯೂ ಸಹಿತ ಜನರು ವಿಶ್ರಾಂತಿ ಪಡೆಯುತ್ತಿದ್ದರಬಹುದೆಂದು ಊಹಿಸಬಹುದು.

ಗ್ರಾಮದಲ್ಲಿರುವ ಕ್ರಿ.ಶ. ೧೪೧೨ರ ಒಂದನೇ ದೇವರಾಯನ ಕಾಲದ ಶಾಸನವು ಇಲ್ಲಿನ ದೇವಾಲಯವನ್ನು ಮಲ್ಲಿಕಾರ್ಜುನ ದೇವಾಲಯ ಎಂದು ಉಲ್ಲೇಖಿಸಿದೆ. ಬುಳ್ಳನಾಯಕನ ಮಗ ಹೆಗ್ಗಡೆ ಸೊವಣ್ಣನ್ನು ಮಾಳಿಗೆ-ಕೂಪ-ಆರಾಮ ಎನ್ನುವ ಬಾವಿ ಮತ್ತು ಅರವಟ್ಟಿಗೆಯನ್ನು ಕಟ್ಟಿಸಿದನೆಂದು ಶಾಸನವು ದಾಖಲಿಸಿದೆ.

ಶಾಸದಲ್ಲಿನ ಉಲ್ಲೇಖದಂತೆ ಬಿಸಿಲಹಳ್ಳಿ ಕಣಿವೆ ಮತ್ತು ಬಡವಲಿ ಕಣಿವೆ ಎರಡು ಕಣಿವೆಗಳು ಕೂಡುವ ರಸ್ತೆಯ ಮಧ್ಯದಲ್ಲಿ ಅರವಟ್ಟಿಗೆಯನ್ನು ಕಟ್ಟಲಾಗಿದೆ. ಬಹುಶಃ ಇಂದು

ನಮಗೆ ಹೊಸಪೇಟೆಗೆ ಹೋಗುವ ರಸ್ತೆಯ ಮಧ್ಯದಲ್ಲಿ ಕಂಡುಬರುವ ಕಂಬಗಳ ಮಂಟಪವು ಅಂದಿನ ಅರವಟ್ಟಿಗೆಯಾಗಿತ್ತು. ಅಲ್ಲಿಗೆ ಬರುವ ಪ್ರಯಾಣಿಕರಿಗೆ ಕುಳಿತುಕೊಳ್ಳುವ ಹಾಗೂ ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡಿದ್ದರು. ಸೊವಣ್ಣನ್ನು ಮೂರು ವೃತ್ತಿಯ ಭೂಮಿಯನ್ನು ಖರೀದಿಸಿ ಮೂರು ಜನ ಬ್ರಾಹ್ಮಣರಿಗೆ ನೀಡಿದನು ಮತ್ತು ಈ ಅರವಟ್ಟಿಗೆಯನ್ನು ಮತ್ತು ಬಾವಿಯನ್ನು ನೋಡಿಕೊಳ್ಳಲು ಅದರ ದುರಸ್ತಿ ಮಾಡಲು ಕೆಲವು ಜನರನ್ನು ನೇಮಿಸಿದನು ಎಂದು ಶಾಸನವು ದಾಖಲಿಸಿದೆ.

ದಾನ ನೀಡಿದ ಭೂಮಿಯಿಂದ ಬರುವ ಲಾಭವನ್ನು ಮೂರು ಭಾಗಗಳಾಗಿ ಮಾಡಿ ಅದರಲ್ಲಿ ಒಂದು ಭಾಗವನ್ನು ಅರವಟ್ಟಿಗೆಯನ್ನು ನೋಡಿಕೊಳ್ಳುವ ವಿರೂಪಣ್ಣನಿಗೆ ಕೊಡಬೇಕು, ಉಳಿದ ಎರಡು ಭಾಗದ ಲಾಭವನ್ನು ಅಲ್ಲಿ ಅರವಟ್ಟಿಗೆಗೆ ನೀರನ್ನು ತಂದು ಹಾಕುವವರಿಗೆ, ಅಲ್ಲಿ ಬೆಳೆಸಿದ ಗಿಡ ಮರಗಳಿಗೆ ನೀರು ಹಾಕುವರಿಗೆ ಮತ್ತು ಅದಕ್ಕೆ ಬೇಕಾದ ಅಗತ್ಯ ವಸ್ತುಗಳನ್ನು ಖರೀದಿಸಲು ಯಾವುದಾದರು ದುರಸ್ತಿ ಕೆಲಸಗಳಿಗೆ ಈ ಹಣವನ್ನು ಬಳಸಬೇಕೆಂದು ಶಾಸನ ದಾಖಲಿಸಿದೆ. ಶಾಸನದ ಕೊನೆಯ ಸಾಲಿನಲ್ಲಿ ಈ ಅರವಟಿಗೆಯನ್ನು ವಿರೂಪಣ್ಣನ ನಂತರ ಅವನ ಮಗನು ನೋಡಿಕೊಳ್ಳುವುದು ಎಂದು ಅವರ ವಂಶದವರಿಗೆ ಅಧಿಕಾರವನ್ನು ನೀಡಿರುವ ಮಾಹಿತಿಯು ಗಮನಾರ್ಹ. ಒಂದು ವೇಳೆ ಅವರು ಅರವಟ್ಟಿಗೆಯನ್ನು ನೋಡುಕೊಳ್ಳುವುದನ್ನು ಬಿಟ್ಟರೆ ಬೇರೆ ಯಾರಾದರು ನೋಡಿಕೊಳ್ಳಬಹುದು. ಅರವಟ್ಟಿಗೆಯಲ್ಲಿ ಉಪಯೋಗಿಸುವ ನಾಲ್ಕು ರೀತಿಯ ವಸ್ತುಗಳನ್ನು ಸಹ ಈ ಶಾಸನವು ದಾಖಲಿಸಿದೆ.

೧. "ಗುಡಾನ" ಎಂದರೆ ನೀರನ್ನು ಸಂಗ್ರಹ ಮಾಡುವ ದೊಡ್ಡ ಗಡಗೆ/ಹರಿವಿ.

೨. ಬಿಂದಿಗೆ–ಮಧ್ಯಮ ಅಳತೆಯ ಮಡಿಕೆ ಈ ಮಡಿಕೆಯ ಕಂಠಭಾಗ ಸ್ವಲ್ಪ ಉದ್ದವಾಗಿರುತ್ತದೆ. ನೀರನ್ನು ತಂದು ಹಾಕಲು ಬಳಸುವರು.

೩. ಕರಗ–ಒಂದು ರೀತಿ ನೀರನ್ನು ಸಂಗ್ರಹ ಮಾಡುವ ಅಗಲ ಬಾಯಿಯನ್ನು ಹೊಂದಿದ ಮಡಿಕೆ.

೪. ಮೊಘ–ಇದು ಸಣ್ಣ ಮಡಿಕೆ. ಇದನ್ನು ನೀರನ್ನು ಬಳಸಿಕೊಳ್ಳಲು ಉಪಯೋಗಿಸುವ ಮಡಿಕೆ.[೪೭]

ಮಲ್ಲಿಕಾರ್ಜುನ ದೇವಾಲಯದ ಗರ್ಭಗೃಹದ ಪಶ್ಚಿಮ ದಿಕ್ಕಿನ ಹೊರಬದಿಯ ಗೋಡೆಯಲ್ಲಿ ಉತ್ತರ ದಕ್ಷಿಣಾಭಿಮುಖವಾಗಿ ಶಾಸನವಿದೆ. ಇದು ೧೭ ಸಾಲುಗಳುಳ್ಳ ೧೬ನೇ

ಶತಮಾನದ ಶಾಸನವಾಗಿದ್ದು ಅದರಲ್ಲಿ ಕೃಷ್ಣದೇವರಾಯನ ತಂದೆ, ತಾಯಿ ಮತ್ತು ಸಹೋದರನಾದ ವೀರನರಸಿಂಹನ ಉಲ್ಲೇಖವಿದೆ. ಇವರನ್ನು ಶ್ರೀರಾಮ-ಲಕ್ಷಣರಿಗೆ ಹೋಲಿಸಲಾಗಿದೆ. ವೀರನರಸಿಂಹನ ನಂತರ ಕೃಷ್ಣದೇವರಾಯನು ಸಿಂಹಾಸರೂಢನಾದ ಕುರಿತು ತಿಳಿಸುತ್ತದೆ.[೫೦]




ಮಲ್ಲಿಕಾರ್ಜುನ ದೇವಾಲಯ, ಮಲಪಗುಡಿ




ಕೂಪಾರಾಮ ವಾಟಿಕ, ಮಲಪಗುಡಿ



ಮಾಳಿಗೆ–ಕೂಪ ಆರಾಮ ನಕ್ಷೆ, ಮಲಪಗುಡಿ




ಮಾಳಿಗೆ-ಕೂಪ ಆರಾಮ, ಮಲಪನಗುಡಿ




ಮಾಳಿಗೆ-ಕೂಪ ಆರಾಮ ನಕ್ಷೆ, ಮಲಪನಗುಡಿ

ಕೃಪೆ : Channabasappaa S. Patil, *Vijayanagaar Progress of Research 1984-87*




ವಿಶ್ರಾಂತಿ ಮಂಟಪ, ಮಲಪನಗುಡಿ




ವಿಶ್ರಾಂತಿ ಮಂಟಪದ ಮತ್ತೊಂದು ಭಾಗ, ಮಲಪನಗುಡಿ

**ಕೊಂಡನಾಯಕನಹಳ್ಳಿ**

ಕೊಂಡನಾಯಕನಹಳ್ಳಿಯು (೧೫°೨೬೮೮೭೨ ಉತ್ತರ ಅಕ್ಷಾಂಶ, ೭೬°೩೯೦೬೧ ಪೂರ್ವ ರೇಖಾಂಶ) ಹೊಸಪೇಟೆಯ ಪೂರ್ವಕ್ಕೆ ೫ ಕಿ.ಮೀ. ದೂರದಲ್ಲಿ ಮಲಪನಗುಡಿ ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿದೆ. ಈ ಗ್ರಾಮವು ೧,೦೪೨.೪೦ ಹೆಕ್ಟೇರ್ ವಿಸ್ತೀರ್ಣವಾಗಿದ್ದು ಅದರಲ್ಲಿ ೧,೦೨೦ ಮನೆಗಳಿದ್ದು, ಅಲ್ಲಿನ ಒಟ್ಟು ಜನಸಂಖ್ಯೆ ೫,೫೪೫. ಈ ಪ್ರದೇಶದಲ್ಲಿ ವಿಜಯನಗರ ಕಾಲದ ಕೋಟೆಗೋಡೆ ಮತ್ತು ಬುರುಜಿನ ಅವಶೇಷವಿದೆ.

**ಅನಂತಶಯನಗುಡಿ**

ಅನಂತಶಯನಗುಡಿಯು (೧೫°೧೬'೪೨.೫ ಉತ್ತರ ಅಕ್ಷಾಂಶ' ೭೬°೨೫'೧೬.೮ ಪೂರ್ವ ರೇಖಾಂಶ) ಹೊಸಪೇಟೆಯಿಂದ ೧ ಕಿಮೀ ಪೂರ್ವಕ್ಕೆ ಕಮಲಾಪುರಕ್ಕೆ ಹೋಗುವ ಮಾರ್ಗದಲ್ಲಿದೆ. ಇದರ ವಿಸ್ತೀರ್ಣ ೪೨.೯೮ ಹೆಕ್ಟೇರ್ ಆಗಿದ್ದು, ಅದರಲ್ಲಿ ೧,೦೦೦ ಮನೆಗಳಿವೆ. ಒಟ್ಟು ಜನಸಂಖ್ಯೆಯು ೫,೪೨೫. ವಿಸ್ತೀರ್ಣ ೪೨.೯೮ ಹೆಕ್ಟೇರ್ ಆಗಿದ್ದು, ಅದರಲ್ಲಿ ೧,೦೦೦ ಮನೆಗಳಿವೆ. ಒಟ್ಟು ಜನಸಂಖ್ಯೆಯು ೫,೪೨೫.




50 m

ಅನಂತಶಯನಗುಡಿಯಲ್ಲಿ ವಿಜಯನಗರ ಕಾಲದ ಅನಂತಶಯನ ದೇವಾಲಯ ಮಾತ್ರವಿದೆ. ಕೃಷ್ಣದೇವರಾಯನು ತನ್ನ ಮಗ ಸಾಲೆತಿರುಮಲನ ಹೆಸರಿನಲ್ಲಿ ಅನಂತಶಯನ ದೇವಾಲಯವನ್ನು ನಿರ್ಮಿಸಿದನು. ಈ ಪ್ರದೇಶವನ್ನು ಸಾಲೆ–ತಿರುಮಲ ಮಹಾರಾಯಪುರಂ ಎಂದು ಶಾಸನ ಹೆಸರಿಸಿದೆ[೫೧] ಎಂದು ಕ್ರಿ.ಶ. ೧೫೨೪ರ ಕೃಷ್ಣದೇವರಾಯನ ಶಾಸನದಿಂದ ಮಾಹಿತಿಯು ದೊರಕುತ್ತದೆ.[೫೨] ಕೃಷ್ಣದೇವರಾಯನ ಕಾಲದಲ್ಲಿ ಮಗನ ನೆನಪಿಗಾಗಿ ಅವನ ಹೆಸರಿನಲ್ಲಿ ಪುರವನ್ನು ನಿರ್ಮಾಣ ಮಾಡಿದನು. ಕಮಲಾಪುರ, ನಾಗಲಾಪುರ ಮುಂತಾದ ಪುರಗಳ ಹಾಗೆ ಈ ಪುರವು ಎಲ್ಲ ಸೌಕರ್ಯವನ್ನು ಹೊಂದಿದ ಪುರವಾಗಿ ಬೆಳೆವಣಿಗೆ ಹೊಂದಿತ್ತು. ನಂತರದಲ್ಲಿ ದೇವಾಲಯವು ಪಾಲು ಬೀಳಲಾಗಿ, ಸದರಿ ಪುರವು ಹೊಸಪೇಟೆಯ ಉಪನಗರವಾಗಿ ಉಳಿದುಬಂದಿದೆ. ಒಂದು ಚಿಕ್ಕ ಗ್ರಾಮವಾಗಿ ಬೆಳವಣಿಗೆ ಹೊಂದಿದೆ.

**ತಿರುಮಲಮ್ಮನವರ ಪಟ್ಟಣ**

ತಿರುವೇಂಗಳನಾಥ ದೇವಾಲಯಕ್ಕೆ ತಿರುಮಲಾದೇವಿಪಟ್ಟಣವನ್ನು ಕೃಷ್ಣದೇವರಾಯನು ದಾನ ಮಾಡಿದ ವಿಷಯವನ್ನು ಶಾಸನವು ದಾಖಲಿಸುವುದರಿಂದ ಈ ಪಟ್ಟಣವನ್ನು ಅವನೇ ನಿರ್ಮಿಸಿರುವ ಸಾಧ್ಯತೆಗಳಿವೆ. ತಿರುಮಲಾದೇವಿಪಟ್ಟಣವು ಹೊಸಪೇಟೆಯ ಸಣ್ಣಕ್ಕಿ ವೀರಭದ್ರ ದೇವಾಲಯದ ಸುತ್ತಲಿನ ಪ್ರದೇಶವೆಂದು ಗುರುತಿಸಲಾಗುತ್ತದೆ. ಇಂದು ಹೊಸಪೇಟೆ ಪಟ್ಟಣದ ಭಾಗವಾಗಿರುವುದರಿಂದ ಪ್ರಾಚೀನ ಅವಶೇಷಗಳು ಅಷ್ಟಾಗಿ ಕಾಣಸಿಗುವುದಿಲ್ಲ.[೫೩]

ವಿಜಯನಗರ ಕಾಲದಲ್ಲಿ ದೇಶಿಯ ಮತ್ತು ವಿದೇಶಿಯರು ಪಟ್ಟಣದ ಮೂಲಕ ಪ್ರವೇಶವನ್ನು ಪಡೆಯುತ್ತಿದ್ದ ವಿಷಯವನ್ನು ವಿದೇಶಿ ಪ್ರವಾಸ ಕಥಾನಕಗಳು ದಾಖಲಿಸಿವೆ. ಮೊದಲು ಕೋಟೆಗೋಡೆಯಿದ್ದು ಇಂದು ನಾಶವಾಗಿದೆ.[೫೪]

**ನಾಗಲಾಪುರ (ನಾಗೇನಹಳ್ಳಿ)**

ನಾಗಲಾಪುರವು (೧೫°೨೯'೭೫೬ ಉತ್ತರ ಅಕ್ಷಾಂಶ, ೭೬°೪೦.೩೩೭೦ ಪೂರ್ವ ರೇಖಾಂಶ)ಹೊಸಪೇಟೆ ತಾಲೂಕಿನ ಹತ್ತಿರದ ಗ್ರಾಮವಾಗಿದೆ. ಇಂದು ಇದು ಒಂದು ಚಿಕ್ಕ ಗ್ರಾಮವಾಗಿದ್ದು ಅನಂತಶಯನ ದೇವಾಲಯದ ಎದುರು ಇರುವ ರಸ್ತೆಯ ಮೂಲಕ ತಲುಪಬಹುದು. ಇದು ೨,೯೮೩.೧೨, ಹೆಕ್ಟೇರ್ ಪ್ರದೇಶವನ್ನು ಹೊಂದಿದೆ ಹಾಗೂ ಅಲ್ಲಿ ಒಟ್ಟು ೯೪೫ ಮನೆಗಳಿವೆ. ಈ ಗ್ರಾಮದಲ್ಲಿ ವಿಜಯನಗರ ಪೂರ್ವ ಕಾಲದ ಪ್ರಾಕ್ತನ ಅವಶೇಷಗಳು ದೊರೆತಿಲ್ಲ. ನಾಗಲಾದೇವಿ ಹೆಸರಿನಲ್ಲಿ ನಾಗಲಾಪುರ ಗ್ರಾಮವನ್ನು ನಿರ್ಮಾಣ ಮಾಡಿದನೆಂದು




ರಂಗನಾಥ ದೇವಾಲಯದಲ್ಲಿನ ಕ್ರಿ.ಶ. ೧೫೧೬ರ ಶಾಸನ ದಾಖಲಿಸಿದೆ. ಗ್ರಾಮವನ್ನು ರಂಗನಾಥ ದೀಕ್ಷಿತನು ಕೃಷ್ಣದೇವರಾಯನಿಂದ ದಾನವಾಗಿ ಪಡೆದನು. ನಂತರ ಕೃಷ್ಣದೇವರಾಯನು ತನ್ನ




ನಾಗೇನಹಳ್ಳಿ




ನಾಗೇನಹಳ್ಳಿಯ ರಂಗನಾಥ ದೇವಾಲಯ

ತಾಯಿ ನಾಗಲಾದೇವಿಗೆ ಪುಣ್ಯವಾಗಲೆಂದು ನಾಗಸಮುದ್ರ ಎನ್ನುವ ಕೆರೆ, ನಾಗೇಶ್ವರ ದೇವಾಲಯ ಮತ್ತು ನಾಗೇಂದ್ರಶಯನ ಹೆಸರಿನ ವಿಷ್ಣು ದೇವಾಲಯವನ್ನು ಕಟ್ಟಿಸಿ ಅದಕ್ಕೆ ನಾಗಲಾದೇವಿಪುರ ಎಂದು ಹೆಸರಿಸಿದನು.[೫೫]

ಕೃಷ್ಣದೇವರಾಯನ ಕಾಲದಲ್ಲಿ ಒಂದು ಪುರವಾಗಿ ಅದರಲ್ಲೂ ಅಗ್ರಹಾರವಾಗಿ ಬೆಳೆದು ಬಂದಿತ್ತು. ನಾಗಲಾಪುರದ ಇಂದಿನ ಹೆಸರು ನಾಗೇನಹಳ್ಳಿ. ಕೃಷ್ಣದೇವರಾಯನ ವಿಜಯನಗರ ಕಾಲದಲ್ಲಿ ಸ್ಥಾಪಿತವಾದ ಈ ಗ್ರಾಮವು ಇಂದಿಗೂ ಜನವಸತಿ ಗ್ರಾಮವಾಗಿ ಉಳಿದುಬಂದಿದೆ.

**ಗುಡಿಓಬಳಾಪುರ (ಬಸವನದುರ್ಗ)**

ಗುಡಿಓಬಳಾಪುರ ಪ್ರದೇಶವು ಹೊಸಪೇಟೆಯಿಂದ ೪ ಕಿ.ಮೀ. ದೂರದಲ್ಲಿದೆ. ಅನಂತಶಯನಗುಡಿ ಎದುರು ಇರುವ ರಸ್ತೆಯ ಮೂಲಕ ತಲಪಬಹುದು. ಗುಡಿಓಬಳಾಪುರವು ಇಂದು ಯಾವುದೇ ಜನ ವಸತಿಯಿಲ್ಲದ ಪ್ರದೇಶವಾಗಿದ್ದು, ಬೆಟ್ಟ-ಗುಡ್ಡಗಳಿಂದ ಕೂಡಿದೆ. ವ್ಯವಸಾಯದ ಗದ್ದೆಗಳಿಂದ ಸುತ್ತವರೆದಿದ್ದು ಇದನ್ನು ಬಸವನದುರ್ಗ ಗ್ರಾಮದ ವ್ಯಾಪ್ತಿಗೆ ಸೇರಿಸಲಾಗಿದೆ.




500 m

ಈ ಪ್ರದೇಶದಲ್ಲಿರುವ ಬೆಟ್ಟದಲ್ಲಿ ಶಿಲಾತಾಮ್ರಯುಗದ ಗೀರುಚಿತ್ರಗಳಿವೆ. ಅದೇ ಬೆಟ್ಟದ ಮೇಲೆ ಶ್ರೀಚನ್ನಬಸವೇಶ್ವರಸ್ವಾಮಿ ಮತ್ತು ಶ್ರೀನಿಜಲಿಂಗಮ್ಮ ದೇವಿಯ ದೇವಾಲಯಗಳಿವೆ. ಅವುಗಳನ್ನು ಮೆಟ್ಟಿಲುಗಳ ಮೂಲಕ ತಲುಪಬಹುದು. ಮತ್ತೊಂದು ಭಾಗದಲ್ಲಿ ಕೃಷ್ಣದೇವರಾಯನ




**ಗುಡಿಓಬಳಾಪುರ ಅಥವಾ ಬಸವನದುರ್ಗ: ಶಿವ ದೇವಾಲಯ**

ಕಾಲದಲ್ಲಿ ನಿರ್ಮಿಸಿದ ಶಿವ ದೇವಾಲಯ ಮತ್ತು ಪುಷ್ಕರಣಿಯಿದೆ. ಶಿವ ದೇವಾಲಯದ ಗರ್ಭಗೃಹದ ಶಿಖರ ಭಾಗವು ನಾಶವಾಗಿದ್ದು ಶಿವಲಿಂಗವನ್ನು ಗರ್ಭಗೃಹದ ಮುಖಮಂಟಪದಲ್ಲಿ




**ಶಿವ ದೇವಾಲಯ ಪುಷ್ಕರಣಿ, ಗುಡಿಓಬಳಾಪುರ**




**ಗುಡಿಓಬಳಾಪುರ**

ಸ್ಥಾಪಿಸಲಾಗಿದೆ. ಮುಂಭಾಗದಲ್ಲಿ ನವರಂಗ ಹಾಗೂ ದೀಪಸ್ಥಂಭವಿದೆ. ದೇವಾಲಯದ ಹಿಂಭಾಗದ ರಸ್ತೆಯ ಮತ್ತೊಂದು ಭಾಗದಲ್ಲಿ ವಿಜಯನಗರ ಕಾಲದ ಆಂಜನೇಯನ ಹಾಳುಬಿದ್ದ ದೇವಾಲಯವಿದೆ.




**ನಿಜಲಿಂಗಮ್ಮ ದೇವಾಲಯ, ಗುಡಿ ಓಬಳಾಪುರ**

**ಕಾಳಘಟ್ಟ**

ಕಾಳಘಟ್ಟವು ಹೊಸಪೇಟೆಯಿಂದ ೫ ಕಿ.ಮೀ. ದೂರದಲ್ಲಿದೆ. ಅನಂತಶಯನಗುಡಿಯ ಎದುರು ಇರುವ ಒಳ ರಸ್ತೆಯ ಮೂಲಕ ತಲುಪಬಹುದು. ಪ್ರಾಗಿತಿಹಾಸ ಕಾಲದ ಅವಶೇಷಗಳು ಅಲ್ಪ ಪ್ರಮಾಣದಲ್ಲಿ ದೊರಕಿವೆ. ಗ್ರಾಮದ ಬಹುಭಾಗಗಳು ವ್ಯವಸಾಯ ಭೂಮಿಯಿಂದ ಕೂಡಿದ್ದು ಅಲ್ಲಿನ ಬಹುತೇಕ ಪ್ರಾಚೀನ ಕಟ್ಟಡಗಳು ನಾಶವಾಗಿರುವ ಸಾಧ್ಯತೆಗಳಿವೆ. ಗದ್ದೆಯಲ್ಲಿ ಕಟ್ಟಡದ ಅವಶೇಷಗಳ ಭಾಗಗಳು ವ್ಯಾಪಿಸಿವೆ. ಮುಂಬರುವ ದಿನಗಳಲ್ಲಿ ಇಲ್ಲಿ ಅವಶೇಷಗಳು ದೊರೆಯುವ ಸಾಧ್ಯತೆಯಿದೆ. ಗ್ರಾಮದ ಹೊರವಲಯವು ಕೃಷಿಗೆ ಒಳಪಟ್ಟಿದೆ.

ಒಂದು ಗದ್ದೆಯಲ್ಲಿ ವಿಜಯನಗರ ಕಾಲದ ಮಂಟಪವನ್ನು ಹೊರತುಪಡಿಸಿ ಯಾವ ಅವಶೇಷಗಳು ದೊರೆತಿಲ್ಲ. ಆದರೆ ಗ್ರಾಮವು ಇಂದಿಗೂ ಜನವಸತಿ ಪ್ರದೇಶವಾಗಿದೆ ಹಾಗೂ

ಗ್ರಾಮದಲ್ಲಿ ಕೃಷಿ ಚಟುವಟಿಕೆ ಅಧಿಕವಾಗಿರುವುದರಿಂದ ಪ್ರಾಚೀನ ಅವಶೇಷಗಳು ನಾಶಗೊಳ್ಳುತ್ತಲಿವೆ.




500 m



ಕಾಳಘಟ್ಟದ ವಿಜಯನಗರ ಕಾಲದ ಮಂಟಪ

## ರಾಮಸಾಗರ

ರಾಮಸಾಗರವು (೧೫°೨೫೩೮ ಉತ್ತರ ಅಕ್ಷಾಂಶ; ೭೬°೩೩೨೮ ಪೂರ್ವ ರೇಖಾಂಶ) ಹೊಸಪೇಟೆಯಿಂದ ಕಂಪ್ಲಿಗೆ ಹೋಗುವ ಮಾರ್ಗದಲ್ಲಿ ಹೊಸಪೇಟೆಯಿಂದ ೨೫ ಕಿ.ಮೀ. ದೂರದಲ್ಲಿದೆ. ೩೦ ಹೆಕ್ಟೇರ್ ಪ್ರದೇಶದಲ್ಲಿ ವ್ಯಾಪಿಸಿದ್ದು ಒಟ್ಟು ೭೦೫ ಮನೆಗಳಿವೆ ಅದರಲ್ಲಿ ೩,೪೨೫ ಜನಸಂಖ್ಯೆಯಿದೆ.




ರಾಮಸಾಗರದಲ್ಲಿ ವಿಜಯನಗರ ಕಾಲದ ಕೆರೆಯಿದೆ. ಆ ಕೆರೆಗೆ ತೂಬು ಇದೆ. ಊರ ಬಸ್ ನಿಲ್ದಾಣದಲ್ಲಿ ನಗರೇಶ್ವರ ದೇವಾಲಯವಿದೆ. ಇದರಲ್ಲಿ ಎರಡು ಶಿಖರಗಳಿವೆ. ಗರ್ಭಗೃಹದಲ್ಲಿ ಚಿಕ್ಕ ಶಿವಲಿಂಗ ಮತ್ತು ಮುಖಮಂಟಪದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಒಳಭಾಗವನ್ನು ನವೀಕರಣಗೊಳಿಸಲಾಗಿದ್ದು ಗರ್ಭಗೃಹದ ಮೇಲೆ ಇಟ್ಟಿಗೆಯ ಶಿಖರವಿದೆ. ಈ ಗೋಪುರದಲ್ಲಿ ಚಿಕ್ಕ ಚಿಕ್ಕ ಗಾರೆಯ ಶಿಲ್ಪಗಳಿವೆ. ದೇವಾಲಯದ ಹೊರಗೋಡೆಗೆ ಮತ್ತು ಗೋಪುರಕ್ಕೆ ಸುಣ್ಣವನ್ನು ಹಚ್ಚಲಾಗಿದೆ. ಈ ದೇವಾಲಯದ ಹೊರಗೆ ದ್ವಾರಗೋಪುರವಿದೆ. ದೇವಾಲಯದ ಗೋಡೆಯ ಸುತ್ತಲೂ ಪಡಸಾಲೆ ರೀತಿಯಲ್ಲಿದ್ದು ಗೋಡೆಯ ಮೇಲೆ ಇಟ್ಟಿಗೆ ಗೂಡಿದೆ. ಈ ಗೂಡಿನಲ್ಲಿ ಮಣ್ಣಿನ ವಿವಿಧ ವೈಷ್ಣವ ಮತ್ತು ಶೈವ ಶಿಲ್ಪಗಳಿವೆ. ಕೆಲವು

ಗೂಡಿನಲ್ಲಿದ್ದ ಶಿಲ್ಪಗಳು ಹಾಳಾಗಿವೆ. ಮುಖ್ಯ ದ್ವಾರದ ಗೋಪುರದ ಮೇಲೆ ವಿವಿಧ ಮಣ್ಣಿನ ಶಿಲ್ಪಗಳಿವೆ. ಕೆಲವು ಗೂಡುಗಳ ಶಿಲ್ಪಗಳು ಹಾಳಾಗಿವೆ. ಒಳಭಾಗದಲ್ಲಿ ಗೋಪುರದ ಪಟ್ಟಿಕೆಯಲ್ಲಿ ರಂಗನಾಥನ ಶಿಲ್ಪವಿದೆ. ಗೋಪುರಕ್ಕೆ ಸುಣ್ಣವನ್ನು ಬಳಿದಿರುವುದರಿಂದ ಸಂಪೂರ್ಣವಾಗಿ ಗೋಚರಿಸುವುದಿಲ್ಲ. ಯುಗಾದಿ ದಿನದಂದು ದೇವಾಲಯದ ಜಾತ್ರೆಯ ನಡೆಯುತ್ತದೆ.



ರಾಮಸಾಗರ


ರಾಮಸಾಗರ

ಕೆರೆಗೆ ಹೋಗುವ ರಸ್ತೆಯಲ್ಲಿ ವಿಜಯನಗರೋತ್ತರ ಕಾಲದ ರಾಮಲಿಂಗ ದೇವಾಲಯವಿದೆ. ಇದರ ಗರ್ಭಗೃಹದಲ್ಲಿ ಶಿವಲಿಂಗ ಹಾಗೂ ಅಂತರಾಳದಲ್ಲಿ ನಂದಿಯ ಶಿಲ್ಪವಿದೆ. ಇದರ ಮುಂಭಾಗದಲ್ಲಿ ಮುಖಮಂಟಪವಿದ್ದು ದ್ವಾರದ ಮುಂಭಾಗದಲ್ಲಿ ವಿಶಾಲವಾದ ಪ್ರಾಂಗಣವಿದೆ.




ನಗರೇಶ್ವರ ದೇವಾಲಯ, ರಾಮನಗರ



ನಗರೇಶ್ವರ ದೇವಾಲಯದ ಒಳನೋಟ, ರಾಮನಗರ

**ಕಣಿವೆ ತಿಮಲಾಪುರ**




1 km

ಕಣಿವೆ ತಿಮಲಾಪುರ ಗ್ರಾಮವು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ಚಿಕ್ಕ ಗ್ರಾಮ. ಹೊಸಪೇಟೆಯಿಂದ ಕಂಪ್ಲಿಗೆ ಹೋಗುವ ಮಾರ್ಗದಲ್ಲಿರುವ ಗ್ರಾಮ. ಹೊಸಪೇಟೆಯಿಂದ ೨೫ ಕಿ.ಮೀ. ದೂರದಲ್ಲಿರುವ ಗ್ರಾಮವು ೨೮೩.೬ ಹೆಕ್ಟೇರ್ ಪ್ರದೇಶದಲ್ಲಿ ವ್ಯಾಪಿಸಿದೆ. ಜನಸಂಖ್ಯೆ ೨೮೧ ಈ ಗ್ರಾಮವನ್ನು ತಲುಪಲು ಎರಡು ಮಾರ್ಗಗಳಿವೆ. ಒಂದು ವೆಂಕಟಾಪುರದಿಂದ ಬುಕ್ಕಸಾಗರ, ರಾಮಸಾಗರದ ಒಳ ರಸ್ತೆಯಿಂದ ಗ್ರಾಮಕ್ಕೆ ಹೋಗಬೇಕು. ಮತ್ತೊಂದು ಕಂಪ್ಲಿಯಿಂದ ರಾಮಸಾಗರಕ್ಕೆ ಬರುವ ಮೊದಲು ಒಳ ರಸ್ತೆಯ ಮಾರ್ಗ.

ಇಂದು ಈ ಗ್ರಾಮದಲ್ಲಿ ಹೆಚ್ಚಾಗಿ ಕೃಷಿಕರು ವಾಸವಾಗಿದ್ದಾರೆ. ಇಲ್ಲಿ ಯಾವುದೇ ರೀತಿಯ ಪ್ರಾಗಿತಿಹಾಸ ಕಾಲದ ನೆಲೆಗಳು ದೊರಕಿಲ್ಲ. ಚಾರಿತ್ರಿಕ ಕಾಲದ ನೆಲೆಯ ಕುರುಹಾಗಿ ವಿಜಯನಗರ ಕಾಲದ ಒಂದು ದೇವಾಲಯವಿದೆ. ವಿಜಯನಗರ ಕಾಲದ ಚನ್ನಿಗರಾಯ ದೇವಾಲಯವು ಊರಿನ ಕೇಂದ್ರ ಸ್ಥಳದಲ್ಲಿದೆ. ಗರ್ಭಗೃಹದಲ್ಲಿ ಶಿವಲಿಂಗ ಮತ್ತು ಇತರೆ ಶಿಲ್ಪಗಳಿವೆ. ಇವರ ಕಾಲದ ಮತ್ತೊಂದು ದೇವಾಲಯವು ಊರ ಹೊರ ಭಾಗದಲ್ಲಿದೆ. ಈ ದೇವಾಲಯವನ್ನು ನಿಲಗಲ್ ಬಸವೇಶ್ವರ ದೇವಾಲಯವೆಂದು ಕರೆಯಲಾಗುತ್ತದೆ.

ನವರಂಗದಲ್ಲಿನ ವಿಜಯನಗರದ ಕಾಲದ ಕಂಬಗಳನ್ನು ಬಳಸಲಾಗಿದೆ. ಇತ್ತೀಚಿಗೆ ದೇವಾಲಯವನ್ನು ನವೀಕರಿಸಿದ್ದು ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಹೊರ ಭಾಗದಲ್ಲಿ ವಿಜಯನಗರ ಕಾಲದ ಕೆಲವು ಕಂಬಗಳಿವೆ.




ಚನ್ನಿಗರಾಯ ವಿಜಯನಗರ ಕಾಲದ ದೇವಾಲಯ ಪಾರ್ಶ್ವ ನೋಟ, ಕಣಿವೆ ತಿಮ್ಮಾಪುರ




ಚನ್ನಿಗರಾಯ ವಿಜಯನಗರ ಕಾಲದ ದೇವಾಲಯ



ವಿಜಯನಗರ ಕಾಲದ ನಿಲಗಲ್ ಬಸವೇಶ್ವರ ದೇವಾಲಯ



ವಿಜಯನಗರ ಕಾಲದ ನಿಲಗಲ್ ಬಸವೇಶ್ವರ ದೇವಾಲಯ

## ಬುಕ್ಕಸಾಗರ

ಬುಕ್ಕಸಾಗರ (೧೫°೨೦೩೪ ಉತ್ತರ ಅಕ್ಷಾಂಶ; ೭೬°೩೧೨೬ ಪೂರ್ವ ರೇಖಾಂಶ) ಹೊಸಪೇಟೆಯಿಂದ ಕಂಪ್ಲಿಗೆ ಹೋಗುವ ಮಾರ್ಗದಲ್ಲಿ ಹೊಸಪೇಟೆಯಿಂದ ಸುಮಾರು ೨೦ ಕಿ.ಮೀ. ದೂರದಲ್ಲಿದೆ. ಗ್ರಾಮವು ೧,೪೦೩.೨೪ ಹೆಕ್ಟೇರ್ ಪ್ರದೇಶದಲ್ಲಿ ಸುಮಾರು ೨೦ ಕಿ.ಮೀ.

ದೂರದಲ್ಲಿದೆ. ಗ್ರಾಮವು ೧,೪೦೩.೨೪ ಹೆಕ್ಟೇರ್ ಪ್ರದೇಶದಲ್ಲಿ ವ್ಯಾಪಿಸಿದ್ದು ಅಲ್ಲಿ ಒಟ್ಟು ೯೦೭ ಮನೆಗಳು ಹಾಗೂ ಒಟ್ಟು ೪,೫೪೭. ಜನಸಂಖ್ಯೆಯಿದೆ.




ಬುಕ್ಕಸಾಗರ ಗ್ರಾಮದಲ್ಲಿ ವಿಜಯನಗರ ಕಾಲದ ವೀರಭದ್ರನ ದೇವಾಲಯವಿದೆ ಅದರಲ್ಲಿ ವೀರಭದ್ರನ ಮೂರ್ತಿಶಿಲ್ಪವಿದೆ. ಮುಖಮಂಟಪದಲ್ಲಿರುವ ಮತ್ತೊಂದು ಗರ್ಭಗೃಹದಲ್ಲಿ ದೇವಿಯ ಶಿಲ್ಪವಿದೆ. ಇಂದು ದೇವಾಲಯಕ್ಕೆ ಬಣ್ಣವನ್ನು ಬಳಿದು ನವೀಕರಣಗೊಳಿಸಲಾಗಿದೆ. ಇದರ ಪಕ್ಕದಲ್ಲಿಯೇ ಬಸವಣ್ಣ ದೇವಾಲಯವಿದೆ. ಈ ದೇವಾಲಯದಲ್ಲಿ ಗರ್ಭಗೃಹ ಹಾಗೂ ಮುಖಮಂಟಪವಿದೆ. ಗರ್ಭಗೃಹದಲ್ಲಿ ವಿಜಯನಗರ ಕಾಲದ ಪಂಚಲಿಂಗ, ನಂದಿ ಮತ್ತು ಶೈವ ಶಿಲ್ಪವಿದೆ. ಇವುಗಳು ಬಿಡಿ ಶಿಲ್ಪವಾಗಿರುವುದರಿಂದ ಬೇರೆ ದೇವಾಲಯದಿಂದ ತಂದು ಇಲ್ಲಿ ಇರಿಸಲಾಗಿರಬಹುದು. ದೇವಾಲಯದ ಬಾಗಿಲವಾಡದ ಕೆಳಗೆ ಇರುವ ವೈಷ್ಣವ ದ್ವಾರಪಾಲಕರ ಶಿಲ್ಪಗಳಲ್ಲಿ ಶಂಖ, ಚಕ್ರ ಮತ್ತು ಗದೆ ಇವೆ.

ಊರ ಒಳಭಾಗದಲ್ಲಿ ಲಕ್ಷ್ಮೀವೆಂಕಟನರಸಿಂಹ ದೇವಾಲಯವಿದೆ. ಗರ್ಭಗೃಹದಲ್ಲಿ ವಿಷ್ಣುವಿನ ಶಿಲ್ಪವಿದೆ. ದೇವಾಲಯವು ಸಂಪೂರ್ಣವಾಗಿ ನವೀಕರಣಗೊಂಡಿರುವುದರಿಂದ ಕಾಲವನ್ನು ಊಹಿಸವುದು ಕಷ್ಟಸಾಸಾಧ್ಯ. ಇಂದಿನ ಬುಕ್ಕಸಾಗರ ನಾಲೆಯ ಮುಂಭಾಗದಲ್ಲಿ ಕರಿಸಿದ್ಧೇಶ್ವರ ಮಠವಿದೆ. ವಿಜಯನಗರೋತ್ತರ ಕಾಲದ ದೇವಾಲಯದ ಗರ್ಭಗೃಹದಲ್ಲಿ

ಆತ್ಮಲಿಂಗ ಎಂದು ಕರೆಯಲಾಗುವ ಶಿವಲಿಂಗವಿದೆ. ಮಂಟಪದಲ್ಲಿರುವ ಶಿವಲಿಂಗದಿಂದ ಉದ್ಭವವಾದ ರೇಣುಕಾರ್ಯ ಎಂದು ನಂಬಲಾದ ಶಿಲ್ಪವನ್ನು ಸ್ಥಾಪಿಸಲಾಗಿದೆ. ಹೊರಭಾಗದಲ್ಲಿ ಮತ್ತೊಂದು ಗರ್ಭಗೃಹದಲ್ಲಿ ವೀರಭದ್ರನ ಶಿಲ್ಪವಿದೆ. ಇದು ವಿಶಾಲವಾದ ಮಠವಾಗಿದ್ದು ಅದರಲ್ಲಿ ಎಲ್ಲಾ ರೀತಿಯ ಅನುಕೂಲತೆಗಳಿವೆ.




ವಿಜಯನಗರ ಕಾಲದ ವೀರಭದ್ರ ದೇವಾಲಯ, ಬುಕ್ಕಸಾಗರ




ವಿಜಯನಯನಗರ ಕಾಲದ ಶಿವ ದೇವಾಲಯ, ಬುಕ್ಕಸಾಗರ

## ವೆಂಕಟಾಪುರ




1 km

ವೆಂಕಟಾಪುರವು (೧೫°೩೨೭೭೯ ಉತ್ತರ ಅಕ್ಷಾಂಶ; ೭೬°೧೫೦೫೦೧೧ ಪೂರ್ವ ರೇಖಾಂಶ) ಕಂಪ್ಲಿಗೆ ಹೋಗುವ ಮಾರ್ಗದಲ್ಲಿ ಹೊಸಪೇಟೆಯಿಂದ ಗ್ರಾಮವು ೧೮ ಕಿ.ಮೀ. ದೂರದಲ್ಲಿದೆ ಇದು ೨,೯೬೨.೧೭ ಹೆಕ್ಟೇರ್ ಪ್ರದೇಶದಲ್ಲಿದೆ. ಇಲ್ಲಿ ೬೪೮ ಮನೆಗಳಿದ್ದು ಅಲ್ಲಿನ ಒಟ್ಟು ಜನಸಂಖ್ಯೆ ೩೦೬೧.

ವೆಂಕಟಾಪುರವು ಪ್ರಾಚೀನ ನವಶಿಲಾಯುಗದಿಂದ ಇಂದಿನವರೆಗೂ ಸತತವಾಗಿ ಜನವಸತಿ ಹೊಂದಿರುವ ಗ್ರಾಮ. ಈ ಗ್ರಾಮದಲ್ಲಿರುವ ವಿಜಯನಗರ ಕಾಲದ ರಾಮಲಿಂಗ ದೇವಾಲಯದ ಎಡ ಭಾಗದ ರಸ್ತೆಯಿಂದ ೧ ಕಿ.ಮೀ. ದೂರದಲ್ಲಿರುವ ಬೆಟ್ಟದ ಬಂಡೆಯ ಮೇಲೆ ನವಶಿಲಾಯುಗದ ಕೆಂಪು ಬಣ್ಣದ ಗೀರುಚಿತ್ರಗಳಿವೆ. ಈ ಚಿತ್ರದಲ್ಲಿ ಮೇಕೆ, ನಾಯಿ, ಮೀನು ಮತ್ತು ಮನುಷ್ಯನ ಚಿತ್ರಗಳಿವೆ. ಚಿತ್ರಗಳಿರುವ ಬೆಟ್ಟದ ಮುಂಭಾಗದಲ್ಲಿ ವಿಶಾಲ ಭೂ ಪ್ರದೇಶವು ಅಂದಿನ ನವಶಿಲಾಯುಗ ಕಾಲದ ಜನರು ವಾಸಿಸುವ ನೆಲೆಯಾಗಿತ್ತೆಂದು ಅಲ್ಲಿ ದೊರಕಿರುವ ಅವಶೇಷಗಳಿಂದ ತಿಳಿಯಬಹುದು. ಈ ಪ್ರದೇಶವು ಸತತವಾಗಿ ನೀರಾವರಿಗೆ ಒಳಪಟ್ಟಿರುವುದರಿಂದ ಪ್ರಾಚೀನ ಅವಶೇಷಗಳು ಹಾಳಾಗಿವೆ. ಆ ರಸ್ತೆಯಿಂದ ಅರ್ಧ ಕಿ.ಮೀ. ದೂರದಲ್ಲಿ ವಾಲಿದಿಬ್ಬ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ನವಶಿಲಾಯುಗ ಕಾಲದ

ಬೂದಿದಿಬ್ಬವಿದೆ.[೫೬] ಇದು ಗದ್ದೆಯಲ್ಲಿರುವುದರಿಂದ ಗಿಡಗಂಟಿಗಳ ಬೆಳೆದುಕೊಂಡಿದೆ. ಸತತ ಕೃಷಿ ಚಟುವಟಿಕೆಯಿಂದ ಬೂದಿ ದಿಬ್ಬವು ಸಾಕಷ್ಟು ಕರಗಿದೆ. ಈ ಪ್ರದೇಶವನ್ನು ನವಶಿಲಾಯುಗದ ಜನರು ತಮ್ಮ ವಸತಿ ನೆಲೆಯಾಗಿಸಿಕೊಂಡಿದ್ದರು. ಇವರು ಪ್ರಾಣಿಗಳನ್ನು ಸಾಕುವುದರ ಜೊತೆಗೆ ವ್ಯವಸಾಯವನ್ನು ಮಾಡುತ್ತಿದ್ದರು. ಈ ಪ್ರಾಣಿಗಳ ಸಗಣೆಯಿಂದ ಆದ ಬೂದಿದಿಬ್ಬವು ಇಂದು ಉಳಿದುಬಂದಿದೆ. ಇಂದು ಬೂದಿದಿಬ್ಬವನ್ನು ವಾಲಿದಿಬ್ಬವೆಂದು ಕರೆಯುವರು. ಸಾಹಿತ್ಯದ ಉಲ್ಲೇಖದಂತೆ ರಾಮಾಯಣದ ವಾಲಿ ಮತ್ತು ಸುಗ್ರೀವ ಸಹೋದರರ ಕಾದಾಟದಲ್ಲಿ ರಾಮನು ಮರಗಳ ಹಿಂಭಾಗದಲ್ಲಿ ನಿಂತು ಬಾಣವನ್ನು ಬಿಟ್ಟು ವಾಲಿಯನ್ನು ಸಾಯಿಸುತ್ತಾನೆ.[೫೭] ವಾಲಿಯ ದೇಹವನ್ನು ಸುಟ್ಟ ನಂತರ ಉಂಟಾದ ಬೂದಿಯು ದಿಬ್ಬವಾಯಿತು. ಇದನ್ನು ವಾಲಿಕಾಷ್ಟ ಎಂದು ಸಹ ಜನರು ಕರೆಯುವರು. ಈ ಗ್ರಾಮದ ಪಶ್ಚಿಮ ಬೆಟ್ಟದ ಪ್ರದೇಶವನ್ನು "ವಾಲಿ ಭಂಡಾರ" ( **Vali's Treasure)** ಎಂದು ಕರೆಯಲಾಗುತ್ತದೆ.[೫೮]

ನವಶಿಲಾಯುಗದ ಈ ನೆಲೆಯಲ್ಲಿ ಆ ಕಾಲಘಟ್ಟದ ಅವಶೇಷಗಳು ದೊರೆಕಿವೆ. ಅದನ್ನು ಹೊರತುಪಡಿಸಿ ಇತರೆ ಕಾಲದ ಅವಶೇಷಗಳು ದೊರೆತಿಲ್ಲ. ಆದರೆ ವಿಜಯನಗರ ಕಾಲದ ಅವಶೇಷಗಳು ದೊರೆಯುತ್ತವೆ. ಅಂದರೆ ನವಶಿಲಾಯುಗ ಮತ್ತು ವಿಜಯನಗರ ಕಾಲಗಳ ನಡುವಿನ ಕಾಲಘಟ್ಟದ ಅವಶೇಷಗಳು ದೊರೆಕಿಲ್ಲವಾದ್ದರಿಂದ ಅಂದು ಇದು ಜನ ರಹಿತವಾಗಿದ್ದಿರಬಹುದು. ಎಲ್ಲಾ ಪ್ರದೇಶವು ಹಂಪಿ ಪ್ರದೇಶಕ್ಕೆ ಸೇರಿರುವುದರಿಂದ ಬೇರೆ ಬೇರೆ ಕಾಲಘಟ್ಟದ ನೆಲೆಗಳು ಇದೇ ಪರಿಸರದಲ್ಲಿ ದೊರಕಿದ್ದು ವೆಂಕಟಾಪುರ ಪರಿಸರದ ಭಾಗವಾಗಿದೆ.

ಊರಿನಲ್ಲಿ ವಿಜಯನಗರ ಕಾಲದ ರಾಮಲಿಂಗ ದೇವಾಲಯವಿದೆ. ಅದರ ಗರ್ಭಗೃಹದಲ್ಲಿ ಹೊಸ ಲಿಂಗವನ್ನು ಮತ್ತು ಅಂತರಾಳದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಮುಖಮಂಟಪದ ಪಕ್ಕದಲ್ಲಿ ವಿಜಯನಗರ ಕಾಲದ ಶಿವಲಿಂಗವು ಮತ್ತೊಂದು ಗರ್ಭಗೃಹದಲ್ಲಿ ದೇವಿಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಶಿವಲಿಂಗವಿರುವ ಗರ್ಭಗೃಹದಲ್ಲಿ ಮುಖಮಂಟಪದ ಮುಂಭಾಗದಲ್ಲಿ ದೀಪಸ್ತಂಭವಿದೆ. ಈ ದೇವಾಲಯವನ್ನು ಸಂಪೂರ್ಣವಾಗಿ ನವೀಕರಣಗೊಳಿಸಲಾಗಿದೆ. ಅಲ್ಲಿ ಉಳಿದುಕೊಂಡಿರುವ ದೀಪಸ್ತಂಭದ ಮುಂಭಾಗದಲ್ಲಿರುವ ನಂದಿ ಶಿಲ್ಪ ಮತ್ತು ಶಿವಲಿಂಗಗಳೆಲ್ಲವೂ ವಿಜಯನಗರ ಕಾಲಕ್ಕೆ ಸೇರಿದವುಗಳಾಗಿವೆ. ಆಧುನಿಕ ಆಂಜನೇಯ ದೇವಾಲಯದಲ್ಲಿನ ಬಾಗಿಲವಾಡದಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ಬಾಗಿಲುವಾಡವನ್ನು ಬೇರೆ ಕಡೆಯಿಂದ ತಂದು ದೇವಾಲಯದಲ್ಲಿರಿಸಲಾಗಿದೆ.

ಗ್ರಾಮದಲ್ಲಿನ ವಿಜಯನಗರ ಕಾಲದ ಕೋಟೆಗೋಡೆಯು ಉತ್ತರ-ದಕ್ಷಿಣದವರೆಗೆ ೩೦೦ ಮೀ. ಮತ್ತು ಪೂರ್ವ-ಪಶ್ಚಿಮದವರೆಗೆ ೩೦೦ ಮೀ. ಹರಡಿಕೊಂಡಿದೆ. ಈ ಕೋಟೆಯ

ಒಳಭಾಗದಲ್ಲಿ ವಸತಿನೆಲೆಗಳ ಅವಶೇಷಗಳು, ಆಂಜನೇಯ ದೇವಾಲಯ ಮತ್ತು ಇತರ ಪ್ರಾಚ್ಯವಶೇಷಗಳು ದೊರೆತಿವೆ. ಕೋಟೆಗೋಡೆಯು ೨೮ ಮೀ. ಉದ್ದ ಮತ್ತು ೧.೪೫ ಮೀ. ಅಗಲವಿದೆ. ಕೋಟೆಯನ್ನು ದೊಡ್ಡದಾಗಿ ಮತ್ತು ಎತ್ತರವಾಗಿ ಕಟ್ಟಲಾಗಿದೆ. ಪೂರ್ವದಿಂದ ಪಶ್ಚಿಮದವರೆಗೆ ಗೋಡೆಯು ಹರಡಿಕೊಂಡಿದೆ. ಅದರಲ್ಲಿ ಕೆಲವು ಚೌಕಾಕಾರ ಮತ್ತು ವೃತ್ತಾಕಾರದ ಗ್ರಾನೈಟ್ ಕಲ್ಲುಗಳ ಅವಶೇಷಗಳಿವೆ. ಈ ಕಟ್ಟಡದ ಕಲ್ಲುಗಳನ್ನು ಬಿಡಿ ಬಿಡಿಯಾಗಿ (loosely) ಕಟ್ಟಲಾಗಿದೆ. ಎರಡು ಕಲ್ಲುಗಳ ನಡುವೆ ಯಾವುದೇ ರೀತಿಯಾಗಿ ಗಚ್ಚುಗಾರೆಯನ್ನು ಬಳಸಿಲ್ಲ. ಪೂರ್ವ ಭಾಗದ ಗೋಡೆಯನ್ನು ಎತ್ತರವಾಗಿ ಅಗಲವಾದ ಕಲ್ಲುಗಳಿಂದ ಕಟ್ಟಲಾಗಿದೆ.

ದಕ್ಷಿಣ ಭಾಗದಲ್ಲಿನ ಮೆಟ್ಟಿಲುಗಳನ್ನು ಕಲ್ಲುಗಳನ್ನು ಬಳಸಿ ಕಟ್ಟಲಾದೆ. ಅಲ್ಲಿರುವ ಮನೆಗಳನ್ನು ಅವರ ಅರ್ಥಿಕತೆಗೆ ತಕ್ಕಂತೆ ಕಟ್ಟಿಕೊಳ್ಳಲಾಗಿದೆ. ಮನೆಯ ಛತ್ತನ್ನು ಅಗಲ ಹಾಗೂ ಚಪ್ಪಟೆಯಾಗಿ ಕಟ್ಟಲಾಗಿದೆ. ಮನೆಯ ಗೋಡೆಯನ್ನು ಮಣ್ಣು ಮತ್ತು ಬಿಸಿಲಿನಲ್ಲಿ ಒಣಗಿಸಿದ ಇಟ್ಟಿಗೆಗಳನ್ನು ಬಳಸಿ ಅದಕ್ಕೆ ಮಣ್ಣನ್ನು ಮೆತ್ತಿ ಗಟ್ಟಿಗೊಳಿಸುತ್ತಿದ್ದರು. ಮಣ್ಣಿನ ಗೋಡೆಯನ್ನು ದಪ್ಪವಾಗಿ ಕಟ್ಟಲಾಗುತ್ತಿತ್ತು. ಈ ಇಟ್ಟಿಗೆ ಗೋಡೆಯ ಮನೆಗಳಿಗಿಂತ ಮಣ್ಣಿನ ಗೋಡೆಯ ಮನೆಗಳು ಹೆಚ್ಚಾಗಿ ತಂಪಾಗಿರುತ್ತವೆ.

ಚೌಕಾಕಾರವಾಗಿರುವ ಮನೆ ಗೋಡೆಯ ಅವಶೇಷಗಳು ಕಂಡುಬಂದಿವೆ. ಧಾನ್ಯಗಳ ಸಂಗ್ರಾಹಕಗಳು ದೊರಕಿರುವ ಸ್ಥಳಗಳಲ್ಲಿ ಗಚ್ಚುಗಾರೆಗಳ ಚೂರುಗಳು ಮತ್ತು ಕಲ್ಲುಗಳ ಅನೇಕ ಅವಶೇಷಗಳು ದೊರೆಕಿವೆ. ಉತ್ತರ ದಿಕ್ಕಿನಲ್ಲಿ ಚೌಕ ಮತ್ತು ವೃತ್ತಾಕಾರವಾಗಿ ರಂಧ್ರ ಮಾಡಿದ ಕಲ್ಲುಗಳಿವೆ. ಈ ರೀತಿಯ ಕಲ್ಲುಗಳನ್ನು ಸಾಮಾನ್ಯವಾಗಿ ಸಾಕು ಪ್ರಾಣಿಗಳನ್ನು ಕಟ್ಟಲು ಉಪಯೋಗಿಸುತ್ತಿದ್ದರು ಎಂದ ಗಣಿಸಲಾಗಿದೆ. ಕೋಟೆಗೋಡೆಯ ಅವಶೇಷವು ಈ ಎಲ್ಲಾ ಸುತ್ತಲಿನ ಪ್ರದೇಶದಲ್ಲಿ ಕಂಡುಬರುತ್ತವೆ. ಇದೇ ಪ್ರದೇಶದಲ್ಲಿ ಗುಂಡುಕಲ್ಲುಗಳಿಂದ ಕಟ್ಟಲಾದ ಮನೆಗಳ ತಳಪಾಯದ ಅವಶೇಷಗಳಿವೆ.

ಗ್ರಾಮದ ಒಂದು ಭಾಗದಲ್ಲಿ ಚಿಕ್ಕ ದಿಬ್ಬದ ಮೇಲೆ ವಿಜಯನಗರ ಕಾಲದ ಆಂಜನೇಯನ ದೇವಾಲಯವಿದೆ. ಈ ದೇವಾಲಯವು ಚೌಕಾಕಾರದ ಕಲ್ಲಿನ ಛತ್ತವನ್ನು ಹೊಂದಿದೆ. ಇದರ ಗೋಡೆಯನ್ನು ಬಿಡಿ ಕಲ್ಲುಗಳಿಂದ ಕಟ್ಟಲಾಗಿದೆ. ಇದರಲ್ಲಿ ದಕ್ಷಿಣಕ್ಕೆ ಮುಖ ಮಾಡಿದ ಎತ್ತರವಾದ ಆಂಜನೇಯನ ಶಿಲ್ಪವಿದೆ. ಉತ್ತರ ಭಾಗದಲ್ಲಿ ಒಂದು ಮನೆಯ ತಳಪಾಯ ದೊರೆತಿದೆ. ಈ ಸ್ಥಳದಲ್ಲಿ ಎತ್ತರವಾದ ವೇದಿಕೆ ರೀತಿಯ ಅವಶೇಷಗಳಿವೆ. ಇಲ್ಲಿ ಯಾವುದೇ ರೀತಿಯಾಗಿ ಕೊಠಡಿಗಳ ಭಾಗಗಳಿಲ್ಲ. ಕೇವಲ ತಳಪಾಯದ ಭಾಗ ಮಾತ್ರ ದೊರಕಿದೆ. ಹಾಗೂ ಮತ್ತೊಂದು ಭಾಗದಲ್ಲಿ ರಸ್ತೆಯ ಭಾಗಗಳು ದೊರಕಿವೆ. ಈ ಪ್ರದೇಶಗಳಲ್ಲಿ

ಮಡಿಕೆ ಚೂರುಗಳು ದೊರೆಯುತ್ತವೆ. ಒಂದು ಭಾಗದಲ್ಲಿ ಬಾವಿ, ಲೋಹದ ಕಿಟ್ಟ (metal slag), ಅಗ್ನಿಶಿಲೆಯ ಕಲ್ಲುಗಳು ಹಾಗೂ ನಾಣ್ಯಗಳು ದೊರಕಿವೆ. ಅಡಿಗೆ ಮಾಡುವ ಮಡಿಕೆಗಳು, ಸಂಗ್ರಹಣೆಯ ದೊಡ್ಡ ಮಡಿಕೆಗಳು, ಕೈಗೆ ಹಾಕುವ ಲೋಹದ ಕಡಗ ಮುಂತಾದವುಗಳು ಮತ್ತು ಮನೆಯಲ್ಲಿ ನಿತ್ಯ ಬಳಕೆಯ ವಸ್ತುಗಳು ದೊರಕಿವೆ. ಇಲ್ಲಿ ದೊರೆತ ಒಂದು ನಾಣ್ಯವು ಎರಡನೇ ದೇವರಾಯನ ಕಾಲಕ್ಕೆ ಕ್ರಿ.ಶ. ೧೪೨೬–೧೪೪೬ ಸೇರಿದೆ.[೫೯]

ಮೇಲೆ ವಿವರಿಸಿದ ಹಾಗೆ ವೆಂಕಟಾಪುರ ಗ್ರಾಮದಲ್ಲಿ ವಿವಿಧ ವಿನ್ಯಾಸದ ಕಟ್ಟಡಗಳಿದ್ದವು. ಹೆಚ್ಚು ಜನವಸತಿ ಹೊಂದಿದ ಪ್ರದೇಶವಾಗಿತ್ತು. ಇಲ್ಲಿ ದೊರೆತ ಅವಶೇಷದ ಆಧಾರದ ಮೇಲೆ ಈ ನೆಲೆಯಲ್ಲಿ ಹೆಚ್ಚು ವ್ಯವಸಾಯ ಮಾಡುವ ಜನರು ಹೆಚ್ಚು ಪ್ರಾಣಿಗಳನ್ನು ಸಾಕಿಕೊಂಡ ಜನರು ವಾಸವಾಗಿದ್ದರು. ವಿಜಯನಗರ ಕಾಲದಲ್ಲಿ ಇದು ಉಪನಗರವಾಗಿ ಬೆಳೆವಣಿಗೆ ಹೊಂದಿತ್ತು. ಮುಖ್ಯ ನಗರಕ್ಕೆ ಬೇಕಾಗುವ ನಿತ್ಯೋಪಯೋಗಿ ವಸ್ತುಗಳನ್ನು ಸರಬರಾಜು ಮಾಡುವ ಕಾರ್ಯವನ್ನು ಮಾಡುತ್ತಿತ್ತು.

ವೇದಗಳಲ್ಲಿ ದಾಖಲಿಸಿದ ವಿನ್ಯಾಸಕ್ಕೆ ಮೇಲೆ ವಿವರಿಸಿದ ಕಟ್ಟಡವು ಹೋಲಿಕೆಯಾಗುತ್ತದೆ. ವೇದದಲ್ಲಿ ತಿಳಿಸಿದ ಹಾಗೆ ಮನೆಯ ಕಂಬಗಳು (ಉಪಮಿತಿ) ಅದಕ್ಕೆ ಹೊಂದಿಕೊಂಡು ಪ್ರತಿಮಿತಿ (ತೊಲೆಗಳು) ಅದಕ್ಕೆ ಅಡ್ಡಲಾಗಿ ಬರುವುದಕ್ಕೆ ಪರಿಮಿತಿ (ತೊಲೆಗಳು) ಮೇಲೆ ಛತ್ತಿಗೆ ಹುಲ್ಲು ಮತ್ತು ಬಂಬೂಗಳನ್ನು ಹಾಕುವರು (ವಂಪ್ಸ) ಗೋಡೆಯನ್ನು ಫಲದ ಅಂದರೆ ಹುಲ್ಲು ಅಥವಾ ಇಟ್ಟಿಗೆಯಿಂದ ಕಟ್ಟುತ್ತಿದ್ದರು. ಮಾನಸಾರ ಮತ್ತು ಶಿಲ್ಪಶಾಸ್ತ್ರದ ಪ್ರಕಾರ ಒಂದು ಗ್ರಾಮ ಅಥವಾ ಪಟ್ಟಣ ಎಂದು ಗುರುತಿಸಬೇಕಾದರೆ ಅಲ್ಲಿ ಕೋಟೆ ಇರಬೇಕು. ಅರ್ಥಶಾಸ್ತ್ರದಲ್ಲಿ ಇದೇ ರೀತಿ ಉಲ್ಲೇಖಿಸಲಾಗಿದೆ. ಗ್ರಾಮ ಅಥವಾ ಪಟ್ಟಣದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗೋವುಗಳಿರಬೇಕು. ಇಲ್ಲಿ ಪ್ರಾಣಿಗಳನ್ನು ಕಟ್ಟುವ ಕಲ್ಲುಗಳು ಅಧಿಕ ಸಂಖ್ಯೆಯಲ್ಲಿ ದೊರೆತಿರುವುದರಿಂದ ಇಲ್ಲಿ ಅಧಿಕ ಸಾಕು ಪ್ರಾಣಿಗಳು ಪ್ರಾಯಶಃ ಹಸುಗಳು ಎಂದು ಅಭಿಪ್ರಾಯಪಡಬಹುದು.[೬೦]

ವಿಜಯನಗರ ಕಾಲದ ಪುರ, ಗ್ರಾಮ ಮತ್ತು ರಾಜಧಾನಿಯ ಸಂಪೂರ್ಣ ರಚನಾ ವಿನ್ಯಾಸವು ಉತ್ಖನನದ ಮೂಲಕ ದೊರೆತರೆ ಯಾವ ಶಾಸ್ತ್ರಗ್ರಂಥಗಳನ್ನು ಉಪಯೋಗಿಸಿ ಕಟ್ಟಲಾಗಿದೆ ಎಂದು ತಿಳಿಯಲು ಸಾಧ್ಯವಾಗುತ್ತುದೆ. ಕೆಲವೊಂದು ಗ್ರಾಮಗಳು, ಪುರಗಳು ಸಂಪೂರ್ಣವಾಗಿ ನವೀಕರಣ ಹೊಂದಿರುವುದರಿಂದ ಪ್ರಸ್ತುತ ಹೋಲಿಕೆ ಮಾಡುವುದು ಕಷ್ಟವಾಗುವುದು. ಹಂಪಿ ಪರಿಸರದಲ್ಲಿ ದೊರೆತ ಅವಶೇಷಗಳು ಅಲ್ಲಲ್ಲಿ ದೊರಕಿರುವುದರಿಂದ

ಯಾವ ಶಾಸ್ತ್ರಗ್ರಂಥಗಳನ್ನು ಉಪಯೋಗಿಸಿ ಕಟ್ಟಿರುವುದು ಎಂದು ನಿಖರವಾಗಿ ತಿಳಿಯುವುದು ಕಷ್ಟಸಾಧ್ಯ..




ವೆಂಕಟಾಪುರ




ನವಶಿಲಾಯುಗ ಕಾಲದ ವರ್ಣಚಿತ್ರ, ವೆಂಕಟಾಪುರ



ನವಶಿಲಾಯುಗದ ಗೀರು ಚಿತ್ರಗಳು, ವೆಂಕಟಾಪುರ



ನವಶಿಲಾಯುಗದ ನೆಲೆ, ವೆಂಕಟಾಪುರ




ಬೂದಿ ದಿಬ್ಬ /ವಾಲಿದಿಬ್ಬ, ವೆಂಕಟಾಪುರ




ಬೂದಿ ದಿಬ್ಬ /ವಾಲಿದಿಬ್ಬ, ವೆಂಕಟಾಪುರ




ವಿಜಯನಗರ ಕಾಲದ ರಾಮಲಿಂಗದೇವಾಲಯ, ವೆಂಕಟಾಪುರ




ವಿಜಯನಗರ ಕಾಲದ ರಾಮಲಿಂಗದೇವಾಲಯ ರಥ

**ಕಮಲಾಪುರ**

ಕಮಲಾಪುರ (೧೫°೪ ರಿಂದ ೧೫°೭ ಉತ್ತರ ಅಕ್ಷಾಂಶ ೭೬°೮೧' ರಿಂದ ೭೬°೪೦' ಪೂರ್ವ ರೇಖಾಂಶ) ಗ್ರಾಮವು ಹೊಸಪೇಟೆಯಿಂದ ೧೦ ಕಿ.ಮೀ. ಈಶಾನ್ಯದಲ್ಲಿ ಕಂಪ್ಲಿಗೆ ತೆರಳುವ ಮಾರ್ಗದಲ್ಲಿದೆ. ಕಮಲಾಪುರದ ಒಟ್ಟು ವಿಸ್ತೀರ್ಣವು ೩೯.೬೨ ಹೆಕ್ಟೇರ್ ಮತ್ತು ಅಲ್ಲಿ




೫,೧೪೦ ಮನೆಗಳಿದ್ದು ಅಲ್ಲಿನ ಒಟ್ಟು ಜನಸಂಖ್ಯೆ[೧] ೨೫,೫೫೨. ಕನ್ನಡ ವಿಶ್ವವಿದ್ಯಾಲಯವು (೧೫°೧೬'೩೯ ಉತ್ತರ ಅಕ್ಷಾಂಶ; ೭೬°೨೯'೩೩ ಪೂರ್ವ ರೇಖಾಂಶ) ಕಮಲಾಪುರ ಗ್ರಾಮದ ವ್ಯಾಪ್ತಿಯಲ್ಲಿದೆ.

ಕಮಲಾಪುರ ಗ್ರಾಮವು ಪ್ರಾಗಿತಿಹಾಸ ಕಾಲದಿಂದ ಇಂದಿನವರೆಗೆ ಜನವಸತಿ ಪ್ರದೇಶವಾಗಿದೆ. ಈ ಪ್ರದೇಶದಲ್ಲಿ ಪ್ರಾಗಿತಿಹಾಸಿಕ ಆದಿಇತಿಹಾಸ ಮತ್ತು ಮಧ್ಯಯುಗಿನ ಇತಿಹಾಸ ಕಾಲದ ನೆಲೆಗಳಿವೆ. ನವಶಿಲಾಯುಗದ ಅನೇಕ ಗೀರುಚಿತ್ರಗಳು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಪಶ್ಚಿಮದ ಇಳಿಜಾರಿನಲ್ಲಿವೆ. ಇಲ್ಲಿ ಒಟ್ಟು ಎಂಟು ಚಿತ್ರಗಳಿವೆ. ಅವುಗಳಲ್ಲಿ ಆರು ಎತ್ತಿನ ಚಿತ್ರಗಳಿವೆ. ಎರಡು ಎತ್ತುಗಳ ಮೇಲೆ ಮನುಷ್ಯನು ಕುಳಿತ ಚಿತ್ರ, ಮತ್ತೊಂದು ಎತ್ತಿನ ಲಕ್ಷಣ ಈ ರೀತಿಯಾಗಿದೆ. ಒಂದೇ ದೊಡ್ಡ ಕೋಡು, ದೊಡ್ಡದಾದ ಇಣಿ, ಉದ್ದವಾದ ಬಾಲ ಮತ್ತು ಕಣ್ಣುಗಳಿವೆ. ಮೂರು ಸರಳ ರೇಖೆಯಲ್ಲಿ ಎತ್ತಿನ ಚಿತ್ರವನ್ನು ಕೊರೆಯಲಾಗಿದೆ. ಮೊದಲನೇ ರೇಖೆಯಲ್ಲಿ ಮುಂದಿನ ಮೊದಲ ಕಾಲು, ಕತ್ತು, ಬಾಯಿ, ಮುಖ, ಕೋಡು ಇಣಿ, ಬೆನ್ನುಗಳನ್ನು ಚಿತ್ರಿಸಲಾಗಿದೆ. ಎರಡನೇ ರೇಖೆಯಲ್ಲಿ ಹಿಂದಿನ ಮೊದಲ ಕಾಲನ್ನು ಮೂರನೇ ರೇಖೆಯಲ್ಲಿ ಬಾಲವನ್ನು ಚಿತ್ರಿಸಿದೆ. ಅದು ಕಾಲಿನಷ್ಟು ಉದ್ದವಾಗಿದೆ. ಮತ್ತೆರಡು ಎತ್ತುಗಳು ಈ ಉಳಿದವುಗಳಿಗಿಂತ ದೊಡ್ಡ ಪ್ರಮಾಣದಲ್ಲಿವೆ. ಅದರ ಅಳತೆಯು ೦.೬೫ ಮೀ. ಅಗಲ, ೦.೫೩ ಎತ್ತರ ಮತ್ತು ೦.೩೫೦೫೮ ಸೆಂ.ಮೀ ಉದ್ದ. ಮತ್ತೊಂದು ನೆಲೆಯಲ್ಲಿ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಹೋಗುವ ಮಧ್ಯದಲ್ಲಿ ಬರುವ ಮಹಿಳಾ ವಸತಿನಿಲಯದಿಂದ ಹಿಂಭಾಗವಿರುವ ಒಂಟೆ ಗುಂಡಿನಲ್ಲಿದೆ. ಈ ಕಲ್ಲಾಸರೆಯಲ್ಲಿ ಕಡವೆಗಳ ಚಿತ್ರಗಳಿವೆ. ಆ ಗುಂಡಿನ ಕೆಳಗಿನ ಬಂಡೆಗಲ್ಲಿನಲ್ಲಿ ಒಂದು ಆಕೃತಿ ಮತ್ತು ಎರಡು ಎತ್ತುಗಳ ಚಿತ್ರವಿದೆ. ಒಂದರ ಹಿಂದೆ ಒಂದರಂತೆ ಸಾಲಾಗಿ ನಿಂತಿರುವ ಎರಡು ಎತ್ತುಗಳಿವೆ. ಎತ್ತಿನ ಚಿತ್ರಗಳು ಸರಳ ರೇಖೆಯಲ್ಲಿವೆ. ಮುಖ ತ್ರಿಕೋನಾಕಾರವಾಗಿದ್ದು ಕೋಡು, ಇಣಿ, ಬಾಲ ಸಹಜವಾಗಿದೆ.[೬೨] ಹಂಪಿಯ ನವಶಿಲಾಯುಗ ನೆಲೆಯ ಕುರಿತು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಶಿಲಾತಾಮ್ರಯುಗದ ನೆಲೆಯು ತುಂಗಭದ್ರಾ ನದಿಯ ಎಡ ದಂಡೆಯ ಆನೆಗೊಂದಿಯಲ್ಲಿದೆ. ಈ ಪ್ರಾಗಿತಿಹಾಸ ಕಾಲದ ನೆಲೆಯ ಕಡಿಮೆ ಪ್ರಮಾಣದಲ್ಲಿ ದೊರೆತಿವೆ. ಒಂದು ಹಂತದ ನೆಲೆ ದೊರೆತರೂ ಅದಕ್ಕೆ ಪೂರಕವಾಗುವ ಬೇರೆ ಬೇರೆ ಹಂತದ ನೆಲೆಗಳು ನಮಗೆ ಇದೆ ಪರಿಸರದ ಸುತ್ತಮುತ್ತಲೂ ದೊರೆತಿವೆ. ಪ್ರಕೃತಿಯ ವಿಕೋಪದಿಂದ ಹಾಳಾಗಿರಬಹುದಾದ ಕಾರಣ ಅಧಿಕ ಅವಶೇಷಗಳು ದೊರಕಿಲ್ಲ. ಈ ರೀತಿಯಾದ ಮೊದಲನೆಯ ಹಂತದ ವಸತಿನೆಲೆಗಳು ಈ ಪರಿಸರದಲ್ಲಿವೆ.

ಎರಡನೇ ಹಂತದ ವಸತಿನೆಲೆಗಳು ಅಲ್ಪ ಪ್ರಮಾಣದಲ್ಲಿ ದೊರೆತಿವೆ. ಆದಿಇತಿಹಾಸ ಕಾಲದ ಅವಶೇಷಗಳನ್ನು ಮಹಾನವಮಿ ದಿಬ್ಬದ ಪಶ್ಚಿಮ ಭಾಗದಲ್ಲಿ ದೊರಕಿದೆ. ಉತ್ಖನನದಲ್ಲಿ ಸುಣ್ಣದಕಲ್ಲಿನ ಬುದ್ಧನ ಶಿಲಾಫಲಕಗಳು ದೊರೆತಿವೆ.[೬೩] ಈ ಆದಿಇತಿಹಾಸ (ಮೌರ್ಯರ) ಕಾಲದ

ಕುರುಹುಗಳು ಆನೆಗೊಂದಿಯಲ್ಲಿ ದೊರೆತಿವೆ, ಅವುಗಳು ಸಾಮಾಜಿಕ, ಆರ್ಥಿಕ ಸಂಬಂಧವನ್ನು ನೆರೆಯ ನೆಲೆಗಳಾದ ಉದೇಗೊಳಂ ಮತ್ತು ನಿಟ್ಟೂರು ಪ್ರದೇಶದೊಂದಿಗೆ ಹೊಂದಿತ್ತೆಂದು ಅಲ್ಲಿ ದೊರೆತ ಶಿಲಾಶಾಸನದಿಂದ ಹೇಳಬಹುದು. ಆದರೆ ಇಲ್ಲಿ ದೊರೆತ ಬುದ್ಧನ ಶಿಲಾಫಲಕದಿಂದ ಎರಡೂ ಪ್ರದೇಶಗಳ ನಡುವೆ ಧಾರ್ಮಿಕವಾಗಿಯೂ ಸಂಬಂಧವನ್ನು ಹೊಂದಿತ್ತು ಎಂದು ಅಭಿಪ್ರಾಯಪಡಬಹುದು.

ಮಹಾನವಮಿ ದಿಬ್ಬದ ಪೂರ್ವ ಭಾಗದಲ್ಲಿ ದೊರೆತ ಶಿಲಾಫಲಕವಿರುವ ಶಾಸನವು ಕ್ರಿ.ಶ. ೧ನೇ ಶತಮಾನದ ಬ್ರಾಹ್ಮಿ ಅಕ್ಷರ, ಪ್ರಾಕೃತ ಭಾಷೆಯಲ್ಲಿದ್ದು ಅದರಲ್ಲಿ "ತರಸ ಪುತನ ದಾನಂ" ಎಂದಿದೆ.[೬೪] ಆನೆಗೊಂದಿಯಲ್ಲಿ ಮಡಿಕೆ ಚೂರುಗಳು ಮತ್ತು ಕಲ್ಲಿನ ಆಯುಧಗಳು ದೊರೆತಿವೆ. ಈ ಎರಡು ನೆಲೆಗಳ ಕುರುಹುಗಳ ಅಧ್ಯಯನದಿಂದ ಈ ಪರಿಸರದಲ್ಲಿ ಮೌರ್ಯರ ಮತ್ತು ಶಾತವಾಹನರ ಕಾಲದಲ್ಲಿ ಅವರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ದೃಢಪಡುತ್ತದೆ.

ಕ್ರಿ.ಶ. ೭ನೇ ಶತಮಾನದಿಂದ ಕ್ರಿ.ಶ. ೧೨–೧೩ನೇ ಶತಮಾನದವರೆಗಿನ ಕುರುಹುಗಳು ಈ ಸುತ್ತಮುತ್ತಲಿನ ಪರಿಸರದಲ್ಲಿ ಅಂದರೆ ಹಂಪಿ ಮತ್ತು ಆನೆಗೊಂದಿ ಪ್ರದೇಶದಲ್ಲಿ ದೊರೆತಿವೆ. ಕಮಲಾಪುರವು ಇದೇ ಪರಿಸರದ ಹತ್ತಿರವಾಗಿರುವುದರಿಂದ ಈ ಮೇಲಿನ ನೆಲೆಗಳು ಕಮಲಾಪುರಕ್ಕೆ ಸಂಬಂಧಿಸಿದ್ದಾಗಿವೆ. ಆದಿಇತಿಹಾಸ ಕಾಲದ ನೆಲೆಗಳು ಮತ್ತು ಮಧ್ಯಯುಗೀನ ಕಾಲದ ನೆಲೆಗಳು ಪೂರಕವಾದ ಮಾಹಿತಿಯನ್ನು ನೀಡಿದೆ. ಈ ಪ್ರದೇಶದಲ್ಲಿ ಹಂತ ಹಂತವಾಗಿ ಮಾನವನ ನೆಲೆಗಳು ಮುಂದುವರೆದುಕೊಂಡು ಬಂದಿದೆ. ಕಮಲಾಪುರದಲ್ಲಿ ಕ್ರಿ.ಶ. ೧೪ನೇ ಶತಮಾನದಿಂದ ಪೂರಕವಾದ ಮಾಹಿತಿಯು ದೊರಕುತ್ತವೆ.

ಮೊದಲು ಕಮಲಾಪುರ ಎನ್ನುವ ಹೆಸರು ಸಾಹಿತ್ಯ ಮತ್ತು ಜಾನಪದ ಹಿನ್ನೆಲೆಯಲ್ಲಿ ಚರ್ಚಿಸುವುದಾದರೆ. ಕಮಲಾಪುರದ ಕೆರೆಯಲ್ಲಿ ಬಿಳಿ ಬಣ್ಣದ ಕಮಲದ ಹೂಗಳು ಎಥೇಚ್ಛವಾಗಿ ಬೆಳೆಯುವುದರಿಂದ ಈ ಪುರಕ್ಕೆ ಕಮಲಾಪುರ ಎಂದು ಹೆಸರು ಬಂದಿತು ಎಂಬ ವಾದವಿದೆ. ಅದರ ಅರ್ಥ "ಉತ್ತಮ ಸ್ತ್ರೀ" ಲಕ್ಷ್ಮೀ ಎಂಬುದಾಗಿದೆ. ಪುರ ಎಂದರೆ "ಪಟ್ಟಣ ಅಥವಾ ನಗರ ಎಂಬ ಅರ್ಥ ಒಟ್ಟಿನಲ್ಲಿ ಕಮಲಾಪುರ ಎಂಬ ಪದದ ನಿಷ್ಪತ್ತಿಯ ಮೂಲಕ ಸ್ತ್ರೀ ನಗರ ಅಥವಾ ಲಕ್ಷ್ಮಿ ನಗರ ಎಂದು ಹೇಳಬಹುದು. ಕಮಲಾದೇವಿ ಎಂಬುವವಳು ಈ ಪ್ರದೇಶದ ಆರಾಧ್ಯ ದೇವತೆಯಾಗಿದ್ದರಿಂದ ಕಮಲಾಪುರ ಎಂದು ಹೆಸರು ಬಂದಿದೆ ಎಂಬುದು ಸ್ಥಳೀಯ ಐತಿಹ್ಯ. ಪ್ರೌಢದೇವರಾಯನ ಪತ್ನಿ ಕಮಲಾದೇವಿಯ ಹೆಸರಿನಿಂದ ಈ ಗ್ರಾಮಕ್ಕೆ ಆ ಹೆಸರು ಬಂದಿರಬಹುದು.[೬೫] ಕಾಮಲಾಪುರ ಎನ್ನುವ ಹೆಸರು ಶಾಸನದಲ್ಲಿ ಉಲ್ಲೇಖಿತವಾಗಿದೆ. ಕಮಲಾಪುರದಲ್ಲಿರುವ ಕೇಂದ್ರ ಪ್ರಾಚ್ಯ ವಸ್ತುಸಂಗ್ರಹಾಲಯದ ಎದುರು ಇರುವ ಗುಂಡಿನ

ಮೇಲಿರುವ ಅಚ್ಯುತದೇವರಾಯನು ಕ್ರಿ.ಶ. ೧.೧.೧೫೩೧ರ ಶಾಸನದಲ್ಲಿ ಕಮಲಾಪುರ ಗ್ರಾಮದ ಹೆಸರನ್ನು "ಕಾಮಲಾಪುರ" ಎಂದು ಉಲ್ಲೇಖಿಸಿದೆ.[೬೬] ಕಮಲಾಪುರದಲ್ಲಿ ಕ್ರಿ.ಶ. ೧೩೮೬ರ ಶಾಸನವು ಇರುಗಪ್ಪ ದಂಡನಾಯಕನು ಕುಂಥುಜಿನಾಲಯವನ್ನು ಕಲ್ಲಿನಲ್ಲಿ ನಿರ್ಮಿಸಿದನು.[೬೭]

ಕ್ರಿ.ಶ. ೧೩೮೦ರ ಶಾಸನವು ಬೇಟೆಗಾರ ಹೆಬ್ಬಾಗಿಲಿನ ಪೂರ್ವದಿಕ್ಕಿಗೆ ಒರತೆಯ ಮೈಲಾರ ದೇವರನ್ನು ಪ್ರತಿಷ್ಠಾಪಿಸಿ ವಾಯವ್ಯ ದಿಕ್ಕಿಗೆ ಒರತೆಯ ಕೊಂಡವನ್ನು ನಿರ್ಮಿಸಲಾಗಿದೆ. ಕ್ರಿ.ಶ. ೧೪೨೯ರಲ್ಲಿ ದೇವರಾಯನ ಕಾಲದಲ್ಲಿ ಕಟಿಗೆಯ ಸೀಮೆಯ ಅಹಮ್ಮದ ಖಾನ್‌ನು ರಾಜನಿಗೆ ಧರ್ಮವಾಗಬೇಕೆಂದು ಧರ್ಮಶಾಲಾ ಮತ್ತು ಬಾವಿಯನ್ನು ನಿರ್ಮಿಸಿದನು. ಕ್ರಿ.ಶ. ೧೫೩೧ರ ಶಾಸನ ಕುಂತೂರ ಯತಿರಾಜ ದೇವನ ಮಗ ಮಲಭಯ್ಯ ಕಟ್ಟಿಸಿದ ನಾಡದ ಬಾವಿ, ಕೊಂಡಮರಸಯ್ಯ ಕಟ್ಟಿಸಿದ ಕಪಿಲೆಯ ಬಾವಿಯ ಉಲ್ಲೇಖವಿದೆ. ಕ್ರಿ.ಶ. ೧೫೨೯ರ ಶಾಸನವು ದೇಮರಿಪಲ್ಲಿಯ ಮುಮ್ಮಡಿ ಶೆಟ್ಟಿ ಎಂಬುವವನಿಗೆ ಪುಣ್ಯವಾಗಲಿ ಎಂದು ಬಾವಿ ಮತ್ತು ತೋಟವನ್ನು ದಾನ ಮಾಡಿದನು. ಕ್ರಿ.ಶ. ೧೫೨೯ರ ಶಾಸನವು ತೋಟದ ಬೆಳೆಗಳ ಹಸಿರುವಾಣಿ ಸುಂಕ, ೧೦೫೦ ಗದ್ಯಾಣಗಳೆಂದು ತಿಳಿಸುತ್ತದೆ.[೬೮]

ಕಮಲಾಪುರುದಲ್ಲಿ ವಿಜಯನಗರ ಕಾಲದ ಪ್ರೌಢದೇವರಾಯನು ನಿರ್ಮಿಸಿದ ಕೆರೆಯಿದೆ. ಈ ಕೆರೆಗೆ ಬಸವಣ್ಣ ಕಾಲುವೆ ಮತ್ತು ವಿಜಯನಗರ ಕಾಲುವೆ ಅಥವಾ ರಾಯ ಕಾಲುವೆ ಮೂಲಕ ನೀರು ಹರಿದುಬರುತ್ತದೆ. ಈ ಕೆರೆಗೆ ನಾಲ್ಕು ತೂಬುಗಳು ಇವೆ. ಅವುಗಳಲ್ಲಿ ಎರಡಕ್ಕೆ ಮರದ ತುಂಡುಗಳನ್ನು ಅಳವಡಿಸಲಾಗಿದೆ. ಇನ್ನೆರಡಕ್ಕೆ ಕಬ್ಬಿಣದ ಬಾಗಿಲುಗಳನ್ನು ಅಳವಡಿಸಲಾಗಿದೆ. ನಾಲ್ಕು ತೂಬುಗಳು ವಿವಿಧ ಎತ್ತರಗಳಲ್ಲಿದ್ದು ಅವುಗಳಿಗೆ ಅನುಗುಣವಾಗಿ ಕಾಲುವೆಗಳು ಸಹ ವಿವಿಧ ಎತ್ತರಗಳಲ್ಲಿ ಇರುವುದನ್ನು ಗಮನಿಸಬಹುದು. ಮತ್ತೊಂದು ಕೆರೆ ಅಳ್ಳಿಕೆರೆ ಇದು ಕಮಲಾಪುರದ ಪೂರ್ವಕ್ಕೆ ಇರುವ ಪಾಪಿನಾಯಕನಹಳ್ಳಿಗೆ ಹೋಗುವ ಮಾರ್ಗದಲ್ಲಿ ಮತ್ತು ಕನ್ನಡ ವಿಶ್ವವಿದ್ಯಾಲಯ ಮುಂಭಾಗದಲ್ಲಿರುವ ಕೆರೆಗೆ ಅಳ್ಳಿಕೆರೆಯಿದೆ. ಈ ಕೆರೆಯು ಸುಮಾರು ಕಮಲಾಪುರದಿಂದ ಮೂರು ಕಿ.ಮೀ. ದೂರದಲ್ಲಿದೆ. ಇದು ಸಹ ವಿಜಯನಗರ ಕಾಲದಲ್ಲಿ ನಿರ್ಮಿತವಾದ ಕೆರೆ.[೬೯]

ಈ ಎಲ್ಲಾ ಶಾಸನಗಳು ಬಾವಿ, ಕೊಂಡಗಳ ನಿರ್ಮಾಣವನ್ನು ತಿಳಿಸಿದೆ. ಅದೇ ರೀತಿಯಾಗಿ ಈ ಶಾಸನಗಳಿಗೆ ಪುಷ್ಠೀಕರಿಸುವ ರೀತಿಯಲ್ಲಿ ಒಂದು ಶಾಸನದಲ್ಲಿ ತೋಟದ ಬೆಳೆಗಳಿಂದ ಹಸಿರುವಾಣಿ ಸುಂಕ, ೧೦೫೦ ಗದ್ಯಾಣಗಳ ಲೆಕ್ಕಗಳ ಕಂದಾಚಾರಕ್ಕೆ ನೀಡುತ್ತಾರೆ. ಕಮಲಾಪುರದಲ್ಲಿ ಕೆರೆ, ಬಾವಿ, ಕೊಂಡಗಳಿರುವುದರಿಂದ ಹೆಚ್ಚು ನೀರಿನ ಸೌಕರ್ಯವನ್ನು ಹೊಂದಿತ್ತು. ಶಾಸನದಲ್ಲಿ ತಿಳಿಸಿ ರಘುನಾಥ ದೇವರಿಗೆ ಸೋಮಲಾಪುರ ಸೀಮೆಯರು ತೆಂಗು,

ಹಲಸು, ಎಲೆ, ಹುಣ್ಣಿಸೆ ನಿಂಬೆ ಮುಂತಾದವುಗಳ ಮೇಲೆ ೧೦೫೦ ಗದ್ಯಾಣ ಹಸಿರುವಾಣಿ ಸುಂಕವನ್ನು ಪಡೆಯುತ್ತಿದ್ದರು ಎಂದು ದಾಖಲಿಸಿದೆ.[೨೦] ಅದೇ ರೀತಿಯಾಗಿ ಈ ಪ್ರದೇಶದಲ್ಲಿ ಅಧಿಕ ತೆಂಗು, ಹಲಸು, ಹುಣಿಸೆಯ ತೋಟಗಳಿದ್ದ ಸಾಧ್ಯತೆಗಳಿವೆ. ಡೊಮಿಂಗೊಸ್ ಪಯಾಸ್ ತನ್ನ ಕಥಾನದಲ್ಲಿ ವಿಜಯನಗರದಲ್ಲಿ ಕಿತ್ತಲೆ, ನಿಂಬೆ, ಜಂಬೀರ, ಮೂಲಂಗಿ ಮತ್ತಿತರ ತೋಟೋತ್ಪನ್ನಗಳುಳ್ಳ ತೋಟಗಳಿವೆ[೨೧] ಎಂದು ದಾಖಲಿಸಿರುವನು. ಅವನ ಹೇಳಿಕೆಯಂತೆ ಮನೆಗಳ ತೋಟಗಳಲ್ಲಿ ಅನೇಕ ಗಿಡಗಳಿವೆ ಮತ್ತು ಅದರ ಮಧ್ಯೆ ಹರಿಯುವ ನೀರಿನ ಅನೇಕ ನಾಲೆಗಳಿವೆ. ಅಲ್ಲಲ್ಲಿ ಸರೋವರಗಳಿವೆ ಅನೇಕ ಹಣ್ಣಿನ ತೋಟಗಳು ಮತ್ತು ಅನೇಕ ಹಣ್ಣಿನ ಗಿಡಗಳುಳ್ಳ ತೋಟಗಳು ಇವೆ. ಅವುಗಳಲ್ಲಿ ಬಹುಮಟ್ಟಿಗೆ ಇರುವುದು ಮಾವು, ಅಡಿಕೆ, ಹಲಸು ಮತ್ತು ಅನೇಕ ನಿಂಬೆ, ಕಿತ್ತಲೆ ಗಿಡಗಳು, ಅವುಗಳೋ ಒಂದಕ್ಕೊಂದು ಎಷ್ಟು ಗುತ್ತಾಗಿ ಬೆಳೆದಿವೆಯೆಂದರೆ ಅದು ದಟ್ಟ ಅರಣ್ಯದಂತೆ ತೋರುತ್ತದೆ. ಮತ್ತು ಅಲ್ಲಿ ಬಿಳಿ ದ್ರಾಕ್ಷಿಗಳೂ ಉಂಟು".[೨೨]

ಕಮಲಾಪುರದಲ್ಲಿ ಅಹಮ್ಮದ್ ಖಾನ್‌ನು ಒಂದು ಛತ್ರ ನಿರ್ಮಿಸಿದನು. ಪ್ರಯಾಣಿಕರಿಗೆ ಮತ್ತು ಪ್ರವಾಸಿಗರಿಗೆ ಬಾಯರಿಕೆಯನ್ನು ಹಿಂಗಿಸಿಕೊಳ್ಳಲು ಪ್ರಾಚೀನ ಕಾಲದಿಂದ ಇಂದಿನವರೆಗೆ ಅರವಟ್ಟಿಗೆಗಳು ನೋಡುತ್ತೇವೆ. ಪ್ರಾಚೀನ ಕಾವ್ಯಗಳು ಹಾದಿ ಬದಿಯ ಅರವಂಟಿಕೆ ಮತ್ತು ಅಲ್ಲಿ ನೀರೆರೆಯುವ ಯುವತಿಯರನ್ನು ವರ್ಣಿಸಿದೆ. ಅರೆ ಎಂದರೆ "ಧರ್ಮ", ವಾಟಿಕಾ ಎಂದರೆ ಸ್ಥಳ. ಅಂದರೆ ಧರ್ಮದ ಸ್ಥಳವೆಂದರ್ಥ "ಅರಚ್ಚಾಲೈ" ಎಂಬುದಾಗಿ ತಮಿಳು ಪದ ಇದೆ. ಧರ್ಮದ ಸ್ಥಳದಲ್ಲಿ ಧರ್ಮಕಾರ್ಯ ಮಾಡುವುದು ಹಿತವೆಂದು ಸಾರ್ವಜನಿಕರಿಗಾಗಿ ಬಾಯಾರಿಕೆ ಇಂಗಿಸಿಕೊಳ್ಳಲು ನೀರು ಇಡುವ ಪದ್ಧತಿ ಮಹತ್ವದ ಕಾರ್ಯದ್ದಾಗಿದೆ. ಅದೇ ರೀತಿಯಾಗಿ ಛತ್ರಗಳಲ್ಲಿ (ಸತ್ರ) ಆಹಾರ ವಿಶ್ರಾಂತಿ ತೆಗೆದುಕೊಳ್ಳಲು ಮತ್ತು ವಸತಿಯೂ ಲಭ್ಯವಾಗುತ್ತಿತ್ತು. ಛತ್ರ ಎನ್ನವುದು ಊಟ-ವಸತಿಗಳ ಸ್ಥಾನವಾಗಿದ್ದು, ಪ್ರವಾಸಿಗರ ಅನ್ನದಾನ ಕೇಂದ್ರವಾಗಿತ್ತು.[೨೩] ಹೀಗೆ ವಿಜಯನಗರ ಕಾಲದಲ್ಲಿ ಅರವಟ್ಟಿಗೆಗಳು ಛತ್ರಗಳು ಇದ್ದವೆಂದು ನಮಗೆ ಕಮಲಾಪುರದ ಮತ್ತು ಆರು ಕಿ.ಮೀ. ದೂರದ ಹೊಸಪೇಟೆಗೆ ಹೋಗುವ ಮಾರ್ಗದ ಮಧ್ಯದಲ್ಲಿ ಬರುವ ಮಲಪನಗುಡಿಯಲ್ಲಿ ಒಂದು ಅರವಟ್ಟಿಗೆ ಇದ್ದ ಉಲ್ಲೇಖ ಶಾಸನದಲ್ಲಿದೆ.

ಡೊಮಿಂಗೊಸ್ ಪಯಾಸ್‌ನು ತನ್ನ ಕಥಾನದಲ್ಲಿ ಬಿಸ್ನಗ ನಗರದಲ್ಲಿ ನೂರು ಸಾವಿರಕ್ಕಿಂತ ಹೆಚ್ಚು ವಸತಿಗೃಹಗಳಿವೆಯೆಂದು ದಾಖಲಿಸಿರುವನು. ಅವೆಲ್ಲವೂ ಒಂದು ಅಂತಸ್ತಿನವು ಮತ್ತು ಸಮತಟ್ಟು ಮಾಳಿಗೆಯಾಗಿದ್ದು ಪ್ರತಿಯೊಂದಕ್ಕೂ ಒಂದು ಎತ್ತರವಿಲ್ಲದ ಸುತ್ತುಗೋಡೆಯಿದೆ.[೨೪]

ಕಮಲಾಪುರದ ವಾಯವ್ಯಕ್ಕೆ ಅಂದರೆ ಇಂದಿನ ಆನಂದ್‌ಸಿಂಗ್ ಅವರ ಮನೆಯ ಬಳಿಯ ಶಾಸನವಿರುವ ಪ್ರದೇಶವನ್ನು ವಿಜಯನಗರ ಕಾಲದಲ್ಲಿ ಕುಂಬಾರಕುಂಟೆ ಪ್ರದೇಶ ಆಗಿತ್ತೆಂದು ಗುರುತಿಸಲಾಗಿದೆ. ೩೦.೧೦.೧೫೧೮ರ ಶಾಸನದಲ್ಲಿ ಕೃಷ್ಣಮಹಾರಾಯನ ಪಟ್ಟಮಹಾದೇವಿಯಾದ ತಿರುಮಲದೇವಿಅಮ್ಮನು ವಿಜಯನಗರದ ಬಳಿ ಇದ್ದ "ಕಮ್ಮಾರಗುಂಟೆ" ಎಂಬ ಭೂಮಿಯನ್ನು ವಿಜಯನಗರದ ಅಂಜಗಿರಿಯ ಕರಿಯ ತಿರುವೇಂಗಳನಾಥನಗೆ ಭೂದಾನ ನೀಡುತ್ತಾಳೆ. ಈ ದಾನವನ್ನು ತಿರುಮಲ ಮಹಾರಾಯನಿಗೆ ಪುಣ್ಯವಾಗಬೇಕೆಂದು ನೀಡಿದುದಾಗಿ ಉಲ್ಲೇಖಿಸಿದೆ.[೭೫] ಅಂದರೆ ಅಲ್ಲಿ ಕುಂಬಾರ ಜನಾಂಗದರು ವಾಸಿಸುವ ಸ್ಥಳವಾಗಿತ್ತು. ಅದೇ ಶಾಸನವು "ಶ್ರೀ ಕೃಷ್ಣರಾಯ ಮಹಾರಾಯ (೯) ಪಟ್ಟಮಹಾದೇವಿ, ತಿರುಮಲದೇವಿ ಅಂಮನವರೂ ತಿರುಮಲರಾಯ ಮಹಾರಾಯರಿಗೆ ಪು(ಂ)ಣ್ಯವಾಬೇಕ (೧೦) ಎಂದು ಕೊಟ್ಟ ಭೂದಾನ ಧರ್ಮಶಾಸನ ಪಟೆಯ ಕ್ರಮವೆಂತೆಂದರೆ ವಿಜಯನಾಗರದ ಪಟ್ಟಣದೊಳಗೆ ಹಿರಿಯ (೧೧) ಕುಂಬಾರಗೇರಿಗೆ ಪಡುವಲು ಅಕ್ಕಿಪೇಠೆಗೆ ಬಡಗಲು ಮೀನವಗುಂದಿಗೆ ಮೂಡಲು ಕೋಂಟೆಗೆ ತೆಂಕ (೧೨) ಲು ಕುಂಮರಗುಂಟೆಯ ಸ್ಥಳವನ್ನು ಉಥಾನದ್ವಾರರೇ ಪು(ಂ)ಣ್ಯ ಕಾಲದಲ್ಲಿ ತುಂಗಭದ್ರಾ ತೀರದಲ್ಲಿ (೧೩) ವಿಠಲೇಶ್ವರದೇವರ ಸಂನಿಧಿಯಲ್ಲಿ ಸಹಿರ (ಂ) ಗೋದಕಧಾರಾ ಸಹಿತ(ವಾಗಿ) ಕೊಟ್ಟಿವಾಗಿ ಆ ಕುಂಮರಗುಂ (೧೪) ಟೆಯ ಚುತುಸ್ಸೀಮೆಗೆ ವೊಳಗಾದ ನಿಧಿನಿಕ್ಷೇಪ ಜಲಪಾಷಾಣ ಅಕ್ಷೀಣಿಯಾಗಾಮಿ ಸಿದ್ಧಸಾದ್ಯವೆಂದು.....".

ಕೃಷ್ಣದೇವರಾಯನ ಪತ್ನಿ ತಿರುಮಲದೇವಿಯು ತನ್ನ ಮಗ ತಿರುಮಲರಾಯನ ಒಳತಿಗಾಗಿ ಅಂಜನಗಿರಿಯ ಕರಿಯ ತಿರುವೇಂಗಳನಾಥನಿಗೆ ದಾನವನ್ನು ನೀಡಿದ ವಿಷಯದೊಂದಿಗೆ ಈ ಶಾಸನವು ಕುಂಮರಗುಟೆ, ಅಕ್ಕಿಪೇಠೆ, ಮೀನವನಗುಂದಿ ಪ್ರದೇಶಗಳನ್ನು ನಮೂದಿಸಿದೆ. ಹಿರಿಯಕುಂಬಾರಗೇರಿಯ (ಪಡುವಲು) (ಪಶ್ಚಿಮ), ಅಕ್ಕಿಪೇಠೆಯನ್ನು ಬಡಗಲು (ಉತ್ತರ), ಮೀನವನಗುಂದಿಗೆ ಮೂಡಲು (ಪೂರ್ವ) ಮತ್ತು ಕೋಂಟೆ (ಕೋಟೆ) ತೆಂಕ (ದಕ್ಷಿಣ)ಕ್ಕೆ ಇತ್ತೆಂದು ತಿಳಿಸಿದೆ. ಆ ಪ್ರದೇಶವು ಇಂದಿನ ಕಮಲಾಪುರ ಹಳೆಯ ಬಸ್ ನಿಲ್ದಾಣದ ಎದುರು ಇತ್ತೆಂದು ಗುರುತಿಸಲಾಗಿದೆ.[೭೬]

ಕಮಲಾಪುರದಲ್ಲಿ ಅನೇಕ ಬಡಾವಣೆಗಳಿವೆ. ಕಮಲಾಪುರದ ಬಂಡೆಕೇರಿಯ ಗುರಿಕಾರ ಕಾಟಯ್ಯನ ಬಳಿ ಇರುವ ಅಪ್ರಕಟಿತ ಕಂಚಿನ ಪತ್ರದಲ್ಲಿ ಕ್ರಿ.ಶ. ೧೮೯೨ ರಲ್ಲಿ ಮ್ಯಾಸಬೇಡರು ಈ ಪ್ರದೇಶದಲ್ಲಿ ಬ್ಯಾಡ್ಕಿ ಮಾಡುತ್ತಿದ್ದ ವಿವರವಿದೆ. ಇಲ್ಲಿ ಅನೇಕ ಬಡಾವಣೆಗಳು ಬೆಳೆದ ಕುರಿತ ಪುರಾವೆಗಳಿವೆ. ಈ ಬಡಾವಣೆಗಳು ಪೂರ್ವ-ಪಶ್ಚಿಮವಾಗಿ ಬೆಳೆದುಕೊಂಡಿವೆ. ಚೌಡಿಕೇರಿ

ಮನ್ಮತ್ಕೇರಿ, ಹೀರೆಕೇರಿ, ಬಂಡೆಕೇರಿ, ತಿನ್ಮತ್‌ಕೇರಿ, ಗೌನಲ್‌ಕೇರಿ, ಪಾಮಳಕೇರಿ ಎಂದು ಏಳು ಕೇರಿಗಳಲ್ಲಿ ನಾಯಕ ಜನಾಂಗದವರ ಬಡಾವಣೆಗಳು ಇಂದಿಗೂ ಉಳಿದುಕೊಂಡು ಬಂದಿವೆ.[೭೭]

ಏಳು ಕೇರಿಗಳಿಗೆ ಗುರಿಕಾರನು ಯಜಮಾನನಾಗಿರುತ್ತಾನೆ. ಚೌಡಿಕೇರಿಯಲ್ಲಿ ಕಟ್ಟೆಯಿದೆ ಅದಕ್ಕೆ ಚೌಡಿಕಟ್ಟೆ ಎನ್ನುವರು. ಇಲ್ಲಿ ನ್ಯಾಯತೀರ್ಮಾನ ಮಾಡಲಾಗುತ್ತಿತ್ತು. ಮನ್ಮತ್ಕೇರಿ ಜನರು ವಿರೂಪಾಕ್ಷ ಜಾತ್ರೆಯಲ್ಲಿ ರಥಕ್ಕೆ ಸೊನ್ನೆ ಹಾಕುವರು. ಹಿರೇಕೇರಿಯವರು ಕಮಲಾಪುರದ ಗಾರಾಭಾವಿ ಆಂಜನೇಯ ರಥೋತ್ಸವಕ್ಕೆ ಮತ್ತು ಮಾಲ್ಯವಂತದಲ್ಲಿರುವ ಶ್ರೀರಘುನಾಥನ ರಥೋತ್ಸವಕ್ಕೆ "ಸೊನ್ನೆ"ಯನ್ನು ಹಾಕುವವರು. ಇವು ಈ ಕೇರಿಗಳ ವಿಶೇಷತೆಯಾಗಿದೆ.[೭೮] ಇದೇ ರೀತಿಯ ಬಡಾವಣೆಗಳು ಹೊಸಪೇಟೆಯಲ್ಲಿವೆ ಅವುಗಳು: ಮ್ಯಾಸಕೇರಿ, ಚಿತ್ರಕೇರಿ, ತಳವಾರಕೇರಿ, ಉಕ್ಕಡಕೇರಿ, ಬಾಣದಕೇರಿ, ಜಂಬಾನಹಳ್ಳಿಕೇರಿ ಮತ್ತು ಬಂಡೆಕೇರಿಗಳು.[೭೯] ವಿಜಯನಗರ ಕಾಲದಿಂದ ಈ ರೀತಿಯ ಬಡಾವಣೆಗಳು ಮುಂದುವರೆದುಕೊಂಡು ಬಂದಿವೆ. ಅಂದರೆ ವಿಜಯನಗರ ಕಾಲದಲ್ಲಿ ಕಮಲಾಪುರವು ಏಳು ಕೇರಿಗಳನ್ನು ಅಲ್ಲದೆ ಕುಂಮಾರಗುಂಟೆ, (ಕುಂಬಾಕೇರಿ) ಮೀನಿವನ ಗುಂದಿ (ಬೆಸ್ತರಕೇರಿ) ಮತ್ತು ಅಕ್ಕಿಪೇಠೆ ಹೊಂದಿತ್ತು ಎಂಬ ಉಲ್ಲೇಖವಿರುವುದರಿಂದ ಇದು ಒಂದು ಮುಖ್ಯ ಪಟ್ಟಣವಾಗಿತ್ತು.

ರಾಜಧಾನಿ ಪಟ್ಟಣದಲ್ಲಿ ಮಹಾನವಮಿ ಉತ್ಸವವು ಒಂಬತ್ತು ದಿನಗಳವರೆಗೆ ನಡೆಯುತ್ತಿತ್ತು. ಈ ಉತ್ಸವಕ್ಕೆ ಮತ್ತು ಕಾರ್ಯಕ್ರಮಗಳಿಗೆ ವೆಚ್ಚವಾದ ಖರ್ಚಿನ ಲೆಕ್ಕ ಪತ್ರವನ್ನು ಪರಿಶೀಲನೆ ಮಾಡಲು ಕಮಲಾಪುರದಲ್ಲಿರುವ ಎತ್ತರದ ಮಂಟಪಕ್ಕೆ ರಾಜನು ತನ್ನ ಅಧಿಕಾರಿಗಳು, ಎಲ್ಲಾ ಸೈನಿಕರೊಂದಿಗೆ ಸೇರುತ್ತಿದ್ದನು.

ಕಮಲಾಪುರದ ಎತ್ತರದ ಕಲ್ಲಿನ ಮಂಟಪ (ಪ್ಲಾಟ್‌ಫಾರ್ಮ್) ಈ ಪ್ರದೇಶವು ಕಮಲಾಪುರದಿಂದ ಪಾಪಿನಾಯಕನಹಳ್ಳಿಗೆ ಹೋಗುವ ಮಾರ್ಗದಲ್ಲಿದೆ. ಈ ಮಂಟಪದ ಸುತ್ತಲೂ ಇಂದು ವ್ಯವಸಾಯದ ಭೂಮಿಯಿದೆ. ಮಂಟಪದ ಸುತ್ತಮುತ್ತಲು ವಿಜಯನಗರ ಕಾಲದ ಮಡಿಕೆಗಳು ಮತ್ತು ಕಬ್ಬಿಣದ ಕಿಟ್ಟಗಳು ಸುಮಾರು ೧೦೦ ಮೀ. ಅಳತೆಯ ಪ್ರದೇಶಗಳಲ್ಲಿ ದೊರೆಯುತ್ತವೆ ಹಾಗೂ ಕಬ್ಬಿಣ ತಯಾರಿಸುವ ವಸ್ತುಗಳು ಸಹ ದೊರಕಿವೆ. ಈ ಮಂಟಪವನ್ನು ಎತ್ತರವಾಗಿ ಕಟ್ಟಲಾಗಿದೆ. ಮಂಟಪದಲ್ಲಿ ಕೊಠಡಿಯ ಭಾಗವು ಆಯತಾಕಾರದಲ್ಲಿದ್ದು ಅದರಲ್ಲಿ ಐದು ಅಂಕಣಗಳ ಮೂರು ಭಾಗಗಳಿವೆ. ಕಟ್ಟಡದ ಅಳತೆಯ ೨೨.೯ ಮೀ. X ೧೮.೯ ಮೀ. ಒಳಗಿನ ಕೊಠಡಿ ೧೯.೭ಮೀ X ೧೪.೫ಮೀ. ಎತ್ತರದ ಅಳತೆ ೪.೧೫ಮೀ. ಸಂಪೂರ್ಣ ಕಟ್ಟಡದ ಎತ್ತರ ೭.೮ ಮೀ. ಉತ್ತರ–ದಕ್ಷಿಣ ಭಾಗ ೧.೪೭ ಮೀ. ಪೂರ್ವ ಭಾಗ ೨.೯೫ ಮೀ. ಪಶ್ಚಿಮ ಭಾಗ ೧.೫೦ ಮೀ. ಎತ್ತರವಾಗಿದೆ. ಈ ಎತ್ತರವಾದ

ಕಟ್ಟೆಯನ್ನು ಕೆಳಗಿನಿಂದ ಮೇಲಿನವರೆಗಿನ ಎತ್ತರ ೨.೪೫ ಮೀ. ಇದನ್ನು ಉದ್ಧವಾದ ಕಲ್ಲುಗಳಿಂದ ಏಳು ಸಾಲುಗಳಲ್ಲಿ ಜೋಡಿಸಲಾಗಿದೆ. ಇದರ ಅಳತೆಯು ೩೬೩ X ೩೨ X ೩೭ ಸೆಂ.ಮೀ. ಇದರ ಅಳತೆ ೧೮೭ X ೭೦ X ೩೫ ಸೆಂ.ಮೀ.

ಛತ್ತಿನ ಭಾಗದಲ್ಲಿ ಉತ್ತರ–ದಕ್ಷಿಣವಾಗಿ ಮತ್ತು ಪೂರ್ವ–ಪಶ್ಚಿಮವಾಗಿ ಸುತ್ತಲೂ ತೊಲೆಗಳನ್ನು ಹೊಂದಿಸಲಾಗಿದೆ. ಈ ತೊಲೆಗಳನ್ನು ಚಿಕ್ಕ ಕಲ್ಲು ಮತ್ತು ಗಾರೆಯ ಮೂಲಕ ಗಟ್ಟಿಗೊಳಿಸಲಾಗಿದೆ. ಸಾಮಾನ್ಯವಾಗಿ ೧.೫ ಸೆಂ.ಮೀ. ದಪ್ಪವಾಗಿ ಗಿಲಾವು ಮಾಡಲಾಗಿದೆ. ಈ ಮಂಟಪಕ್ಕೆ ಉತ್ತರ ಭಾಗದಲ್ಲಿ ಬಾಗಿಲದ ಕುರುಹುಗಳಿವೆ. ಇಲ್ಲಿ ೨೩ ಸೆಂ.ಮೀ. ಅಗಲ ಮತ್ತು ೫ ಸೆಂ.ಮೀ. ಅಗಲ ೮೦ ಸೆಂ.ಮೀ. ಮತ್ತೊಂದು ಚೌಕ್ಕಟ್ಟಿನ ಭಾಗದಲ್ಲಿ ಬಾಗಿಲಿನ ಕುಳಿಗಳಿವೆ. ಈ ಕುಳಿಯ ಆಳ ೩ ಸೆಂ.ಮೀ. ಸುತ್ತಳತೆ ೭ ಸೆಂ.ಮೀ. ತಳಭಾಗದ ಅಗಲ ೩.೫ ಸೆಂ.ಮೀ. ಉತ್ತರ ಭಾಗದ ಬಾಗಿಲ ಪಟ್ಟಿಕೆ ಇದೇ ರೀತಿಯಾಗಿದೆ. ಇದರ ಎರಡು ಬಾಗಿಲಿನ ಕುಳಿಗಳ ದೊರೆತಿದ್ದು ಅದರ ಸುತ್ತಳತೆಯ ೫.೫ ಸೆಂ.ಮೀ. ಆಳ ೪ ಸೆಂ.ಮೀ.

ಈ ಕಟ್ಟಡದ ಆಗ್ನೇಯ ಭಾಗದಲ್ಲಿ ನಾಶವಾಗಿರುವ ಒಂದು ಕಟ್ಟಡದ ಕೆಲವು ಭಾಗಗಳಿವೆ. ಅಲ್ಲಿ ಚಿಕ್ಕ ಗುಂಡು ಕಲ್ಲು, ಗಚ್ಚು, ಇಟ್ಟಿಗೆ ಮತ್ತು ಕಿಟ್ಟ ಕಂಡುಬಂದಿದೆ. "ಡಿ" ಆಕಾರದ ಉದ್ದವಾದ ಭಾಗವಿದ್ದು ಇದರ ಉದ್ದ ೧೧೦ ಸೆಂ.ಮೀ. ೬೭ ಸೆಂ.ಮೀ. ಅಗಲ, ೪೬ ಸೆಂ.ಮೀ. ಎತ್ತರವನ್ನು ಹೊಂದಿದೆ. ಇಲ್ಲಿರುವ ತಗ್ಗಿನ ಭಾಗ ೪೭ ಸೆಂ.ಮೀ. ಉದ್ದ ಪೂರ್ವದಿಂದ ಪಶ್ಚಿಮದವರೆಗೆ ೪೦ ಸೆಂ.ಮೀ. ಅಗಲವಾಗಿದೆ. ೨೦ ಸೆಂ.ಮೀ. ಆಳವಾಗಿದೆ. ಇದು ೬ ಸೆಂ.ಮೀ. ಉತ್ತರ ಮತ್ತು ಪೂರ್ವ ಭಾಗದಲ್ಲಿ "D" ಆಕಾರದ ದಿಬ್ಬಕ್ಕೆ ಸೇರುತ್ತದೆ. ನಾಲೆಯ ಉದ್ದ ೬೩ ಸೆಂ.ಮೀ. ೧೦ ಸೆಂ.ಮೀ. ಆಳ ೩ ಸೆಂ.ಮೀ. ಅಗಲವನ್ನು ಹೊಂದಿದ ನಾಲೆಯು "D" ಆಕಾರದ ದಕ್ಷಿಣ ಭಾಗಕ್ಕೆ ಸಾಗುತ್ತದೆ. ಇದು ಮುಂದುವರೆದ ಪಶ್ಚಿಮ ದಿಕ್ಕಿನಿಂದ ತಗ್ಗಿನ ಭಾಗಕ್ಕೆ ಸಾಗುತ್ತದೆ.

ಈ ಎತ್ತರವಾದ ಮಂಟಪವನ್ನು ಏಕೆ ಉಪಯೋಗ ಮಾಡುತ್ತಿದ್ದರು? ಎಂಬುದಕ್ಕೆ ಡೊಮಿಂಗೊ ಪಯಾಸ್‌ನ ಕಥಾನಕದಲ್ಲಿ ಕೆಲವು ಮಾಹಿತಿ ದೊರಕುತ್ತದೆ. ಅದರಂತೆ ಕೃಷ್ಣದೇವರಾಯನ ಕಾಲದಲ್ಲಿ ಮಹಾನವಮಿಯ ವೇಳೆಯಲ್ಲಿ ಹತ್ತು ದಿನದವರೆಗೆ ಹಂಪಿಯ ಮಹಾನವಮಿ ದಿಬ್ಬದಲ್ಲಿ ಉತ್ಸವ ನಡೆಯುತ್ತಿತ್ತು. ನಂತರ ಒಂಬತ್ತನೇ ದಿನ ರಾಜನು ತನ್ನ ಎಲ್ಲಾ ಸೈನ್ಯದೊಂದಿಗೆ ಊರಿನ ಹೊರಭಾಗದಲ್ಲಿನ ಈ ಎತ್ತರದ ಮಂಟಪಕ್ಕೆ ಬಂದು ತನ್ನ ಎಲ್ಲಾ ಸೈನಿಕರನ್ನು ತಪಾಸಣೆ ಮಾಡುವುದು ಮತ್ತು ಉತ್ಸವದಲ್ಲಿ ಆಯೋಜಿಸಿದ ಖರ್ಚು ವೆಚ್ಚಗಳನ್ನು

ನೋಡಲು ಬರುತ್ತಿದ್ದನು. ಅದಕ್ಕಾಗಿ ಈ ಪ್ರದೇಶದಲ್ಲಿ ರಾಜ ಎಲ್ಲಾ ಸೈನಿಕರ ಮತ್ತು ಸೇನಾಧಿಪತಿಗಳು ಗುಡಾರ ಹಾಕಿರುತ್ತಿದ್ದರು. ರಾಜನ ಗುಡಾರದ ಸುತ್ತಲೂ ವಿವಿಧ ಅಧಿಕಾರಿಗಳು ಗುಡಾರಗಳು ಇರುತ್ತಿದ್ದವು. ಈ ಎಲ್ಲಾ ಸೈನ್ಯಗಳ ಗುಂಪಿನಲ್ಲಿ ಕುದುರೆ, ಆನೆಗಳು, ಇತ್ಯಾದಿಗಳು ಇರುತ್ತಿದ್ದವು.

ರಾಜನು ಬಿಳಿ ಬಟ್ಟೆಯನ್ನು ಹೊದಿಸಿದ ಕುದುರೆಯ ಮೇಲೆ ಕುಳಿತಿರುತ್ತಾನೆ. ಅವನ ಹಿಂದೆ ಇಬ್ಬರು ಎರಡು ಛತ್ರಿಗಳನ್ನು ಹಿಡಿದುಕೊಂಡು ಬರುವರು. ನಂತರ ಈ ದಿಬ್ಬದ ಮೇಲೆ ಕುಳಿತುಕೊಂಡು ಎಲ್ಲಾ ಖರ್ಚು ವೆಚ್ಚಗಳನ್ನು ಕುರಿತು ಚರ್ಚಿಸುವರು. ಸೈನಿಕರು ಮತ್ತೊಮ್ಮೆ ರಾಜನ ಎದುರು ಪ್ರದರ್ಶನ ಮಾಡುವರು.

ಈ ಪ್ರದೇಶದಲ್ಲಿ ಕಬ್ಬಿಣದ ಕುಲುಮೆಯು ದೊರೆತಿವೆಯಾದರೂ ಯಾವುದೇ ಇತರೆ ಅವಶೇಷಗಳು ದೊರೆತಿಲ್ಲ. ಇಲ್ಲಿ ಕೇವಲ ಒಂದು ಸಂದರ್ಭದಲ್ಲಿ ಮಾತ್ರ ಜನ ಸೇರುತ್ತಿದ್ದರು. ಆದ್ದರಿಂದ ಈ ಪ್ರದೇಶವು ವಿಜಯನಗರ ಕಾಲದಲ್ಲಿ ಜನ ವಸತಿಯ ಪ್ರದೇಶವಾಗಿರಲಿಲ್ಲ.[೮೦] ಆದರೆ ತಾತ್ಕಾಲಿಕವಾಗಿ ಬೀಡು ಬಿಡುವ ಸ್ಥಳವಾಗಿತ್ತು. "ಕ್ಯಾಂಪ್" ಎನ್ನುವ ಉರ್ದು ಶಬ್ಧವು, ಮಹಮದಿಯರು ಭಾರತಿಯ ರಾಜರಿಗೆ ಪರಿಚಯಿಸಿದರು. ರಾಜರು ರಾಜಧಾನಿಯಲ್ಲಿ ಅಥವಾ ರಾಜಧಾನಿ ಹೊರಭಾಗದಲ್ಲಿ "ಕ್ಯಾಂಪ್"ನಲ್ಲಿ ವಾಸ ಮಾಡುವುದು. ಭಾರತದಲ್ಲಿ ಮೊದಲೇ ಪರಿಚಯವಿತ್ತು. "ಕ್ಯಾಂಪ್" ಎನ್ನುವುದಕ್ಕೆ "ಶಿಬಿರ", "ಶಿವಿರ" ಎನ್ನುವ ಸಂಸ್ಕೃತ ಪದವನ್ನು ಬಳಸಲಾಗಿದೆ. ಸಂಸ್ಕೃತದಲ್ಲಿ ನಿಬೆಸ (Nibesa), ಶಿಬರ (Encampment), ಆಗಂತರ (agantuka-Saainya basa) ಸೈನ್ಯಬಾಸ, ತಾತ್ಕಾಲಿಕ ವಸತಿ, Kataka Capital or town, ರಾಜಧಾನಿಪಟ್ಟಣದಲ್ಲಿ ಸೈನಿಕರ ವಸತಿಯಲ್ಲಿ ಮುಖ್ಯವಾಗಿ ರಾಜನ ವಸತಿ ಗೃಹವನ್ನು ಕಟ್ಟಿರುತ್ತಾರೆ.[೮೧]

ಕೌಟಿಲ್ಯನ ಹೇಳಿಕೆಯಂತೆ ಒಂದು ಶಿಬಿರವನ್ನು ಕಟ್ಟಲು ಅಲ್ಲಿ ಕಟ್ಟಡ ಕಟ್ಟಿಸುವ ಮುಖ್ಯಸ್ಥನು ಇರುತ್ತಾನೆ. ಜೋತಿಷ್ಯಗಾರರ ಮೂಲಕ ಚೌಕವಾದ ಅಥವಾ ವೃತ್ತಾಕಾರದ ಶಿಬಿರಗಳನ್ನು ಕಟ್ಟಲಾಗುವುದು.[೮೨] ಪ್ರಾಚೀನ ಕಾಲದಿಂದ ಭಾರತದಲ್ಲಿ ಶಿಬಿರ, ಟೆಂಟ್, ಕ್ಯಾಂಪ್ ಎನ್ನುವ ಪದಕ್ಕೆ ವಿವರಣೆ ಮತ್ತು ಲಕ್ಷಣಗಳನ್ನು ನೀಡಿದ್ದಾರೆ. ಅದರಂತೆಯೇ ವಿಜಯನಗರ ಕಾಲದಲ್ಲಿ ಶಿಬಿರವನ್ನು ಅಥವಾ ವಸತಿಯನ್ನು ಕಟ್ಟಿಕೊಂಡಿರುವುದಕ್ಕೆ ಇಲ್ಲಿ ದೊರೆತ ಅವಶೇಷಗಳು ಸಾಕ್ಷಿಯಾಗಿದೆ.

ವಿಜಯನಗರ ಆಳ್ವಿಕೆಯ ನಂತರ ಕ್ರಿ.ಶ. ೧೭೦೩ರಲ್ಲಿ ಕಮಲಾಪುರವು ಕುರುಗೋಡನ್ನು ಆಳುತ್ತಿದ್ದ ಚಿನ್ನರಾಯನ ಆಡಳಿತಕ್ಕೆ ಒಳಪಟ್ಟಿತ್ತು. ಇವನು ಈ ಪ್ರದೇಶದಲ್ಲಿ ಒಂದು

ಕೋಟೆಯನ್ನು ಕಟ್ಟಿಸಿದನು. ಕೋಟೆಯ ಕೆಲವು ಕುರುಹುಗಳು ಮಾತ್ರ ಇಂದು ದೊರೆಯುತ್ತದೆ. ಕಮಲಾಪುರದಲ್ಲಿ ಒಟ್ಟು ಎರಡು ಕೋಟೆ ಬುರುಜುಗಳಿವೆ. (೧೫°೧೮'೮ ಉತ್ತರ ಅಕ್ಷಾಂಶ; ೭೬°೨೮'೨೬ ಪೂರ್ವ ರೇಖಾಂಶ), ಹಳೇ ಬಸ್ ನಿಲ್ದಾಣದ ಬಳಿಯ ಮಾರುಟ್ಟೆಯ ಆವರಣದಲ್ಲಿ ಒಂದು ಬುರುಜು ಇದೆ. ಈ ಬುರುಜಿನ ಸುತ್ತಲೂ ಆವರಿಸಿದಂತೆ ಭಾಗಗಳಲ್ಲಿ ಮನೆಗಳು, ಅಂಗಡಿಗಳು, ಬೆಳೆದುಕೊಂಡಿವೆ. ಸಂತೆ ಬಜಾರಕ್ಕೆ ಮುಖ ಮಾಡಿಕೊಂಡಿರುವ ಬುರುಜಿನ ಮೇಲೆ ಎರಡು ಗೂಡುಗಳಿವೆ. ಒಂದು ಗೂಡಿನಲ್ಲಿ ಆಂಜನೇಯನ ಶಿಲ್ಪವಿದೆ. ಮತ್ತೊಂದು ಗೂಡಿನಲ್ಲಿ ನಾಗರಕಲ್ಲುಗಳಿವೆ. ಬುರುಜಿಗೆ ಹೊಂದಿಕೊಂಡು ಬಲಭಾಗದಲ್ಲಿ ಕೋಟೆಗೋಡೆಯಿದೆ. ಆದರೆ ಈ ಬಲ ಭಾಗದ ಕೋಟೆಗೋಡೆಯ ಭಾಗಗಳು ಬಿದ್ದಿರುವುದರಿಂದ ಆ ಭಾಗವನ್ನು ಮೈದಾನವನ್ನಾಗಿ ಉಪಯೋಗಿಸುತ್ತಿದ್ದಾರೆ. ನಗರೇಶ್ವರ ದೇವಾಲಯವು ಕೋಟೆ ಗೋಡೆಯ ಅಂಚೆಗೆ ಇದ್ದು ಅದು ಇಂದು ಕೋಟೆಯ ಭಾಗವಿದೆ. ಬುರುಜಿನಿಂದ ಇಳಿಯಲು ಮೆಟ್ಟಿಲುಗಳಿವೆ ಈ ಮೆಟ್ಟಿಲುಗಳನ್ನು ಮನೆಯ ಮಾಳಿಗೆಯ ಮೆಟ್ಟಿಲಾಗಿ ಬಳಸಿಕೊಳ್ಳಲಾಗುತ್ತಿದೆ. ಈ ಬುರುಜಿನ ಸುತ್ತಮುತ್ತಲೂ ಮನೆಗಳಿವೆ. ಈ ಎರಡು ಬರುಜುಗಳು ವೃತ್ತಾಕಾರವಾಗಿದ್ದು ೬೦ ಅಡಿ ಎತ್ತರ, ೧೨೫ ಅಡಿ ಸುತ್ತಳತೆಯನ್ನು ಹೊಂದಿದೆ. ಕಮಲಾಪುರ ಕೋಟೆಯು ಸುಮಾರು ೨೦-೨೫ ಎಕರೆ ಪ್ರದೇಶದ ವಿಸ್ತೀರ್ಣತೆಯನ್ನು ಹೊಂದಿದೆ.[೮೩]

ರಾಜಧಾನಿ ಪಟ್ಟಣಕ್ಕೆ ಸುತ್ತವರೆದು ಅನೇಕ ಉಪನಗರಗಳಿವೆ. ವಿರೂಪಾಕ್ಷಪುರ, ವಿಠಲಾಪುರ, ವರದರಾಜಮ್ಮನಪಟ್ಟಣ, ತಿರುಲಾರಾಯಪುರ, ನಾಗಲಾಪುರ, ಕೃಷ್ಣಾಪುರ ಅಚ್ಯುತಾಪುರ. ಅದರಂತೆ ರೀತಿ ಕಮಲಾಪುರವು ಒಂದು[೮೪] ನಗರವು ಮನೆ, ದೇವಾಲಯ ಮಾರುಕಟ್ಟೆ ಮತ್ತು ಕಿರು ಕೈಗಾರಿಕೆ ಪ್ರದೇಶಗಳಿಂದ ಬೆಳವಣಿಗೆಗೆ ಹೊಂದಿದೆ. ಈ ನಗರೀಕರಣದ ಇತಿಹಾಸವನ್ನು ಪ್ರಾಚೀನ ಕಾಲದ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗಳಿವೆ. ಭಾರತದಲ್ಲಿ ನಡೆಸಲಾದ ಅನೇಕ ಉತ್ಖನನಗಳಲ್ಲಿ ನಗರಗಳ ವಿನ್ಯಾಸವು ದೊರೆತಿದೆ.

ವಾಲ್ಮೀಕಿಯು ಅಯೋಧ್ಯ ನಗರದ ಬಗೆಗೆ ವಿವರಿಸಿದ್ದಾರೆ. ಅಯೋಧ್ಯ ನಗರವು ಚೌಕಾಕಾರವಾಗಿದ್ದು ೧೨ ಯೋಜನೆಯಷ್ಟು ಉದ್ದ ಮತ್ತು ಅಗಲವಾಗಿದೆ. ೩ ರಾಜಬೀದಿಯು ನಗರದ ಮಧ್ಯದಿಂದ ಹಾದು ಹೋಗುತ್ತದೆ. ಅದು ಮುಂದೆ ನಗರವನ್ನು ಸುತ್ತುವರೆದು ನಂತರ ಕೋಟೆ ಬಾಗಿಲನ್ನು ಸೇರುತ್ತದೆ. ಈ ಪಟ್ಟಣವು ಚೌಕವಾಗಿದ್ದು ಅಲ್ಲಿ ೭ ಅಂತಸ್ತಿನ ಮನೆಗಳಿರುತ್ತವೆ. ಬೌದ್ಧ ಸಾಹಿತ್ಯದ ಉಲ್ಲೇಖದಂತೆ ನಿಗಮಗಳು, ಪುರಗಳು ಮತ್ತು ನಗರಗಳು ಎಂಬ ಪದಗಳಿಗೆ ಅನೇಕ ಅರ್ಥಗಳಿವೆ. "ಪುರ" ಎಂಬುದು ಪ್ರಥಮವಾಗಿ ಇದು ಕೋಟೆಯನ್ನು

ಹೊಂದಿರಬೇಕು. ಈ ವಿಷಯವು ವೈದಿಕ ಸಾಹಿತ್ಯದಲ್ಲಿಯೂ ಉಲ್ಲೇಖಿತವಾಗಿದೆ. "ಪಾಲಿ" ಗ್ರಂಥಗಳಂತೆ ನಗರವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಲಾಗುವುದು, ಇವೆಲ್ಲವು ರಾಜಧಾನಿ ಆಡಳಿತಕ್ಕೆ ಒಳಪಡುತ್ತಿದ್ದವು. ಮಹಾನಗರವು ಒಂದು ಮುಖ್ಯ ನಗರವಾಗಿತ್ತು ಹಾಗೂ ಮಹತ್ವದ ನಗರವಾಗಿತ್ತು. ಅದು ಮುಂದುವರಿದು ಉಲ್ಲೇಖಿಸುವಂತೆ ಪಟ್ಟಣದ ಸಮೀಪದಲ್ಲಿಯೇ ಕಾಡು ಇರುತ್ತದೆ.

ಅದೇ ರೀತಿ ಕಮಲಾಪುರದಲ್ಲಿ ಕೆರೆ, ಕೊಂಡ, ಬಾವಿಗಳು ಇರುವುದು ಗಮನಾರ್ಹ. "ಅಮರಕೋಶ"ದಲ್ಲಿ ರಾಜಧಾನಿ ಪಟ್ಟಣಕ್ಕೆ ಉಪ–ನಗರಗಳು ಅಥವಾ ಸುಖ–ನಗರಗಳು ಕೂಡಿಕೊಂಡಿರುತ್ತವೆ ಎಂದು ಉಲ್ಲೇಖಿತವಾಗಿದೆ. ಇವುಗಳಿಗೆ ಪಟ್ಟಣ, ಪುತಬೇದಾನ, ಸ್ಥಾನಿಯಾ ಮತ್ತು ನಿಗಮ ಎಂಬ ಹೆಸರುಗಳಿದ್ದವು. ಪ್ರಾಚೀನ ಕಾಲದಲ್ಲಿ ದೊಡ್ಡ ನಗರಗಳ ಅಥವಾ ಪುರಗಳ ಇದ್ದಿದ್ದು ಇವುಗಳಿಗೆ ದ್ರೋಣ–ಮುಖ, ಖಾರ್ವತಿಕ, ಸಮಗ್ರಹನ ಇವುಗಳು ಸಖ–ನಗರ ಎಂಬ ಕಿರು ನಗರಗಳಿದ್ದವು. ಮಾನಸಾರ ಮತ್ತು ಮಯಮತ ಗ್ರಂಥಗಳು ೮ ಪ್ರಕಾರದ ಗ್ರಾಮಗಳನ್ನು ಕುರಿತು ಉಲ್ಲೇಖಿಸಿದೆ.

ಅವುಗಳು ಇಂತಿವೆ ದಂಡಕ, ಸ್ವಸ್ತಿಕ, ಪುಸ್ತಕ, ಪ್ರಕೀರ್ಣಕ, ನಂದ್ಯಾವರ್ತ, ಪರನ ಪದ್ಮ, ಮತ್ತು ಶ್ರೀಪ್ರತಿಷ್ಠಿತ ಮತ್ತು ಶ್ರೀವತ್ಸ ಒಂದು ಗ್ರಾಮವನ್ನು ನಿರ್ಮಿಸಬೇಕಾದರೆ ಅಲ್ಲಿಯ ಭೂಮಿಯು ಚತುರಶ್ರ, ಆಯತ, ತ್ರಿಕೋಣ, ವರ್ತಲಾಕಾರ ಅಥವಾ ಮರ್ದಲಾಕಾರವಾಗಿದ್ದರೆ ಪ್ರಶಸ್ತವಾದುದೆಂದು ವಿಶ್ವಕರ್ಮ ವಾಸ್ತುಶಾಸ್ತ್ರವು ದಾಖಲಿಸಿದೆ.[೮೫] ವಿಜಯನಗರ ಕಾಲದ ಕಮಲಾಪುರವು ಸಮತಟ್ಟಾದ ಭೂಮಿಯನ್ನು ಹೊಂದಿದ್ದು "ಚತುರಶ್ರ"ಯದಲ್ಲಿ ನಿರ್ಮಿಸಲಾಗಿದೆ. ಹೀಗೆ ರಾಜಧಾನಿ ಪಟ್ಟಣಕ್ಕೆ ಹೊಂದಿಕೊಂಡು "ನಿಗಮ" ಇರುತ್ತದೆ. ಇದು ನಗರಕ್ಕೆ ಬೇಕಾಗುವ ವಸ್ತುಗಳನ್ನು ರವಾನಿಸುವ ಕಾರ್ಯವನ್ನು ಮಾಡುತ್ತಿತ್ತು.[೮೬] ಕಮಲಾಪುರವು ರಾಜಧಾನಿ ಪಟ್ಟಣದ ಹತ್ತಿರದ "ಉಪನಗರ" ಅಥವಾ "ನಿಗಮ"ವಾಗಿದ್ದು ಎರಡನೇ ಸುತ್ತಿನ ಕೋಟೆಯಲ್ಲಿದೆ. ಈ ನಿಗಮವು ರಾಜಧಾನಿಗೆ ಬೇಕಾಗುವ ವಸ್ತುಗಳನ್ನು ಪೂರೈಸುವ ಕಾರ್ಯವನ್ನು ಮಾಡುತ್ತಿತ್ತು. ಇಲ್ಲಿ ದೊರಕಿರುವ ಉಲ್ಲೇಖಗಳಂತೆ ಹಾಗೆ ಕುಮಾರಗುಂಟೆ, ಮೀನವಗುಂದಿ, ಅಕ್ಕಿಪೇಟೆ, ಇತ್ಯಾದಿಗಳು ಇದ್ದವು. ಆದ್ದರಿಂದ ರಾಜಧಾನಿ ಪಟ್ಟಣಕ್ಕೆ ಮಡಿಕೆಗಳನ್ನು, ಮೀನುಗಳನ್ನು, ಅಕ್ಕಿಯನ್ನು ಮುಂತಾದವುಗಳನ್ನು ಪೂರೈಸುತಿದ್ದರು. ಇಲ್ಲಿ ವಿಶೇಷವಾಗಿ ಒಂದು ಅಂಶವನ್ನು ಗಮನಿಸಬೇಕು. ಭತ್ತವನ್ನು ಹೆಚ್ಚು ಬೆಳೆಯುತ್ತಾರೆ.[೮೭] ಕಮಲಾಪುರದಲ್ಲಿ ವಿವಿಧ ಬಗೆಯ ಅಕ್ಕಿ (Rice) ಸಿಗುವುದರಿಂದ ವಿಶೇಷವಾಗಿ ಅಕ್ಕಿಪೇಟೆ ಇದೆ. ಏಕೆಂದರೆ ಮೊದಲೇ ಕೃಷ್ಣಾಪೇಟೆಯಲ್ಲಿ ದವಸ–ಧಾನ್ಯಗಳ ಮಾರುಕಟ್ಟೆಯಿತ್ತು ಇದರೊಂದಿಗೆ ಕಮಲಾಪುರದಲ್ಲಿ ಪ್ರಮುಖವಾಗಿ

ಅಕ್ಕಿಪೇಟೆಯ ಉಲ್ಲೇಖವಿದೆ. ಅಲ್ಲದೆ ಮೀನುಗಾರರು ಇರುವ ಸ್ಥಳವನ್ನು ಉಲ್ಲೇಖಿಸಿದೆ. ವಿಜಯನಗರ ಕಾಲದಲ್ಲಿ ಕಮಲಾಪುರವು ರಾಜಧಾನಿ ಪಟ್ಟಣದ ಹತ್ತಿರದ ಗ್ರಾಮವಾಗಿದ್ದರೂ ಅದು ಈ ಎಲ್ಲಾ ಸೌಕರ್ಯವನ್ನು ಹೊಂದಿತ್ತು ಮತ್ತು ರಾಜಧಾನಿಯ ಅಗತ್ಯಗಳನ್ನು ಪೂರೈಸುವುತ್ತಿದ್ದರಿಂದ ಪ್ರಾಮುಖ್ಯತೆಯನ್ನು ಪಡೆದಿತ್ತು.




**ಕೋಟೆ ಬುರುಜು, ಕಮಲಾಪುರ**



**ಬುರುಜಿನ ಮಧ್ಯದ ಗೂಡು**




**ಬುರುಜಿಗೆ ಹೋಗುವ ಮೆಟ್ಟಲು, ಕಮಲಾಪುರ**

**ಆನೆಗೊಂದಿ**

ತುಂಗಭದ್ರಾ ನದಿಯ ಬಲ ದಂಡೆಯ ಮೇಲಿರುವ ಆನೆಗೊಂದಿ (೧೫°೧೬'೪೨.೫ ಉತ್ತರ ಅಕ್ಷಾಂಶ; ೭೬°೨೫'೧೬.೮ ಪೂರ್ವ ರೇಖಾಂಶ) ಗ್ರಾಮವು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಲ್ಲಿದೆ. ಇದರ ಒಟ್ಟು ವಿಸ್ತೀರ್ಣವು ೭೨೧.೭, ಹೆಕ್ಟೇರ್ ಆಗಿದ್ದು ಇಲ್ಲಿನ ಒಟ್ಟು ಜನಸಂಖ್ಯೆ ೩೭೩೩. ಆನೆಗೊಂದಿಯು ಪ್ರಾಗಿತಿಹಾಸಿಕ ಕಾಲದಿಂದ ಇಂದಿನವರೆಗೂ ಜನವಸತಿ ಹೊಂದಿದ ಪ್ರದೇಶವಾಗಿದೆ. ಫಲವತ್ತಾದ ಭೂಮಿಯನ್ನು ಹೊಂದಿರುವ ಈ ಗ್ರಾಮವು ನವಶಿಲಾಯುಗದಿಂದಲೂ ಸತತವಾಗಿ ಜನ ವಸತಿನೆಲೆಯಾಗಿರುವುದು ಗಮನಾರ್ಹ.

ಆನೆಗೊಂದಿಯ ಉತ್ತರಕ್ಕೆ ಸುಮಾರು ೩ ಕಿ.ಮೀ. ದೂರದಲ್ಲಿ ವಿಜಯನಗರ ಕಾಲದ ಕಡೇಬಾಗಿಲಿದೆ. ಈ ನೆಲೆಯಲ್ಲಿ ನವಶಿಲಾಯುಗದಿಂದ ಮಧ್ಯಯುಗೀನ ಕಾಲದವರೆಗಿನ ನೆಲೆಗಳಿವೆ. ನವಶಿಲಾಯುಗದ ನೆಲೆಯಲ್ಲಿ ಪಶುಸಂಗೋಪನೆಯ ಪಳೆಯುಳಿಕೆಗಳು ದೊರಕಿವೆ. ಎತ್ತು, ಹಸು, ಕುರಿ, ಮೇಕೆ, ನಾಯಿ, ನೀರೆಮ್ಮೆ ಮೊದಲಾದ ಪ್ರಾಣಿಗಳ ಎಲುಬುಗಳು ದೊರೆತಿವೆ. ಇಲ್ಲಿ ನವಶಿಲಾಯುಗದ ಬೂದಿದಿಬ್ಬವು ಸಹ ಇದೆ.




200 m

ಇಲ್ಲಿ ನಡೆಸಲಾದ ಉತ್ಖನನದಲ್ಲಿ ಎಷ್ಟು ಪ್ರಮಾಣದಲ್ಲಿ ಪ್ರಾಣಿಗಳಿದ್ದವು ಎಂಬುದನ್ನು ವರದಿಯು ದಾಖಲಿಸಿದೆ. ಅವುಗಳು ಈ ರೀತಿಯಾಗಿದೆ. ಪಕ್ಷಿಗಳು ೫೦%, ಮೀನುಗಳು ೩೩%, ಆಮೆಗಳು ೩೦% ಇತರೆ ೮% ಮತ್ತು ಸಸ್ತನಿ ಪ್ರಾಣಿಗಳಾದ ದನಗಳು ೫೦% ರೋಡೆಂಟ್ಸ್ ೨೪% ಕ್ಯಾಪ್‌ರೈನ್ಸ್ ೧೪% ಮತ್ತು ವನ್ಯ ಮೃಗಗಳು ೪%. ಇಲ್ಲಿಯ ಜನರು ಪಶುವನ್ನು ಸಾಕುವ ಜೊತೆಗೆ ಕೃಷಿ ಮಾಡುವುದನ್ನು ತಿಳಿದಿದ್ದರು. ಈ ಎಲ್ಲಾ ಪ್ರಾಣಿಗಳ ಸಗಣೆಯನ್ನು ಒಟ್ಟು ಗೂಡಿಸಿ ಸುಟ್ಟಿರುವುದರಿಂದ ಬೂದಿದಿಬ್ಬವಾಗಿದೆಂದು ಅಭಿಪ್ರಾಯಿಸಲಾಗಿದೆ. ಉತ್ಖನನದಲ್ಲಿ ದೊರೆತ ಹುಲ್ಲಿನ ಪಾರಾಗದಿಂದ ಹೆಚ್ಚು ಕೃಷಿ ಮಾಡುತ್ತಿದುದು ಗೋಧಿ-ಬಾರ್ಲಿ ಎಂಬ ಅಂಶ ಬೆಳಕಿಗೆ ಬಂದಿದೆ. ನಂತರ ಕಾಲಘಟ್ಟದಲ್ಲಿ ಭತ್ತವನ್ನು ಹೆಚ್ಚಾಗಿ ಬೆಳೆಯುತ್ತಿದ್ದರು.[೮೮] ನವಶಿಲಾಯುಗದ

ಜನರು ಪ್ರಾಣಿಗಳನ್ನು ಪಳಗಿಸಿ ಸಾಕುವುದನ್ನು ಸಹ ತಿಳಿದಿದ್ದರು. ಅದಕ್ಕಾಗಿ ತಮ್ಮ ವ್ಯವಸಾಯಕ್ಕೆ ಬೇಕಾಗುವ ಮತ್ತು ಉಪಜೀವನಕ್ಕೆ ಬೇಕಾಗುವ ಪ್ರಾಣಿಗಳನ್ನು ಸಾಕುತ್ತಿದ್ದರು. ಮುಂದಿನ ಹಂತದ ಶಿಲಾತಾಮ್ರಯುಗದ ಕಾಲಕ್ಕೆ ಸೇರಿದ ಅವಶೇಷಗಳು ದೊರೆತಿಲ್ಲ. ಆದರೆ ಈ ಸಂಸ್ಕೃತಿಯನ್ನು ಅಣತಿ ದೂರದಲ್ಲಿರುವ ಹಂಪೆಯಲ್ಲಿ ಕಂಡುಬಂದಿರುವುದರಿಂದ ಇಲ್ಲಿಯೂ ಆ ಕಾಲಘಟ್ಟದ ಜನರು ವಾಸವಿದ್ದರು ಎಂದು ಹೇಳಬಹುದು.

ಬೃಹತ್‌ಶಿಲಾಯುಗ ಕಾಲದ ನೆಲೆಗಳು ಈ ಪರಿಸರದಲ್ಲಿ ದೊರೆತಿವೆ. ಅದರಲ್ಲಿ ಒಟ್ಟು ೩೭ ಲೋಹದ ವಸ್ತುಗಳು ದೊರೆತಿವೆ. ಅವುಗಳಲ್ಲಿ ೩೨ ಕಬ್ಬಿಣದ ವಸ್ತುಗಳಾಗಿದ್ದು ಅವುಗಳು ಮಸ್ಕಿ-ಬ್ರಹ್ಮಗಿರಿ ಪ್ರದೇಶದಲ್ಲಿ ದೊರೆತ ವಸ್ತುಗಳನ್ನು ಹೋಲುತ್ತವೆ. ಎರಡೂ ಪ್ರದೇಶಗಳಲ್ಲಿ ದೊರೆತ ವಸ್ತುಗಳ ಸಾಮ್ಯತೆಯಿಂದ ಅಂದಿನ ವಿವಿಧ ಪ್ರದೇಶದ ಜನರು ಸಾಮಾಜಿಕ ಮತ್ತು ಆರ್ಥಿಕವಾಗಿ ಸಂಬಂಧವನ್ನು ಹೊಂದಿದ್ದರು ಎಂದು ದೃಢಪಡುತ್ತದೆ. ತುಂಗಭದ್ರಾ ಪರಿಸರದಲ್ಲಿ ಒಟ್ಟು ೧೩೪ ಲೋಹದ ವಸ್ತುಗಳು ಮತ್ತು ಕಬ್ಬಿಣದ ವಸ್ತುಗಳು ೫೯ ದೊರೆತಿವೆ. ಅವುಗಳಲ್ಲಿ ಉಳಿ, ಮೊಳೆ, ಕೊಕ್ಕೆ (Hooks), ಮುಂತಾದವುಗಳಿವೆ. ಈ ಎಲ್ಲಾ ವಸ್ತುಗಳು ಬೃಹತ್‌ಶಿಲಾಯುಗ ಕಾಲಕ್ಕೆ ಸೇರಿದವುಗಳಾಗಿವೆ. ವಸತಿನೆಲೆಗಳಲ್ಲಿ ಬಿಲ್ಲಿನ ಆಕಾರ 'Z' ಆಕಾರ ಕಬ್ಬಿಣದ ವಸ್ತುಗಳು ದೊರೆತಿವೆ. ಈ ನೆಲೆಯಲ್ಲಿ ಶಿಲಾಗೋರಿಗಳು ಇಲ್ಲದಿರುವುದರಿಂದ ಇದು ವಸತಿನೆಲೆಯೆಂದು ಮತ್ತು ಕೈಗಾರಿಕೆ ಕೇಂದ್ರಗಳ ಪ್ರದೇಶವೆಂದು ತಿಳಿಯಲಾಗಿದೆ.[೫೯]

ಈ ನೆಲೆಗಳಲ್ಲಿ ಕಬ್ಬಿಣದ ವಸ್ತುಗಳ ಜೊತೆಗೆ ಅಂದಿನ ಕಾಲದ ೬೪,೦೦೦ ಸಸ್ಯಗಳ ಪರಾಗಗಳು ದೊರೆಕಿವೆ, ಸಾಕು ಪ್ರಾಣಿಗಳ ಮೂಳೆಯ ಅವಶೇಷಗಳಲ್ಲಿ ಹೆಚ್ಚಿನ ಸಂಖ್ಯೆಯ ಜಿಂಕೆ, ಪಕ್ಷಿಗಳು, ಆಮೆ, ಮೀನು, (Deer, Bovids) ಸಸ್ತನಿಯಲ್ಲದ ಪ್ರಾಣಿಯ ಅವಶೇಷ, (Zebu, Water, buffalo) ನೀರೆಮ್ಮೆ, ಕುರಿ, ಮೇಕೆ, ಹಸುಗಳ ಮೂಳೆಗಳು ಸೇರಿವೆ. ದನ/ಹಸುವರ್ಗಕ್ಕೆ ಸೇರಿದ ಪ್ರಾಣಿಗಳ ಮೂಳೆಗಳು ದೊರೆತಿವೆ. ಈ ಮೇಲೆ ವಿವರಿಸಿದ ಪ್ರಾಣಿಗಳ ಮೂಳೆಗಳ ಅಧ್ಯಯನದಂತೆ ಕುರಿ, ಮೇಕೆ, ಹಸುಗಳನ್ನು ತಮ್ಮ ಉಪಜೀವನಕ್ಕಾಗಿ ಸಾಕಿಕೊಳ್ಳುತ್ತಿದ್ದರು. ಹಾಗೂ ಗಂಡು ಕರುಗಳನ್ನು ವ್ಯವಸಾಯಕ್ಕಾಗಿ ಸಾಕುತ್ತಿದ್ದರು ಎಂದು ತಜ್ಞರು ವಿಶ್ಲೇಷಿಸಿದ್ದಾರೆ.[೬೦]

ಸಾಹಿತ್ಯ ಉಲ್ಲೇಖದಂತೆ ಆನೆಗೊಂದಿ ಪರಿಸರವು ರಾಮಾಯಣದ ವಾಲಿ ಮತ್ತು ಸುಗ್ರೀವರ ವಾಸನೆಲೆ ಆನೆಗೊಂದಿಯ ಪೂರ್ವ ಭಾಗದಲ್ಲಿ "ಚಿಂಚಲಕೋಟೆ" ಎಂದು ಕರೆಯುವ ಕೋಟೆ ಗೋಡೆಯಿದೆ. ಅದು ೧ ರಿಂದ ೧ ೧/೨ ಮೀ. ಎತ್ತರ ಮತ್ತು ೧ ಮೀ. ಅಗಲವಾಗಿದೆ.

ನೈಸರ್ಗಿಕವಾಗಿ ದೊರೆತ ಕಲ್ಲುಗಳನ್ನು ಜೋಡಿಸಿ ಯಾವುದೇ ರೀತಿಯ ಗಚ್ಚು, ಗಾರೆ ಉಪಯೋಗಿಸದೆ ತುಂಗಭದ್ರಾ ನದಿಯ ಮುಂಭಾಗದ ಬೆಟ್ಟದ ಮೇಲೆ ನಿರ್ಮಿಸಲಾಗಿದೆ. ರಾಜ ಸುಗ್ರೀವನು ನಿರ್ಮಾಣ ಮಾಡಿದನೆಂಬುದು ಜನರ ನಂಬಿಕೆ ಇದರ ಹತ್ತಿರದ ಅಂಜನಾದ್ರಿ ಬೆಟ್ಟವು ಆಂಜನೇಯನ ಜನ್ಮಸ್ಥಳ ಎಂದು ಭಾವಿಸಲಾಗಿದೆ. ಅಲ್ಲಿ ನೈಸರ್ಗಿಕ ಗುಹೆಯಿದ್ದು ಅದನ್ನು "ಶಬರಿ ಗುಹೆ" ಎನ್ನುವರು. ರೀತಿಯಾಗಿ ಈ ಪರಿಸರವು ರಾಮಾಯಣ ಕಾಲದ ನೆಲೆಯಾಗಿತ್ತು ಎಂಬುದು ಇಲ್ಲಿನ ನಂಬಿಕೆಯಾಗಿದೆ.[೯೧]

ಪುರಾತಾತ್ವಿಕವಾಗಿ ಇಲ್ಲಿನ ಅವಶೇಷಗಳು ಮಹತ್ವದ್ದಾಗಿದೆ. ಮೌರ್ಯರ ಕಾಲದ ಅವಶೇಷಗಳು ಕಡೇಬಾಗಿಲ ಪ್ರದೇಶದಲ್ಲಿವೆ. ಅಲ್ಲಿ ನಯಗೊಳಿಸಿದ ಕಪ್ಪು ಬಣ್ಣದ, ಕೆಂಪು ಬಣ್ಣ, ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆ ಚೂರುಗಳು ದೊರಕಿವೆ. ಕಬ್ಬಿಣದ ವಸ್ತುಗಳು ಜೊತೆಗೆ ವಿವಿಧ ಪ್ರಶಸ್ತ ಮಣಿಗಳು ಮತ್ತು ಅರೆಪ್ರಶಸ್ತ ಕಲ್ಲುಗಳು ದೊರಕಿವೆ. ಇದರಿಂದ ಆ ಕಾಕಘಟ್ಟದ ಜನರು ಸಾಮಾಜಿಕವಾಗಿ ಪ್ರಾಬಲ್ಯವನ್ನು ಹೊಂದಿದ್ದರು. ಆದರೆ ಹಂಪಿಯಲ್ಲಿ ದೊರೆತ ಬುದ್ಧನ ಫಲಕಗಳಿಂದ ಅದನ್ನು ಧಾರ್ಮಿಕ ಸ್ಥಳವೆಂದು ಅಭಿಪ್ರಾಯಪಡಲಾಗಿದೆ. ಅದೇ ರೀತಿ ಸಾಮಾಜಿಕವಾಗಿ ಬೆಳೆದ ವಸತಿನೆಲೆಯೆಂದು ಸಹ ಗುರುತಿಸಲಾಗುತ್ತದೆ. ಮೌರ್ಯರ ಕಾಲಕ್ಕೆ ಸಂಬಂಧಿಸಿದಂತೆ ಇನ್ನು ಹೆಚ್ಚಿನ ಕುರುಹುಗಳು ಮುಂದಿನ ದಿನಗಳಲ್ಲಿ ದೊರೆಯುವ ಸಾಧ್ಯತೆಗಳಿವೆ.[೯೨]

ಅಂದಿನ ಈ ಜನರು ನಿಟ್ಟೂರು, ಉದೇಗೊಳಂ, ತೆಕ್ಕಲಕೋಟೆ ಜನರೊಂದಿಗೆ ಸಮಪರ್ಕವನ್ನು ಹೊಂದಿದ್ದರು ಎಂಬುದು ತೆಕ್ಕಲಕೋಟೆಯಲ್ಲಿ ದೊರೆತ ಕೆಂಪು ಮತ್ತು ಕಪ್ಪು ಬಣ್ಣ ಹಚ್ಚಿದ (Slipped), ರಸಟ್ ಕೋಟ್ ಬಣ್ಣದ ಹಾಗೂ ಸೂಕ್ಷ್ಮ ಆಯುಧಗಳು ಸಾಕ್ಷಿಯಾಗಿದೆ.[೯೩] ಈ ಎಲ್ಲಾ ಅವಶೇಷಗಳು ಹಾಗೂ ಅವುಗಳಿಗೆ ಪೂರಕವಾಗಿ ಕಟ್ಟಡಗಳು ಮತ್ತು ಶಾಸನಗಳು ದೊರಕುವ ಸಂಭವವಿದೆ. ಶಾತವಾಹನರ ಕಾಲದಿಂದ ರಾಷ್ಟ್ರಕೂಟರ ಕಾಲದವರೆಗಿನ ನೆಲೆಗಳು ಇಲ್ಲಿ ದೊರೆತಿಲ್ಲವಾದರೂ ಅಲ್ಲಲ್ಲಿ ಕೆಲವು ಪುರಾವೆಗಳಿವೆ.

ಮುಂದೆ ಕ್ರಿ.ಶ. ೧೧ನೇ ಶತಮಾನದಲ್ಲಿ ಆನೆಗೊಂದಿಯನ್ನು ವಾನರ ನೆಲೆ ಎಂದು ರಾಮಾಯಣದ "ಕಿಷ್ಕಂದ" ಎಂದು ಗುರುತಿಸಲಾಗುತ್ತದೆ. ಶಾಸನದ ಆಧಾರದಂತೆ ಕ್ರಿ.ಶ. ೧೦೬೯ರಲ್ಲಿ ಆನೆಗೊಂದಿಯ ೧೦ ಕಿ.ಮೀ. ದೂರದಲ್ಲಿರುವ "ದೇವಿಘಾಟ" ಪ್ರದೇಶವನ್ನು ತುಂಗಭದ್ರಾ ತಟದ ಬಡಗ (ಉತ್ತರ) "ಕಿಶ್ಕಿಂದಾಮಿಪರ್ವತಂ" ಎಂದು ಕನ್ನಡ ಶಾಸನವು ವರ್ಣಿಸಿದೆ.[೯೪] ಕಡೇಬಾಗಿಲಿನ ಕೋಟೆಯ ಒಳ ಭಾಗದಲ್ಲಿ ೧೨ನೇ ಶತಮಾನದ ದೇವಾಲಯ, ಶಾಸನ, ವೀರಗಲ್ಲು ಮತ್ತು ಬಾವಿಗಳಿವೆ.[೯೫] ಆನೆಗೊಂದಿ ಪಟ್ಟಣದಲ್ಲಿ ಹೊಯ್ಸಳರ ಕಾಲದ

ನೆಲೆಗಳಿವೆ.[೧೬] ಕಡೇಬಾಗಿಲಿನ ಉತ್ತರ ಬಾಗಿಲಲ್ಲಿ ೧೩ನೇ ಶತಮಾನದ ತಾಮ್ರದ ಶಾಸನಗಳು ದೊರೆತಿವೆ. ಅದರಲ್ಲಿ ಎಂಟು ಪಟಗಳಲ್ಲಿ ಎರಡು, ಐದು ಮತ್ತು ಎಂಟನೇ ಶಾಸನ ಪಟಗಳು ಹಾಳಾಗಿವೆ. ಈ ಶಾಸನಗಳು ಯಾವುದೂ ಇತಿಹಾಸಕ್ಕೆ ಸಂಬಂಧವಿಲ್ಲ. ಇದರಲ್ಲಿ ಉಲ್ಲೇಖವಾದ ವಿಷಯ ವಿವಾಹ ಪುರಾಣ ಮತ್ತು ಅಮೃತ–ಮಂಥನ ಪುರಾಣ, ಶಿವ–ಪಾರ್ವತಿಯ ವಿವಾಹದ ಪುರಾಣ ತಿಳಿಸುತ್ತದೆ.[೧೭] ಈ ರೀತಿಯ ಚಿಕ್ಕ ಚಿಕ್ಕ ಮಾಹಿತಿಗಳು ಆಯಾ ಕಾಲದ ಬೆಳವಣಿಗೆಯನ್ನು ತಿಳಿಸುತ್ತಾ ವಸತಿ ನೆಲೆಗಳು ಎಂದು ದೃಢಪಡಿಸುತ್ತದೆ.

ಪ್ರಸ್ತುತ ಆನೆಗೊಂದಿಯಲ್ಲಿ ಕೋಟೆಯ ಅವಶೇಷಗಳಿವೆ. ಉತ್ತರದಲ್ಲಿ ಹೊನ್ನಗಸೆ ಬಾಗಿಲು, ದಕ್ಷಿಣದಲ್ಲಿ ಅಂಬಿಗರ ಬಾಗಿಲುಗಳಿವೆ. ಬೆಟ್ಟದ ಮೇಲೆ ಉತ್ತರ ಕೋಟೆ ಅಥವಾ ವಾಲಿಖಿಲಾ ಎನ್ನುವ ಕೋಟೆಯು ಆನೆಗೊಂದಿಯ ಪಶ್ಚಿಮ ಬೆಟ್ಟದ ಸಾಲಿನ ಉತ್ತರ ಭಾಗದಲ್ಲಿದೆ. ಇಲ್ಲಿ ಮೂರು ಪ್ರವೇಶದ್ವಾರಗಳು, ದುರ್ಗಾ ದೇವಾಲಯ, ಕನ್ನೇರಮ್ಮನ ಬಾವಿ ಮತ್ತು ಆನೆಗೊಂದಿಯ ನರಪತಿ ಸಂಸ್ಥಾನದ ಅರಸರ ಸಮಾಧಿಗಳು ಹಾಗೂ ಕೆಲವು ಕಟ್ಟಡಗಳು ಕೊತ್ತಳಗಳಿವೆ. ಆನೆಗೊಂದಿಯ ದಕ್ಷಿಣ ಭಾಗದ ಕೋಟೆಯಲ್ಲಿ ಮಂಟಪವಿದೆ. ಈ ಮಂಟಪದ ಬಲ ಭಾಗಕ್ಕೆ ೬೦ ಮೀಟರ್ ಹಾಗೂ ಎಡ ಭಾಗಕ್ಕೆ ೩ ಮೀಟರ್ ಉದ್ದವಾದ ಗೋಡೆಯಿದೆ. ಒಳಭಾಗದಲ್ಲಿ ಕಂಬಗಳಿವೆ ಹಾಗೂ ಮೂರು ಅಂಕಣಗಳ ಮಂಟಪವಿದೆ.

ಕೋಟೆಯ ಒಳಗೆ ಮತ್ತೊಂದು ಗಮನಾರ್ಹ ಆಯಾತಾಕಾರದ ಬೃಹತ್ ಕಟ್ಟಡವಿದೆ. ಈ ಕಟ್ಟಡವು ವಿಜಯನಗರ ಕಾಲದಾಗಿದ್ದು ಉದ್ದವಾಗಿದೆ. ೬೬ ಮೀಟರ್ ಉತ್ತರ–ದಕ್ಷಿಣವಾಗಿ ಪೂರ್ವ–ಪಶ್ಚಿಮವಾಗಿ ೮.೬೦ ಮೀಟರ್ ಅಗಲವಾಗಿದೆ. ೪೬ ಅಂಕಣಗಳಲ್ಲಿ ಒಟ್ಟು ೭೨ ಕಂಬಗಳಿವೆ. ಈ ಕಟ್ಟಡದ ಪ್ರವೇಶದ್ವಾರ ಪೂರ್ವ ಭಾಗದಲ್ಲಿ ಒಳಗೆ ಹೋಗಲು ಮೆಟ್ಟಿಲುಗಳಿಂದ ಕೆಳಗೆ ಇಳಿಯಬೇಕು. ಈ ಕಟ್ಟಡವನ್ನು ಸಿ.ಎಸ್.ಪಾಟಿಲರು ಕಣಜವೆಂದು ಅಭಿಪ್ರಾಯಪಟ್ಟಿದ್ದಾರೆ. ಕೋಟೆಯ ಒಳಭಾಗದಲ್ಲಿ ಒಟ್ಟು ೫ ಬುರುಜುಗಳಿವೆ. ಮೊದಲ ಪ್ರವೇಶದ್ವಾರ ಭಾಗದಲ್ಲಿ ನಾಲ್ಕನೆಯದು ಪೂರ್ವ ಬದಿಯಲ್ಲಿ, ಐದನೆಯದು ದಕ್ಷಿಣದ ತುದಿಯ ಭಾಗದಲ್ಲಿದೆ. ಕೋಟೆಯ ಒಳಭಾಗದಲ್ಲಿ ಪೂರ್ವ ದಿಕ್ಕಿಗೆ ದೊಡ್ಡ ಕೆರೆಯಿದೆ. ಪಶ್ಚಿಮ ದಿಕ್ಕಿನಲ್ಲಿ ತುಂಗಭದ್ರಾ ನದಿಯಿದೆ.[೧೮] ಇಂದು ಆನೆಗೊಂದಿಯಲ್ಲಿ ಅಗಲವಾದ ರಸ್ತೆಗಳು ಮನೆಗಳ ಮಧ್ಯಭಾಗದಲ್ಲಿ ಹಾದುಹೋಗಿವೆ. ಬಂಡಿ/ಚಕ್ಕಡಿಗಳು ಹಾದು ಹೋಗುವ ಪ್ರದೇಶದಲ್ಲಿ ರಂಗನಾಥ ದೇವಾಲಯವಿದೆ. ಹತ್ತಿರದಲ್ಲಿ ಮಾರುಕಟ್ಟೆಗೆ ಹೋಗುವ ರಸ್ತೆಯಿದೆ. ವಿಜಯನಗರ ಕಾಲದ ಗಗನಮಹಲ್ ಹಾದಿಯಲ್ಲಿ ಇಂದಿನ ಆಡಳಿತ ಕಛೇರಿಯು ರಂಗನಾಥ ದೇವಾಲಯದವರೆಗೆ ವ್ಯಾಪಿಸಿದೆ. ಆಗ್ನೇಯ

ಭಾಗದಲ್ಲಿ ಚಿಂತಾಮಣಿ ದೇವಾಲಯವಿದೆ. ಮತ್ತೊಂದು ರಸ್ತೆಯಲ್ಲಿ ಪ್ರಾಚೀನ ಕೋಟೆಗೋಡೆಯಿದೆ. ಇದು ನದಿಯ ಬಲ ಭಾಗದಲ್ಲಿದೆ.

ಆನೆಗೊಂದಿಯ ಪೂರ್ವ ಮತ್ತು ದಕ್ಷಿಣ ಅಂಚಿನ ಭಾಗದಲ್ಲಿ ತುಂಗಭದ್ರಾ ನದಿಯು ನೀರು ಪೂರೈಸುತ್ತದೆ. ಇಲ್ಲಿ ೧೬ನೇ ಶತಮಾನಕ್ಕೆ ಸೇರಿದ ನೀರಿನ ನಾಲೆಗಳಿವೆ. ಈ ನಾಲೆಗಳು ಇಂದು ೮೦೦ ಹೆಕ್ಟೇರ್ ಪ್ರದೇಶದಲ್ಲಿ ವ್ಯಾಪಿಸಿದೆ. ಎರಡು ಸೇತುವೆ, ಕಾಲುವೆ, ಮೂರು ಅಣೆಕಟ್ಟು ಮತ್ತು ಹದಿನೈದು ಕೆರೆಗಳಿವೆ. ಜನರು ಬಾವಿಯ ನೀರಿನ್ನು ಕುಡಿಯಲು ಉಪಯೋಗಿಸುತ್ತಿದ್ದರು. ೪೨ ಬಾವಿಗಳು ದೊಡ್ಡ ಮನೆಗಳ ಹಿಂಭಾಗದಲ್ಲಿವೆ. ಸಾರ್ವಜನಿಕವಾಗಿ ೩ ಬಾವಿಗಳಿವೆ. ನದಿಯ ಪೂರ್ವದ ದಂಡೆಯ ಮೇಲೆ ಗ್ರಾಮವಿದೆ. ಅಲ್ಲಿ ಪ್ರಾಚೀನ ಅವಶೇಷಗಳಾದ ಕಲ್ಲಿನ ಗೋಡೆ ಹಾಗೂ ದ್ವಾರ ಬಾಗಿಲುಗಳಿವೆ. ಈ ಕೋಟೆಯ ಬರುಜು (Bastion) ೧೦೦ ಮೀ. ನಷ್ಟು ನದಿಯ ಮುಂಭಾಗದಲ್ಲಿ ಹರಡಿಕೊಂಡಿದೆ. ಆನೆಗೊಂದಿಯ ವಸತಿನೆಲೆಯ ಕೋಟೆಗೋಡೆ ಒಳಭಾಗದ ಪ್ರಾಂಗಣದಲ್ಲಿ ವೃತ್ತಾಕಾರದ ಬುರುಜು ಇತ್ತೆಂದು ಊಹಿಸಲಾಗಿದೆ. ಕೋಟೆಗೋಡೆಯು ಪೂರ್ವದ ಬಂಡೆ/ಚಕ್ಕಡಿ ರಸ್ತೆಯವರೆಗೆ ಹರಡಿಕೊಂಡಿದೆ. ಕೋಟೆಗೋಡೆಯು ವಿಜಯನಗರ ಪೂರ್ವ ಕಾಲದಲ್ಲಿ ನಿರ್ಮಿಸಲಾಗಿದೆಯೆಂದು ಗಣಿಸಲಾಗಿದೆ. ಆದರೆ ಪೂರ್ವ ಕಾಲದ ಗೋಡೆಯ ಅವಶೇಷಗಳು ಇಂದು ದೊರೆತಿಲ್ಲ. ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಕೋಟೆಗೋಡೆಯ ಅವಶೇಷಗಳು ಇಂದು ಕಾಣಸಿಗುತ್ತವೆ.

ಕೋಟೆಯ ಮುಂಭಾಗದಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ನಿರ್ಮಿಸಿದ ೬೪ ಕಂಬಗಳ ಮಂಟಪವಿದೆ. ಈ ಮಂಟಪವನ್ನು ನೀರಿನ ಮಧ್ಯದಲ್ಲಿನ ಗಡ್ಡೆಯಲ್ಲಿ (Island) ಕಟ್ಟಲಾಗಿದೆ. ದಕ್ಷಿಣ ಭಾಗದ ಕೋಟೆಯ ಭಾಗದಲ್ಲಿ ಅಗಲವಾದ ಮೆಟ್ಟಿಲುಗಳಿವೆ, ಈ ಮೆಟ್ಟಿಲುಗಳು ಮುಂದೆ ತುಂಗಭದ್ರಾ ನದಿ ದಂಡೆಯವರೆಗೆ ಸಾಗಿದೆ. ಅಂದಿನ ಅರಸ ಕುಟುಂಬಕ್ಕೆ ಸೇರಿದ ಆನೆ, ಒಂಟೆಗಳನ್ನು ತೊಳೆಯಲು ಬರುತ್ತಿದ್ದರೆಂದು ಇಂದು ಜನರು ತಿಳಿಸುತ್ತಾರೆ.[೯೯] ಮಗೋಟ ಬೆಟ್ಟದ ಕೋಟೆಯ ಒಳಭಾಗದಲ್ಲಿ ಆನೆಗೊಂದಿ ಸಂಸ್ಥಾನದ ಅಚ್ಯುತದೇವರಾಯ, ಕೃಷ್ಣದೇವರಾಯ, ರಾಣಿ ಲಾಲ್‌ಕುಮಾರಿ ಮತ್ತು ಶ್ರೀರಂಗದೇವರಾಯರ ಸಮಾಧಿಗಳಿವೆ.

ಈ ಕೋಟೆಯ ಬಾಗಿಲಲ್ಲಿ ಪ್ರವೇಶ ಪಡೆಯುವ ಜನರ ತಪಾಸಣಾ ಕೇಂದ್ರವಿದೆ. (Check Post) ಕೋಟೆಯ ಒಳ ಭಾಗದ ಗೋಡೆಯನ್ನು ಮಿದು ಮಣ್ಣಿನಿಂದ ಸಮಗೊಳಿಸಿ ಅದರ ಮೇಲೆ ಮೊಟ್ಟೆಯ ಮೇಲಿನ ಬಿಳಿ ಚಿಪ್ಪನ್ನು ಲೇಪಿಸಲಾಗಿದೆ. ಇದನ್ನು ಸುಣ್ಣದ ರೀತಿಯಲ್ಲಿ ಬಳಸಲಾಗಿದೆ. ಅಲ್ಲಿ ಅನೇಕ ಚಿಕ್ಕ ಚಿಕ್ಕ ಚೌಕವಾದ ಕಟ್ಟಡದ ಅವಶೇಷಗಳಿವೆ. ಹಿಂಭಾಗದಲ್ಲಿ

ಧಾನ್ಯಗಳನ್ನು ಬೀಸುವ ಕಲ್ಲು ಇವೆ. ಕೋಟೆ ಬಾಗಿಲಿನ ಪೂರ್ವದಲ್ಲಿ ಸ್ನಾನಗೃಹವಿದೆ. ಅದರ ಅಳತೆ ಸುಮಾರು ೨೦ X ೩೫ ಮೀಟರ್ ಸ್ನಾನಗೃಹದ ಕೆಳಗೆ ನೀರು ಹಾಯುವ ನಾಲೆಯಿದೆ. ಸ್ನಾನಗೃಹದ ಹೊರ ಭಾಗದ ಪ್ರಾಂಗಣ ೭೫ ಸೆಂ.ಮೀ. ಅಗಲವಾಗಿದೆ. ೪ ಮೀ. ಎತ್ತರವಾದ ಗೋಡೆಯನ್ನು ಹೊಂದಿದ್ದು ಯಾವುದೇ ರೀತಿಯ ಕಿಟಕಿಗಳಿಲ್ಲ. ಛತ್ತು ಹಾಳಾಗಿದ್ದ ಗೋಡೆಯ ತುದಿಯ ಇಟ್ಟಿಗೆಯ ಅವಶೇಷಗಳನ್ನು ಕಾಣುತ್ತೇವೆ. ಕೋಟೆಯ ಉತ್ತರ ಭಾಗದಲ್ಲಿ ಕೆಲವು ವೃತ್ತಾಕಾರದ ಮತ್ತು ಚೌಕವಾದ ಕಟ್ಟಡದ ಅವಶೇಷಗಳು ಮತ್ತು ಗವಿ ರಂಗನಾಥ ದೇವಾಲಯವಿದೆ. ಕೋಟೆಯ ದಕ್ಷಿಣ ಭಾಗದಲ್ಲಿ ಕಟ್ಟಡದ ಅವಶೇಷಗಳು ಮತ್ತು ಮಡಿಕೆ ಚೂರುಗಳು ದೊರೆತಿವೆ.[೧೦೦]

ಆನೆಗೊಂದಿಯಲ್ಲಿ ೫೭೦ ಚದುರ ಮೀಟರ್ ಪ್ರದೇಶದಲ್ಲಿ ಅರಮನೆಯನ್ನು ಕಟ್ಟಲಾಗಿದೆ. ಅರಮನೆಯು ಮುಖ್ಯ ರಸ್ತೆಯಲ್ಲಿದೆ. ಈ ಅರಮನೆಯ ಮುಖ್ಯ ದ್ವಾರವು ಉತ್ತರ ದಿಕ್ಕಿಗಿದೆ. ಇದನ್ನು ಎರಡು ಹಂತದಲ್ಲಿ ಕಟ್ಟಲಾಗಿದೆ. ದ್ವಾರದಿಂದ ಒಳಗೆ ದರಬಾರದ ಕೊಠಡಿ, ಅದರ ಮುಂದೆ ಮೂರು ಭಾಗಗಳ ವಠಾರವಿದೆ. ಒಂದು ಮೆಟ್ಟಿಲು ಹೊಂದಿದ ವರಾಂಡದಲ್ಲಿ ರಾಜನು ಕುಳಿತುಕೊಳ್ಳುವನು. ಮತ್ತೊಂದು ವರಾಂಡದಲ್ಲಿ ಮನೆಯ ಜನರು, ಇತರರು ಕುಳಿತುಕೊಳುವ ಸ್ಥಳ, ಮಧ್ಯದಲ್ಲಿ ನೀರಿನ ತೊಟ್ಟಿಯಿದೆ ಹಾಗೂ ಅದರ ಮೇಲೆ ಕಿಟಕಿಯಿದೆ. ಅದರಲ್ಲಿ ತಿಳಿ ಹಸಿರು ಬಣ್ಣದ ಚಿತ್ರವಿದೆ. ಒಟ್ಟು ಅರಮನೆಯಲ್ಲಿ ೧೪ ಕೊಠಡಿಗಳಿವೆ. ಮೇಲೆ ಮನೆಯ ಕೊಠಡಿಯ ಕಿಟಕಿಯು ಕಮಾನಿನ ರೀತಿಯಲ್ಲಿವೆ ಮೇಲೆ ರಾಜನು ಮಲಗುವ ಕೊಠಡಿಯಿದೆ. ಈ ಕೊಠಡಿ ದೊಡ್ಡದಾಗಿದ್ದು ಬಾಗಿಲಲ್ಲಿ ಸೇವಕರು ಇರುತ್ತಿದ್ದರು. ಅವರಿಗೆ ಅಲ್ಲಿಯೇ ಪಕ್ಕದಲ್ಲಿ ಕೊಠಡಿಗಳಿವೆ. ಮೇಲೆ ಎಲ್ಲಾ ಭಾಗದಲ್ಲಿ ನಯಗೊಳಿಸಿದ ಕಪ್ಪು ಕಲ್ಲುಗಳನ್ನು ಜೋಡಿಸಲಾಗಿದೆ, ಅದೇ ರೀತಿ ವರಾಂಡದಲ್ಲಿಯೂ ಜೋಡಿಸಲಾಗಿದೆ. ಅಡುಗೆ ಕೊಠಡಿಯ ನೆಲವನ್ನು ಕಪ್ಪು ಕಲ್ಲುಗಳಿಂದ ಜೋಡಿಲಾಗಿದೆ. ಗೋಡೆಗೆ ಬಿಳಿ ಸುಣ್ಣವನ್ನು ಹಚ್ಚಲಾಗಿದೆ. ಗೋಡೆಗೆ ಅಂಟಿಕೊಂಡು ಕಟ್ಟಲಾದ ಎತ್ತರವಾದ ನೀರು ಹರಿದು ಹೋಗುವ ನಾಲೆಯಿದೆ. ಅದರ ಹಿಂಭಾಗದಲ್ಲಿ ರಾಣಿಯ ಸ್ನಾನಗೃಹವಿದೆ. ಅದರ ಪಕ್ಕದಲ್ಲಿ ರಾಣಿಯ ಮಲಗುವ ಕೊಠಡಿಯಿದೆ. ಈ ಎಲ್ಲಾ ಅಡಿಗೆ ಕೊಠಡಿ, ಸ್ನಾನಗೃಹ, ಮಲಗುವ ಕೊಠಡಿಯಲ್ಲಿ ಯವುದೇ ಪುರುಷರಿಗೆ ಬರುವ ಅವಕಾಶವಿಲ್ಲ ಪಕ್ಕದಲ್ಲಿ ಹಾಲು, ಬೆಣ್ಣೆ ತಯಾರಿಸುವ ಸ್ಥಳವಿದೆ. ಇಂದು ಈ ಕೊಠಡಿಯನ್ನು ಅಂದಿನ ೬೦ ದೊಡ್ಡ ದೊಡ್ಡ ಅಡುಗೆಯ ಪಾತ್ರೆಗಳನ್ನು ಇಡಲಾಗಿದೆ. ಮನೆಯ ಛಾವಣಿಯನ್ನು ಗಚ್ಚು ಗಾರೆಗಳಿಂದ ಗಟ್ಟಿಗೊಳಿಸಲಾಗಿದೆ. ಇಂದು ವಾಸಿಸುವ ಜನರು ತಮ್ಮನ್ನು ಅಚ್ಯುತದೇವರಾಯ ವಂಶಸ್ಥರು ಎಂದು ಹೇಳಿಕೊಳ್ಳುವರು. ಅವರು ಈ

ಅರಮನೆಯನ್ನು ಸಂರಕ್ಷಿಸಿಕೊಂಡು ವಾಸವಾಗಿದ್ದಾರೆ.[೧೧೧] ಆನೆಗೊಂದಿಯಲ್ಲಿ ಇಂದು ೫ ರೀತಿಯ ಮನೆಗಳ ವಿಧಗಳನ್ನು ನೋಡುತ್ತೇವೆ. ಅದರಲ್ಲಿ ಮೊದಲನೆಯದು ಒಂದು ಕೊಠಡಿ ಹೊಂದಿದ ಮಣ್ಣಿನಿಂದ ಮೆತ್ತಿದ ಮನೆಗಳು. ಎರಡನೆಯದು ಸಹ ಇದೇ ರೀತಿಯ ಮನೆಗಳು, ಆದರೆ ಎರಡು ಕೊಠಡಿಗಳಿದ್ದು ಮನೆಯ ಮುಂಭಾಗದಲ್ಲಿ ತೆರೆದ ಸ್ಥಳವಿರುತ್ತದೆ. ಮೂರು, ನಾಲ್ಕು, ಐದನೆಯ ವಿದಧ ಮನೆಗಳು ಕಲ್ಲಿನಿಂದ ಕಟ್ಟಿದ್ದು ಅದರಲ್ಲಿ ಅಧಿಕ ಕೊಠಡಿಗಳು ಹೊಂದಿದವುಗಳಾಗಿವೆ.[೧೦೨]

ಕಲ್ಲಿನಿಂದ ಕಟ್ಟಿದ ಚಿಕ್ಕ ಮನೆಗಳು ಎರಡು, ಮೂರು ಕೊಠಡಿಗಳನ್ನು ಹೊಂದಿದ ಮನೆಗಳಿವೆ. ಈ ಮನೆಗಳನ್ನು ಕಲ್ಲನ್ನು ಇಟ್ಟು ಕಲಸಿದ ಮಣ್ಣನ್ನು ಹಾಕಿ ಕಟ್ಟಿದ ಮನೆ, ಕಲ್ಲಿನೊಂದಿಗೆ ಗಚ್ಚು ಗಾರೆಗಳನ್ನು ಉಪಯೋಗಿಸಿದ ಮನೆಗಳಿವೆ.[೧೦೩]




**ಆನೆಗೊಂದಿ – ಕಡೇಬಾಗಿಲು**

ಹಂಪಿ ಪ್ರದೇಶದಷ್ಟೇ ಪ್ರಾಮುಖ್ಯತೆಯನ್ನು ಆನೆಗೊಂದಿ ಪ್ರದೇಶವನ್ನು ಪಡೆದಿದೆ. ನವಶಿಲಾಯುಗದಿಂದ ಬೃಹತ್ ಶಿಲಾಯುಗ ಕಾಲದವರೆಗೆ ಒಂದು ಹಂತದ ವಸತಿನೆಲೆಗಳು, ಮೌರ್ಯರ ಕಾಲದಿಂದ ಹೊಯ್ಸಳ ಕಾಲದವರೆಗೆ ಎರಡನೇ ಹಂತದ ವಸತಿನೆಲೆಗಳು, ವಿಜಯನಗರ ಕಾಲದಿಂದ ಇಂದಿನವರೆಗೆ ಮೂರನೇ ಹಂತದ ವಸತಿನೆಲೆಗಳು ಇಲ್ಲಿವೆ.

ಮೊದಲನೇ ಹಂತದ ನೆಲೆಗಳು ಕಡಿಮೆ ಪ್ರಮಾಣದಲ್ಲಿ ದೊರೆತರೂ ವಸತಿನೆಲೆಯ ಎನ್ನುವ ಎಲ್ಲಾ ಲಕ್ಷಣಗಳನ್ನು ಹೊಂದಿದೆ. ಎರಡನೇ ಹಂತದ ವಸತಿ ನೆಲೆಗಳು ಮೌರ್ಯರ ಕಾಲದಿಂದ




ವಿಜಯನಗರ ಪೂರ್ವದೇವಾಲಯ, ಆನೆಗೊಂದಿ




ಆನೆಗೊಂದಿ ಕಡೇಬಾಗಿಲು




ಆನೆಗೊಂದಿ ಕಡೇಬಾಗಿಲಿನ ನವಶಿಲಾಯುಗದ ನೆಲೆಗಳು




ಆನೆಗೊಂದಿ ಕಡೇಬಾಗಿಲಿನ ನವಶಿಲಾಯುಗದ ನೆಲೆಗಳು




**ಕೋಟೆಗೋಡೆ, ಆನೆಗೊಂದಿ**



**ವಿಜಯನಗರ ಕಾಲದ ವೀರಭದ್ರ ದೇವಾಲಯ, ಕಡೇಬಾಗಿಲು**

ಹೊಯ್ಸಳರ ಕಾಲದವರೆಗಿನ ಸಂಪೂರ್ಣವಾದ ಮಾಹಿತಿ ನೀಡದಿದ್ದರೂ ಕೆಲವು ಪ್ರಾಮಾಣದಲ್ಲಿ ದೊರಕುತ್ತದೆ. ವಿಜಯನಗರ ಕಾಲದ ನೆಲೆಗಳು ಮೂರನೆ ಕಾಲಘಟ್ಟಕ್ಕೆ/ಹಂತಕ್ಕೆ ಸೇರಿದ್ದು ಅವುಗಳು ಅಧಿಕವಾಗಿ ದೊರಕುತ್ತವೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡ ಕಾಲದಿಂದ ಆನೆಗೊಂದಿಯು ಪ್ರಮುಖವಾದ ಪ್ರದೇಶವಾಗಿತ್ತು. ಆನೆಗೊಂದಿಯು ಸಹ ರಾಜಧಾನಿ

ಪಟ್ಟಣವಾಗಿತ್ತು. ವಿಜಯನಗರ ಕಾಲದಲ್ಲಿ ಆನೆಗೊಂದಿ ಪಟ್ಟಣವು ಸಕಲ ಸೌಕರ್ಯವನ್ನು ಹೊಂದಿದ ಪ್ರದೇಶವಾಗಿತ್ತಾದರೂ ಇಂದು ಸಣ್ಣ ಗ್ರಾಮವಾಗಿದೆ.

**ಮಲ್ಲಾಪುರ**




ಮಲ್ಲಾಪುರವು (೧೫°೩೨೪೪೦ ಉತ್ತರ ಅಕ್ಷಾಂಶ ೭೬°೪೪೭೨೭ ಪೂರ್ವ ರೇಖಾಂಶ) ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಲ್ಲಿರುವ ಚಿಕ್ಕ ಗ್ರಾಮ. ಗ್ರಾಮವು ೯೫೪ ಹೆಕ್ಟೇರ್ ವಿಸ್ತೀರ್ಣವಾಗಿದೆ. ಇಲ್ಲಿನ ಒಟ್ಟು ಜನಸಂಖ್ಯೆ ೩೧೧೫ ಮತ್ತು ಒಟ್ಟು ೬೧೦ ಮನೆಗಳಿವೆ. ಮಲ್ಲಾಪುರ ಗ್ರಾಮವು ಪ್ರಾಗಿತಿಹಾಸಿಕ ಕಾಲದಿಂದ ಜನವಸತಿ ನೆಲೆಯಾಗಿ ಬೆಳೆದುಬಂದಿದೆ. ಈ ಗ್ರಾಮದಲ್ಲಿ ಹಳೇಶಿಲಾಯುಗ ಕಾಲದ ನೆಲೆ ದೊರೆತಿದೆ.[೧೦೪] ಮುಂದೆ ಸೂಕ್ಷ್ಮ ಶಿಲಾಯುಗ ಕಾಲದಲ್ಲಿ ಗುಹೆಯ ಒಳ ಪ್ರದೇಶದಲ್ಲಿ ಕಲ್ಲಿನ ಸೂಕ್ಷ್ಮ ವಸ್ತುಗಳಾದ ಹೆರಚುವ ಚಕ್ಕೆಗಳು ಮತ್ತು ಅರ್ಧಚಂದ್ರಾಕೃತಿ ಉಪಕರಣಗಳನ್ನು ಉಪಯೋಗಿಸಿರುವ ಕುರುಹುಗಳಿವೆ.[೧೦೫] ಬೃಹತ್ ಶಿಲಾಯುಗದ ವಸತಿ ನೆಲೆಯ ಕೆಂಪು ಮತ್ತು ಕಂದು ಬಣ್ಣದ ಮಡಿಕೆ ಚೂರುಗಳು ದೊರಕಿದೆ.

ಆದರೆ ಇಲ್ಲಿ ಗೋರಿಯ ಅವಶೇಷಗಳು ದೊರೆತಿಲ್ಲ. ಆದರೆ ಲಭ್ಯವಿರುವ ಪ್ರಾಕ್ತನ ಅವಶೇಷಗಳಿಂದ ಇದು ಒಂದು ವಸತಿನೆಲೆ ಎಂದು ಸಧ್ಯಕ್ಕೆ ಗಣಿಸಬಹುದಾಗಿದೆ.[೧೦೬] ಆದಿ ಇತಿಹಾಸ ಕಾಲದ ಕುರುಹುಗಳ ಸುತ್ತಮುತ್ತಲಿನ ಪರಿಸರದಲ್ಲಿ ದೊರಕಿದ್ದು ಈ ನೆಲೆಯು ಸಹ ಸೇರುತ್ತದೆ.

**ಚಿಕ್ಕರಾಮಪುರ**




ಚಿಕ್ಕರಾಮಪುರವು (೧೫°೩೫೭೩೭೭ ಉತ್ತರ ಅಕ್ಷಾಂಶ; ೭೬°೪೭೧೩೭೩ ಪೂರ್ವ ರೇಖಾಂಶ) ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಲ್ಲಿರುವ ಈ ಗ್ರಾಮವು ೩೭೭.೧ ಹೆಕ್ಟೇರ್ ವಿಸ್ತೀರ್ಣವಾಗಿದೆ. ಇಲ್ಲಿನ ಒಟ್ಟು  ಜನಸಂಖ್ಯೆ ೫೧೭. ಚಿಕ್ಕರಾಮಪುರವು ಒಂದು ವಿಶೇಷ ನೆಲೆಯಾಗಿದೆ. ಮೊದಲು ಇಲ್ಲಿ ಸುಂದರ ಅ., ಅವರು ಬಂಡೆಯ ಮೇಲಿನ ವರ್ಣಚಿತ್ರವನ್ನು ಗುರುತಿಸಿ ಅದರ ವಿವರಣೆಯನ್ನು ಹೀಗೆ ನೀಡಿದ್ದಾರೆ. ಮನುಷ್ಯನ ಚಿತ್ರಣದ ವರ್ಣನೆ ನೀಡಿ ಒಂಭತ್ತು ಚುಕ್ಕೆಗಳಿರುವ ವರ್ಣಮಂಡಲವೆಂದು ತಿಳಿಸುತ್ತಾ "ಬಹುಶಃ ಕೇಂದ್ರ ದೇವತೆಯ ಪ್ರಚಲಿತ ಹೆಸರಿನ ಸಂಕೇತವಿರಬಹುದೇ? ಮತ್ತು "ಬೃಹತ್‌ಶಿಲಾ ವೃತ್ತ ಗೋರಿಯ ಅರ್ಥಪೂರ್ಣ ಚಿತ್ರಣವೆಂದು" ವಿಶ್ಲೇಷಿಸಿದ್ದಾರೆ. ಈ ಸಂಶೋಧನೆ ಮುಂದುವರೆದು ಟಿ.ಎಮ್. ಕೇಶವ ಮತ್ತು ಅವರ ತಂಡದವರು ಅಂದಿನ ಕಾಲದ ತಮ್ಮ ನೆಲೆಗಳನ್ನು ಗುರುತಿಸಿರುವ ನಕ್ಷೆಯಾಗಿರಬಹುದು ಎಂದು ವಿವರಿಸಿದ್ದಾರೆ. ಒಟ್ಟು ಆರು ಕಲ್ಲಾಸರೆಗಳಿರುವ ಮನುಷ್ಯರ ಪ್ರಾಣಿಗಳ ಪಕ್ಷಿಗಳ ಕೆಂಪು ವರ್ಣ ರೇಖಾಚಿತ್ರಗಳಿವೆ. ಸುಮಾರು ೩೦ ಮೀಟರ್ ಮೇಲೆ

ವ್ಯಾಸವಿರುವ ಕಣಿವೆಯ ದಕ್ಷಿಣದಲ್ಲಿರುವ ಮುಖ್ಯ ಕಲ್ಲಾಸರೆ ಯ ನೇರ ದಕ್ಷಿಣಕ್ಕೆ ಸುಮಾರು ೨೦.೦೦ ಮೀಟರ್ ಅಂತರದಲ್ಲಿ ಒಂದು ಹೆಬ್ಬಂಡೆಯಲ್ಲಿ ಕಲ್ಲಾಸರೆ ಉದ್ದಕ್ಕೂ ಬಿಡಿಸಲಾದ ವರ್ಣಚಿತ್ರದ ನಿಂತಿರುವ ಮನುಷ್ಯನ ಚಿತ್ರವಿದೆ. ಎರಡನೇ ಕಲ್ಲಾಸರೆಯ ಸ್ವಲ್ಪ ಮೇಲೆ ಬಲಭಾಗದಲ್ಲಿ ಆಗ್ನೇಯಕ್ಕೆ ಸುಮಾರು ೮ ಮೀಟರ್ ದೂರದಲ್ಲಿ ಮೂರನೇ ಕಲ್ಲಾಸರೆ ಭತ್ತಿನ ಮೇಲಿನ ವರ್ಣಚಿತ್ರ ನಶಿಸಿ ಹೋಗಿದೆ. ನಾಲ್ಕನೆಯ ನೆಲೆಯ ಮೂರನೇ ಏಕ ಬಂಡೆ ಆಸರೆಯಿಂದ ೪ ಮೀ ಎತ್ತರಕ್ಕೆ ಮೂರು ಬಂಡೆಗಳ ಸುಮಾರು ೩ ಮೀ. ಅಗಲ ಮತ್ತು ೨.೫೦ ಮೀಟರ್ ಕಳಗೆ ಬಂಡೆಯ ಮೇಲೆ ಹಾಗೂ ಭತ್ತಿನಲ್ಲಿ ಈಟಿ ಹಿಡಿದ ಮನುಷ್ಯರು, ಕುದುರೆಸವಾರರು, ಕೊಂಬುಳ್ಳ ಪ್ರಾಣಿಗಳ ಹಿಂಡುಗಳ ಚಿತ್ರಗಳಿವೆ. ಐದನೇ ಆಸರೆಯು ನಾಲ್ಕನೇ ಆಸರೆಯ ಪೂರ್ವಕ್ಕೆ ೮ಮೀ ದೂರದಲ್ಲಿ ಈಶಾನ್ಯ ಆರನೇ ಕಲ್ಲಾಸರೆ ಇದ್ದ ಇಲ್ಲಿಯ ಚಿತ್ರಗಳು ಅಳಿಸಿ ಹೋಗಿದೆ. ಎಲ್ಲಾ ಕಲ್ಲಾಸರೆಗಳೂ ಒಂದು ಮಂಡಲಾಕಾರವ ವರ್ತಳವುಳ್ಳ ಕೊಳ್ಳದ ಇಳಿಜಾರಿನಲ್ಲಿದೆ.

೧. ವರ್ಣ ಚಿತ್ರದ ವರ್ಣನೆಯಲ್ಲಿ ದೀರ್ಘ ವೃತ್ತಾಕಾರದ ಈ ಚಿತ್ರ ಮುಖ್ಯ ನೆಲೆಯ ಪ್ರವೇಶದಲ್ಲಿಯೇ ಇದ್ದು ಪೂರ್ವ-ಪಶ್ಚಿಮಾಭಿಮುಖವಾಗಿ ಇದ್ದು ಸೂಚ್ಯವಾಗಿ ಉದಯಿಸುವ ಸೂರ್ಯಾಭಿಮುಖವಾಗಿದೆ ಹಾಗೂ ಕಣಿವೆ ಪ್ರವೇಶದ್ವಾರವನ್ನು ಸೂಚಿಸಬಹುದು.

೨. ಈ ಮಂಡಲವನ್ನು ಸುಮಾರು ಮಧ್ಯ ಭಾಗದಲ್ಲಿ ಎರಡು ಬಾವಾಗುವಂತೆ ಏಣಿ ಮೆಟ್ಟಿಲುಗಳ ರೂಪದ ಗೆರೆಗಳನ್ನು ಮೂಡಿಸಲಾಗಿದೆ.

೩. ಏಣಿಯ ಬಲಭಾಗ ಅಂದರೆ೩ ಉತ್ತರಕ್ಕೆ ಪೂರ್ವ-ಪಶ್ಚಿಮಾಭಿಮುಖವಾಗಿ ಬಿಡಿಸಿದ್ದು ಪ್ರಾಯಶಃ ಕುಳಿತ ಮನುಷ್ಯನ ಚಿತ್ರಣವಿದೆ. ಎರಡೂ ಪಾರ್ಶ್ವಗಳಲ್ಲಿ ಕೈಗಳನ್ನು ನೀಳವಾಗಿ ತಂದಿದ್ದು ಹಸ್ತಗಳು ಹೊರಚಾಚಿ ಕಟಿ-ಪ್ರದೇಶದಲ್ಲಿ ಇಟ್ಟಿರುವಂತೆ ತೋರಿಸಿದ್ದಾರೆ.

೪. ದುಂಡನೆಯ ಶಿರೋಭಾಗದ ಬಲಬದಿಗೆ ಸೂರ್ಯನ ಚಿತ್ರವನನ್ನು ಬಿಡಿಸಿ ಹೊರಚಾಚಿರುವ ಪಾದಗಳ ನಡುವೆ ಮೂರು ಎಲೆಗಳನ್ನು ತುಂಬಿದ ವರ್ತುಲವಿದೆ. ಈ ಎರಡು ಚಿತ್ರಗಳ ನೇರ ಕೆಳಗೆ ಏಣಿಗೆ ಹೊಂದಿಕೊಂಡಂತೆ ತ್ರಿಕೋನಾಕೃತಿಯ ಚಿತ್ರಣವಿದ್ದು ಅವು ಈ ಆಸರೆಯ ಇಕ್ಕೆಲಗಳಲ್ಲಿ ಕಾಣುವ ಗುಡ್ಡಗಳಿರಬಹುದು.

೫. ಮನುಷ್ಯಕೃತಿಯ ಮೇಲ್ಭಾಗದಲ್ಲಿ ಅರ್ಧ ವರ್ತುಲಗಳ ಗೆರೆಗಳಿಂದ ಎರಡು ಅಂಡಾಕೃತಿಯ ಹಾಗೂ ಒಂದು ವರ್ತುಲಾಕೃತಿಯ ಚಿನ್ಹೆಗಳಿವೆ.

೬. ಅವುಗಳನ್ನು ಆವರಿಸಿ ಒಂದು ಸ್ವಲ್ಪ ಭಾಗ ಗೆರೆಗಳಿಂದ ಮತ್ತು ಈಶಾನ್ಯ ಭಾಗದಲ್ಲಿ ಕಮಲದ ಎಲೆಗಳನ್ನು ಹೋಲುವ ಚಿತ್ರಣವಿದೆ. ಇದೇ ಅಲ್ಲದೆ ೫ ಎರಡು ರೇಖೆಗಳಲ್ಲಿ ಸಣ್ಣ ವರ್ತುಲಗಳನ್ನು ಹೊರದಾಟುವ ಗೆರೆ ಎಳೆದು ಮತ್ತೊಂದು ಒಟ್ಟು ೬ ವರ್ತುಲಗಳನ್ನು ಚಿತ್ರದ ಉತ್ತರ ಭಾಗದಲ್ಲಿ ತೋರಿಸಲಾಗಿದೆ. ಇವುಗಳು ಅಲ್ಲಿನ ನೆಲಮಟ್ಟದ ಕಲ್ಲಾಸರೆಗಳನ್ನು ಗುರುತಿಸಿರಬಹುದು.

೭. ಸುಮಾರು ಐದಕ್ಕೂ ಹೆಚ್ಚು ಅದೇ ರೀತಿಯ ವರ್ತುಲಗಳ ಚಿತ್ರಣವನ್ನು ಈ ಚಿತ್ರದ ದಕ್ಷಿಣ ಭಾಗದಲ್ಲಿ ತೋರಿಸಿ ಈಗಲೂ ಸಾಮಾನ್ಯವಾಗಿ ಗುಡ್ಡಗಳನ್ನು ತ್ರಿಕೋನ ರೂಪಿನಲ್ಲಿ ಬಿಡಿಸಿರುವುದನ್ನು ಇಲ್ಲಿಯೂ ಕಾಣಬಹುದು.[೧೦೭]

ಒಟ್ಟಿನಲ್ಲಿ ಎಲ್ಲಾ ವರ್ಣಚಿತ್ರಗಳ ಅಧ್ಯಯನದಿಂದ ಮತ್ತು ಬೃಹತ್ ಶಿಲಾಯುಗ ಗುಂಪು ಗುಹೆಗಳಿರುವುದರಿಂದ ಈ ಪರಿಸರದ ಪ್ರಮುಖ ನೆಲೆಯಾಗಿದೆ. ಶಿಲಾಗೋರಿಗಳು ಸಹ ದೊರೆಯುತ್ತವೆ.[೧೦೮] ಮುಂದೆ ಆದಿಇತಿಹಾಸ ಕಾಲದ ನೆಲೆಗಳು ದೊರೆಯದೇ ಇದ್ದರೂ ಹಂಪಿ ಪರಿಸರಕ್ಕೆ ಈ ನೆಲೆಯು ಸೇರಿರುವುದರಿಂದ ಮಾನವನ ವಸತಿನೆಲೆಗಳ ಮುಂದುವರೆದುಕೊಂಡು ಬಂದಿರುವ ಪ್ರದೇಶ.

**ಹನುಮನಹಳ್ಳಿ**

ಹನುಮನಹಳ್ಳಿಯ (೧೫,೩೫೨೧೮೦ ಉತ್ತರ ಅಕ್ಷಾಂಶ, ೭೬,೪೭೨೦೨೭ ಪೂರ್ವ ರೇಖಾಂಶ) ವಿಸ್ತೀರ್ಣ ೧೮೭.೭ ಹೆಕ್ಟೇರ್ ಹಾಗೂ ಇಲ್ಲಿನ ಒಟ್ಟು ೪೧೯ ಜನಸಂಖ್ಯೆ ಹಾಗೂ ೮೩ ಮನೆಗಳಿವೆ. ಹನುಮನಹಳ್ಳಿ ಗಂಗಾವತಿಯಿಂದ ಹುಲಿಗಿಗೆ ಹೋಗುವ ಮಾರ್ಗದ ಮಧ್ಯ ೩೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಇಂದು ಹೆಚ್ಚು ವ್ಯವಸಾಯ ಮಾಡುವ ಪ್ರದೇಶವಾಗಿ ಮಾರ್ಪಡು ಮಾಡಿರುವುದರಿಂದ ಪ್ರಾಗಿತಿಹಾಸ ಕಾಲದ ಅವಶೇಷಗಳು ದೊರೆಕಿಲ್ಲ. ಬೆಟ್ಟದ ಮೇಲೆ ವಿಜಯನಗರ ಕಾಲದಲ್ಲಿ ನಿರ್ಮಾಣವಾದ ಬಾಲ ಆಂಜನೆಯ ಶಿಲ್ಪವನ್ನು ಹುಟ್ಟುಬಂಡೆಯ ಮೇಲೆ ಕೆತ್ತಲಾಗಿದೆ. ಹಾಗೂ ಅವನ ತಾಯಿಯಾದ ಅಂಜನಾದೇವಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ಅವಶೇಷಗಳಿಂದ ವಿಜಯನಗರ ಕಾಲದಲ್ಲಿ ಬೆಳವಣಿಗೆ ಹೊಂದಿದ ಪ್ರದೇಶವೆಂದು ದೃಢಪಡುತ್ತದೆ.




ಹನುಮನಹಳ್ಳಿ ನಕಾಶೆ




ಹನುಮನಹಳ್ಳಿ




**ಅಂಜನಾದ್ರಿ ಬೆಟ್ಟ**

**ಬಸವನದುರ್ಗ**

ಬಸವನದುರ್ಗ ಗ್ರಾಮವು ಗಂಗಾವತಿ ತಾಲೂಕಿನಲ್ಲಿದೆ. (೧೫.೩೭೩೬೯ ಉತ್ತರ ಅಕ್ಷಾಂಶ ೭೬.೫೦೭೦೪೬ ಪೂರ್ವ ರೇಖಾಂಶ) ಈ ಗ್ರಾಮದಲ್ಲಿ ಪ್ರಾಚೀನ ಅವಶೇಷಗಳು ದೊರೆತಿಲ್ಲ. ಇದರ ೫೪೯.೧ ವಿಸ್ತೀರ್ಣ ಹೆಕ್ಟೇರ್ ಹೊಂದಿದ್ದು ಇಲ್ಲಿನ ಒಟ್ಟು ಜನಸಂಖ್ಯೆ ೧೧೭೬.



**ಸಣಾಪುರ**




ಸಣಾಪುರ ಗಂಗಾವತಿ ತಾಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮ ೧೫.೩೫೦೫೦೦ ಉತ್ತರ ಅಕ್ಷಾಂಶ ೭೬.೪೩೭೨೮೫ ಪೂರ್ವ ರೇಖಾಂಶ. ಇದು ೬೬೩.೮ ಹೆಕ್ಟೇರ್ ವಿಸ್ತೀರ್ಣ ಹೊಂದಿದ್ದು ಒಟ್ಟು ೧,೬೨೮ ಜನಸಂಖ್ಯೆಯಿದೆ. ಇಲ್ಲಿ ವಿಜಯನಗರ ಕಾಲದ ಆಣೆಕಟ್ಟು ಇದೆ.

**ರಂಗಾಪುರ**



ರಂಗಾಪುರ ಗಂಗಾವತಿ ತಾಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮ ೧೫.೩೬೩೦೨೩ ಉತ್ತರ ಅಕ್ಷಾಂಶ ೭೬.೪೩೪೫೯೧ ಪೂರ್ವ ರೇಖಾಂಶ. ೩೮೦೧ ಹೆಕ್ಟೇರ್ ವಿಸ್ತಿರ್ಣ ಮತ್ತು ಒಟ್ಟು ಜನಸಂಖ್ಯ ೩೮೪ ಹೊಂದಿದೆ. ಲಕ್ಷ್ಮೀಪುರ : ಲಕ್ಷ್ಮೀಪುರ ಗಂಗಾವತಿ ತಾಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮ ೧೫.೩೭೩೯೬ ಉತ್ತರ ಅಕ್ಷಾಂಶ ೭೬.೪೪೪೯೬೦ ಪೂರ್ವ ರೇಖಾಂಶ. ೧೦೧೦.೪ ಹೆಕ್ಟೇರ್ ವಿಸ್ತಿರ್ಣ ಮತ್ತು ಒಟ್ಟು ಜನಸಂಖ್ಯೆ ೧೮೫ ಹೊಂದಿದೆ. ಆದರೆ ಇಂದು ಈ ಗ್ರಾಮವನ್ನು ರಂಗಾಪುರ ಗ್ರಾಮಕ್ಕೆ ಸೆರಿಸಲಾಗಿದೆ. ವಿಜಯನಗರ ಕಾಲದಲ್ಲಿ ಬೆಳೆದ ಗ್ರಾಮವು ಇಂದು ಜನವಸತಿ ಇಲ್ಲದ ಪ್ರದೇಶವಾಗಿದೆ.

**ವಿರೂಪಾಪುರ ಗಡ್ಡಿ**




ಗಂಗಾವತಿ ತಾಲೂಕಿನಲ್ಲಿರುವ ವಿರೂಪಾಪುರಗಡ್ಡಿಯು ಒಂದು ಚಿಕ್ಕ ಗ್ರಾಮ (೧೫.೩೪೯೬೨೨ ಉತ್ತರ ಅಕ್ಷಾಂಶ ೭೬.೪೬೩೭೮೨ ಪೂರ್ವ ರೇಖಾಂಶ). ಇದು ೩೩೧.೭ ಹೆಕ್ಟೇರ್ ವಿಸ್ತೀರ್ಣವಾಗಿದ್ದು, ಇಲ್ಲಿನ ಒಟ್ಟು ಜನಸಂಖ್ಯೆ ೪೭೫ ಹಂಪಿ ವೀಕ್ಷಣೆ ಮಾಡಲು ಬರುವ ಪ್ರವಾಸಿಗರಿಗೆ ವಸತಿಗೃಹಗಳಿವೆ. ಹಂಪಿಯ ವಿರೂಪಾಕ್ಷ ದೇವಾಲಯದ ಎಡಭಾಗದಲ್ಲಿರುವ ತುಂಗಭದ್ರಾ ನದಿ ಮೂಲಕ ಸುಲಭವಾಗಿ ವಿರೂಪಾಪುರಗಡ್ಡಿಯನ್ನು ತಲುಪಬಹುದು. ಮಧ್ಯಕಾಲೀನಯುಗದ ಅವಶೇಷಗಳು ಕಂಡುಬರುತ್ತವೆ.

**ಅಂಜನಹಳ್ಳಿ**




1 km

ಅಂಜನಹಳ್ಳಿ ಗಂಗಾವತಿ ತಾಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮ ೧೫.೩೬೩೮೫೦ ಉತ್ತರ ಅಕ್ಷಾಂಶ ೭೬.೪೫೫೬೩೬ ಪೂರ್ವ ರೇಖಾಂಶ. ೧೯೨.೪ ಹೆಕ್ಟೇರ್ ವಿಸ್ತೀರ್ಣ, ಒಟ್ಟು ಜನಸಂಖ್ಯೆ ೨೯೨ ಹೊಂದಿದೆ. ಗ್ರಾಮದ ವ್ಯಾಪ್ತಿಯಲ್ಲಿ ಅಂಜನಾದ್ರಿ ಬೆಟ್ಟವಿದೆ. ಈ ಬೆಟ್ಟದಲ್ಲಿ ಮಧ್ಯಕಾಲೀನ ಯುಗದ ದೇವಾಲಯವಿದ್ದು ಅದರಲ್ಲಿ ಆಂಜನೇಯನ ಶಿಲ್ಪವಿರಿಸಲಾಗಿದೆ. ಈ ಬೆಟ್ಟವು ಆಂಜನೇಯನ ಜನ್ಮಸ್ಥಳವೆಂಬುದು ಸ್ಥಳೀಯರ ನಂಬಿಕೆಯಾಗಿದೆ. ಅಂಜನಾದ್ರಿಯು ರಾಮಾಯಣದ ಕಿಷ್ಕಿಂದ ಎಂದು ಜನರು ನಂಬಿರುವರು.

**ಸಿಂಗನಗೊಂಡ**




ಗಂಗಾವತಿ ತಾಲೂಕಿನಲ್ಲಿರುವ ಸಿಂಗನಗೊಂಡ (೧೫.೩೭೯೬೫೮ ಉತ್ತರ ಅಕ್ಷಾಂಶ ೭೬.೫೨೫೦೭೧ ಪೂರ್ವ ರೇಖಾಂಶ) ಒಂದು ಚಿಕ್ಕ ಗ್ರಾಮ. ಇದು ೧೫೮.೪ ಹೆಕ್ಟೇರ್‌ನಷ್ಟು ವಿಸ್ತೀರ್ಣವಾಗಿದೆ ಮತ್ತು ಒಟ್ಟು ೮೨೨ ಜನಸಂಖ್ಯೆಯನ್ನು ಹೊಂದಿದೆ.

ಹೊಸಪೇಟೆ ತಾಲೂಕಿನ ಕೃಷ್ಣಾಪುರ, ನಿಂಬಾಪುರ ಗ್ರಾಮವು ವಿಜಯನಗರ ಕಾಲದಲ್ಲಿ ಬೆಳೆದುಕೊಂಡ ಗ್ರಾಮಗಳಾಗಿವೆ. ಆದರೆ ಇಂದು ಯಾವುದೇ ಜನವಸತಿಗಳಿಲ್ಲದ ಪ್ರದೇಶಗಳಾಗಿದ್ದು, ಕೇವಲ ವಿಜಯನಗರ ಕಾಲದ ಅವಶೇಷ ಮತ್ತು ಶಾಸನದ ಉಲ್ಲೇಖದ ಮಾಹಿತಿಗಳು ದೊರೆತಿವೆ. ಗಂಗಾವತಿ ತಾಲೂಕಿನ ಕೃಷ್ಣಪುರ, ಬಸವದುರ್ಗ, ಸಣಾಪುರ, ಲಕ್ಷ್ಮೀಪುರ, ರಂಗಾಪುರ, ರಾಮದುರ್ಗ, ಅಂಜನಹಳ್ಳಿ, ಸಿಂಗನಗೊಂಡ, ರಾಂಪುರ ಗ್ರಾಮಗಳು ವಿಜಯನಗರ ಕಾಲದಿಂದಲೂ ಬೆಳೆದಕೊಂಡು ಬಂದ ಪ್ರದೇಶ. ಇಂದು ಆಧುನಿಕ ಚಟುವಟಿಕೆಗಳಿಂದ ಮತ್ತು ವ್ಯವಸಾಯದ ಪ್ರದೇಶವಾಗಿ ಉಪಯೋಗಿಸಿರುವುದರಿಂದ ಅಂದಿನ ಅವಶೇಷಗಳು ಸಂಪೂರ್ಣವಾಗಿ ನಾಶವಾಗಿವೆ. ಆದರೆ ಜನವಸತಿ ಮಾತ್ರ ಹಾಗೇ ಉಳಿದುಕೊಂಡು ಬಂದಿದೆ.

## ೩.೩ ವಿದೇಶಿ ಪ್ರವಾಸಿಗರ ಸಾಹಿತ್ಯದಲ್ಲಿನ ಉಲ್ಲೇಖಗಳು

ಅಬ್ದುಲ್ ರಜಾಕ್‌ನ ತನ್ನ ದಿನಚರಿಯಲ್ಲಿ ಎರಡನೇ ದೇವರಾಯನ ಕಾಲದ ವಿಜಯನಗರ ಪಟ್ಟಣದಲ್ಲಿರುವ ಒಂದು ಬೀದಿಯನ್ನು ಕುರಿತು ಮಾಹಿತಿಯನ್ನು ನೀಡುತ್ತ, ಆ ಬೀದಿಯ ಸಂಪರ್ಕವನ್ನು ತಿಳಿಸಿದ್ದಾರೆ. ಅದರ ಸುತ್ತಲಿನ ಕಟ್ಟಡಗಳನ್ನು ದಾಖಲಿಸಿದ್ದಾನೆ. (ರಾಬರ್ಟ್ ಸಿವೆಲ್ (ಮೂಲ) ಸದಾನಂದ ಕನವಳ್ಳಿ (ಅನು)., ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪು. ೮೦-೮೧)

"ರಾಜಧಾನಿಯಲ್ಲಿ 'ಪಾನ ಸುಪಾರಿ ಬಜಾರ' ಎಂಬ ಓಣಿಯಲ್ಲಿ ಜೈನ ಮಂದಿರವನ್ನು ಕಟ್ಟಿಸಿದ. ಈ ಮಂದಿರ ಸರಕಾರಿ ನಕ್ಷೆಯಲ್ಲಿ ನಂ. ೩೫ ಎಂದು ಗುರುತಿಸಿದ ಮಂದಿರದ ನೈರುತ್ಯಕ್ಕೆ ಇದೆ. ಅದು ರಾಜನ ಅರಮನೆಯ ಸುತ್ತ ಗೋಡೆಗಳೊಳಗೆ ಮತ್ತು ಇನ್ನೂ ಅಸ್ತಿತ್ವದಲ್ಲಿರುವ ಗಜಶಾಲೆಗಳ ಹಿಂಭಾಗಕ್ಕೆ ಹತ್ತಿಕೊಂಡು ಇದೆ. ಈ ಶಾಸನದಲ್ಲಿ ಗುರುತಿಸಬಹುದು. ಆನೆಗುಂದಿಗೆ ಹತ್ತಿಕೊಂಡು ಎದುರಿಗಿರುವ ನದಿಯ ದಕ್ಷಿಣ ಬದಿಯಲ್ಲಿರುವ ಭದ್ರ ದ್ವಾರದ ಮೂಲಕ ಈಗ ತುಂಗಭದ್ರಾ ಹಾಯ್ಗಡಕ್ಕೆ ಹೋಗುವ ರಸ್ತೆ ಸೇರಲು ನೇರವಾಗಿ ಅರಮನೆ ದ್ವಾರದಿಂದ ಹಜಾರ ರಾಮಸ್ವಾಮಿ ದೇವಾಲಯದ ಹತ್ತಿರದಲ್ಲಿ ಈಶಾನ್ಯ ದಿಕ್ಕಿನಲ್ಲಿ ಹಾಯ್ದುಹೋಗುವ ರಸ್ತೆಯ ಇಕ್ಕೆಲಗಳಲ್ಲಿ ಸಮತಟ್ಟಾದ ಒಣ ನೆಲದ ಮೇಲೆ ಅದು ಇತ್ತು. ಅದು ಎತ್ತರ ಗೋಡೆಗಳು ಹಾಗೂ ವೀಕ್ಷಣಾ ಗೋಪುರಗಳುಳ್ಳ ಚಕ್ರಾಧಿಪತ್ಯದ ಕಚೇರಿ ಆವರಣವನ್ನು ಮತ್ತು ಎಡಬದಿಯಲ್ಲಿರುವ ಗಜಶಾಲೆಗಳನ್ನು ಹಿಂದೆ ಬಿಟ್ಟು ಕಲ್ಲಮ್ಮ ಮತ್ತು ರಂಗಸ್ವಾಮಿ ದೇವಾಲಯಗಳ ಉತ್ತರ ಬದಿಗೆ ಹಾಯ್ದು, ಜೈನ ಮಂದಿರ ಹಾಗೂ ನಕ್ಷೆಯಲ್ಲಿ ೩೫ ...ಗುರುತಿಸಿರುವ ದೇವಾಲಯವನ್ನು ಬಳಸಿ ಮೇಲ್ಕಾಣಿಸಿದ ಮುಖ್ಯ ರಸ್ತೆಯ ಬಯಲಿಗೆ ಬರುವವರೆಗೆ ಉತ್ತರದಲ್ಲಿ ಈ ಬಯಲನ್ನು ಸುತ್ತುಗಟ್ಟಿರುವ ಬಂಡೆಗುಡ್ಡಗಳ ಕೆಳಗೆ ಸಾಗಿತ್ತು. ಈ ಬೀದಿ ಆನೆಗುಂದಿಯ ಹಳೆಯ ನಗರದಿಂದ ರಾಜನ ಅರಮನೆಗೆ ನೇರ ಪ್ರವೇಶ ಒದಗಿಸುತ್ತಿರಬಹುದು."

ನಿಕೊಲೊ ವಿಜಯನಗರವನ್ನು "ಬಿಝುನೆಗೆಲಿಯಾ" ಎಂದು ಕರೆದನು. ನಗರದ ಸುತ್ತಳತೆ ಮತ್ತು ಕೆಲವು ಭೌಗೋಳಿಕ ಲಕ್ಷನ ಹಾಗೂ ಜನಸಮುದಾಯವನ್ನು ವರ್ಣಿಸಿದ್ದಾನೆ. (ಅದೇ, ಪು. ೮೬)

"ಬಿಝುನೆಗೆಲಿಯಾದ ಮಹಾನಗರ ಅತಿ ಕಡಿದಾದ ಪರ್ವತಗಳ ಹತ್ತಿರ ನೆಲೆಗೊಂಡಿದೆ. ನಗರದ ಸುತ್ತಳತೆ ಅರವತ್ತು ಮೈಲು ಇದೆ. ಅದರ ಗೋಡೆಗಳು ಪರ್ವತಗಳವರೆಗೆ ಚಾಚಿವೆ

ಮತ್ತು ಅವುಗಳ ಅಡಿಯಲ್ಲಿರುವ ಕಣಿವೆಗಳನ್ನು ಆವರಿಸಿವೆ. ಅದರಿಂದ ಅವುಗಳ ವ್ಯಾಪ್ತಿ ಹೆಚ್ಚಿದೆ. ಈ ನಗರದಲ್ಲಿ ಶಸ್ತ್ರ ಧರಿಸಲು ಯೋಗ್ಯರಾದ ತೊಂಬತ್ತು ಸಾವಿರ ಜನರಿರುವರೆಂದು ಅಂದಾಜು ಮಾಡಲಾಗಿದೆ.

ನಾನು ಇಲ್ಲೊಂದು ತಿದ್ದುಪಡಿಯನ್ನು ನಡುವೆ ಸೇರಿಸಬೇಕಾಗಿದೆ. ವಿಜಯನಗರದಲ್ಲಿ ಹೇಳಲು ಯೋಗ್ಯವಾದ ಪರ್ವತಗಳಿರಲಿಲ್ಲ. ಚಲ್ಲಾಪಿಲ್ಲಿಯಾಗಿ ಬಿದ್ದಿದ್ದ ಕಲ್ಲುಗುಡ್ಡಗಳ ರಾಶಿ ಮಾತ್ರವಿತ್ತು. ಅವುಗಳಲ್ಲಿ ಕೆಲವು ಗಮನಾರ್ಹ ಎತ್ತರಕ್ಕೆ ಏರಿದ್ದವು. ಅದರ ರಕ್ಷಣಾಸಾಲುಗಳ ವ್ಯಾಪ್ತಿ ಅಸಾಧಾರಣವಾಗಿತ್ತು. ಎತ್ತರವಾದ ಮತ್ತು ಬೃಹದಾಕಾರದ ಕಲ್ಲುಗೋಡೆಗಳು ಎಲ್ಲೆಲ್ಲೂ ಕಣಿವೆಗಳಿಗೆ ಅಡ್ಡ ಹಾಯ್ದಿದ್ದವು. ಸಾಲುಗಳು ಸಮತಟ್ಟು ಪ್ರದೇಶದ ಮೇಲೆ ಹಲವಾರು ಮೈಲುಗಳವರೆಗೆ ಅವಿಚ್ಛಿನ್ನವಾಗಿ ಚಾಚಿದ್ದವು. ಕಲ್ಲುಬಂಡೆಗಳಿಂದ ಅಚ್ಛಾದಿತವಾದ ಎತ್ತರಗಳ ಮಧ್ಯವಿರುವ ತಗ್ಗುಗಳು ಮತ್ತು ಕಣಿವೆಗಳು ಜನವಸತಿಯಿಂದ ತುಂಬಿದ್ದವು. ಅವೆಲ್ಲ ಬಹುಮಟ್ಟಿಗೆ ನಿಸ್ಸಂದೇಹವಾಗಿ ಬಡ ಹಾಗೂ ಹೊಲಸು ಇದ್ದವು. ಆದರೆ, ಮಧ್ಯದಲ್ಲಿ ವರಿಷ್ಠರು, ವರ್ತಕರ ಮತ್ತು ವಿಶಾಲ ಸಮುದಾಯದ ಉಚ್ಚ ವರ್ಗಗಳ ಕಲ್ಲಿನ ನಿವಾಸಗಳಿಂದ ಹೆಣೆಯಲ್ಪಟ್ಟಿದ್ದವು. ಜೋಕೆಯಿಂದ ಕಟ್ಟಲಾಗಿದ್ದ ರಾಯರುಗಳ ನೀರು ಕಾಲುವೆಗಳು ಭೂಮಿಗೆ ನೀರುಣಿಸಲು ಸಾಧ್ಯವಾಗಿಸಿದ್ದೆಡೆ ಮಾತ್ರ ನಿವಾಸಗಳಿರಲಿಲ್ಲ. ಈ ಭಾಗಗಳಲ್ಲಿ ಸಮೃದ್ಧ ತೋಟಗಳು ಮತ್ತು ಅರಣ್ಯಗಳು, ಸೊಂಪಾಗಿ ಬೆಳೆದ ಭತ್ತ ಮತ್ತು ಕಬ್ಬಿನ ಬೆಳೆಗಳು ವಿಪುಲವಾಗಿದ್ದವು. ಅಲ್ಲಲ್ಲಿ ಅದ್ಭುತವಾಗಿ ಕೆತ್ತಲಾದ ಹಿಂದೂ ದೇವತೆಗಳ ದೇವಸ್ಥಾನಗಳು ಮತ್ತು ಗುಡಿಗಳು ಇದ್ದವು. ಅವುಗಳಲ್ಲಿ ಅಧಿಕ ಮಹತ್ವವುಳ್ಳವುಗಳಿಗೆ ಬ್ರಾಹ್ಮಣೀಯ ಕಾಲೇಜುಗಳು ಮತ್ತು ಶಾಲೆಗಳನ್ನು ಸೇರಿಸಲಾಗಿತ್ತು".

ಭಾರತೀಯ ಭೂವಿಜ್ಞಾನಿ ಲೆಫ್ಟಿನಂಟ್ ನ್ಯೂಬೋಲ್ಡ್ ನೀಡಿದ ಮಾಹಿತಿಯಲ್ಲಿ ಬೀಜನಗರ ಮತ್ತು ಆನೆಗೊಂದಿ ಭಾಗದಲ್ಲಿ ಅರಮನೆ ದೇವಾಲಯಗಳ ಭಗ್ನಾವಶೇಷವನ್ನು ಕುರಿತಿದೆ. (ಅದೇ, ಪು. ೮೭)

"ತುಂಗಭದ್ರಾ ದಕ್ಷಿಣ ದಡದ ಮೇಲಿನ ವಿಜಯನಗರ ಹಾಗೂ ಉತ್ತರ ದಡದ ಮೇಲಿನ ಅದರ ಹೊರಗೇರಿಯ ಆನೆಗುಂದಿಯ ಭಗ್ನಾವಶೇಷಗಳು ಆವರಿಸಿರುವ ವ್ಯಾಪಕವಾಗಿರುವ ಇಡೀ ನಿವೇಶನ ಬೆಣಚುಗಲ್ಲು ಮತ್ತು ಅದನ್ನು ಹೋಲುವ ಪದರುಗಲ್ಲಿನ ದೊಡ್ಡ ನಗ್ನ ರಾಶಿ ಮತ್ತು ಗುಬುಟುಗಳಿಂದ ಆವೃತವಾಗಿದೆ. ಅವುಗಳು ಮುರಿದುಬಿದ್ದಿರುವ ಬಂಡೆಗಳ ರಾಶಿಯಿಂದ ಆಡಚಣೆ ಒಡ್ಡಲ್ಪಟ್ಟ ಬಂಡೆಗಣಿವೆ ಮತ್ತು ಇಕ್ಕಟ್ಟಾದ ಹಾಗೂ ಏರುಪೇರುಗಳಿಂದೊಡಗೂಡಿದ ಕಣಿವೆಗಳಿಂದ ಪ್ರತ್ಯೇಕಿಸಲ್ಪಟ್ಟಿವೆ. ವಿಶಾಲವಾದ ಸಮತಟ್ಟದ

ತಳವುಳ್ಳ ಕಣಿವೆಗಳಲ್ಲಿ ಕೆಲವು ನದಿಯಿಂದ ಮೇಲುಕಾಲುವೆ ಮೂಲಕ ನೀರು ಉಣ್ಣುತ್ತವೆ. ಬೀಜನಗರ ಮತ್ತು ಆನೆಗುಂದಿಯ ಶಿಖರಗಳು, ಕೋಡುಬಂಡೆಗಳು ಮತ್ತು ತೊಲೆಗಲ್ಲುಗಳು ಚಿತ್ತಾಕರ್ಷಕ ಅಸ್ತವ್ಯಸ್ತತೆಯಿಂದ ಕ್ಷಿತಿಜದತ್ತ ಚಾಚಿವೆ. ಅವುಗಳು ಡೆಕ್ಕನದ ಪ್ರಾಚೀನ ರಾಜಧಾನಿಯ ಅಧಿಕ ಕೃತ್ರಿಯ ಭಗ್ನಾವಶೇಷಗಳಿಗಿಂತ ಭಿನ್ನವಾಗಿಲ್ಲ. ಸಾಮಾನ್ಯವಾಗಿ ಅವುಗಳ ಬದಿಯಿಂದಲೇ ಎಬ್ಬಿ ತೆಗೆದ ಕಲ್ಲು ದಿಮ್ಮಿಗಳಿಂದ ಕಟ್ಟಲಾಗಿರುವ, ಮೇಲಿಂದ ಮೇಲೆ ಬೃಹದಾಕಾರದ ಪ್ರಾಕೃತಿಕ ಕಲ್ಲು ಕೆಲಸದಿಂದ ಪ್ರಕೃತಿಯ ಬೃಹತ್ ಗುಮ್ಮಟ ಮತ್ತು ಏಣುಗಳ ನೆತ್ತಿಗೇರುತ್ತಿರುವ ಬೆಣಚುಗಲ್ಲಿನ ವಿಪರೀತ ಘನಾಕೃತಿಯ ಕಲ್ಲುದಿಮ್ಮಿಯ ಗೋಡೆಗಳಲ್ಲಿ ಮತ್ತು ಗತ್ತಿನಿಂದ ನಿಂತಿರುವ ತೊಲೆಗಲ್ಲುಗಳಲ್ಲಿ ಪ್ರಕೃತಿ ಪ್ರದರ್ಶಿಸಿದ ಧಾರ್ಡ್ಯ ಹಾಗೂ ಸ್ವರೂಪದ ಬೃಹದಾಕಾರತೆಯಲ್ಲಿ ಪೈಪೋಟಿ ನಡೆಸುತ್ತವೆ.

ಅರಮನೆಗಳು, ದೇವಾಲಯಗಳು, ಗೋಡೆಗಳು ಮತ್ತು ಹೆಬ್ಬಾಗಿಲುಗಳ ಅವಶೇಷಗಳನ್ನು ಇಂದೂ ಕಾಣಬಹುದು. ಇವುಗಳು ಸ್ವಂತ ವಿಜಯನಗರದ ನಿವೇಶನದಲ್ಲಿ ಮಾತ್ರವಲ್ಲದೆ ರಭಸದಿಂದ ಹರಿಯುತ್ತಿರುವ ನದಿಯ ಉತ್ತರ ಬದಿಯಲ್ಲಿ ನಿಂತಿರುವ ಸಾಮ್ರಾಜ್ಯ ನಗರದ ತಾಯಿಯಾದ ಭವ್ಯವಾದ ಆನೆಗುಂದಿ ದುರ್ಗದಲ್ಲೂ ವಿಪುಲವಾಗಿ ಕಾಣಸಿಗುತ್ತವೆ. ಈ ಇಮ್ಮಡಿ ನಗರದ ಜನಸಂಖ್ಯೆ ಅಪಾರವಾಗಿತ್ತು ಮತ್ತು ಅದು ವ್ಯಾಪಿಸಿದ ಕ್ಷೇತ್ರ ಬಹಳ ವಿಶಾಲವಾಗಿತ್ತು. ದಕ್ಷಿಣದಲ್ಲಿರುವ ಕೊನೆಯ ಗೋಡೆಗಳಿಂದ ಈಗಿನ ಹೊಸಪೇಟೆ ನಗರದಾಚೆ ಉತ್ತರದಲ್ಲಿ ಆನೆಗುಂದಿಯ ರಕ್ಷಣಾದುರ್ಗ ಸಾಲುಗಳ ತೀರ ತುದಿಯವರೆಗಿನ ಅಂತರ ಸುಮಾರು ಹನ್ನೆರಡು ಮೈಲಿದೆ. ಬಯಲಿನಲ್ಲಿರುವ ತೀರ ಪಶ್ಚಿಮದ ಗೊಡೆಗಳ ಸಾಲಿನಿಂದ ದಾರೋಜಿ ಮತ್ತು ಕಂಪ್ಲಿಗಳಲ್ಲಿನ ಗುಡ್ಡಗಳಲ್ಲಿನ ಪೂರ್ವಕಟ್ಟಡಗಳ ಕೊನೆಯವರೆಗಿನ ಅಂತರ ಸುಮಾರು ಹತ್ತು ಮೈಲಿದೆ. ಈ ಕ್ಷೇತ್ರದೊಳಗೆ ನಾನು ಹೇಳಿರುವ ಕಟ್ಟಡಗಳ ಅವಶೇಷಗಳು ಕಂಡುಬರುತ್ತವೆ. ಹೊರ ಮನೆಗಳು ಅದೃಶ್ಯವಾಗಿವೆ ಮತ್ತು ಮುರುಕಲುಗುಪ್ಪೆ ಹಳೆಯ ನೆಲಹಂತದ ಮೇಲೆ ಅನೇಕ ಅಡಿ ದಟ್ಟವಾಗಿ ಬಿದ್ದಿದೆ".

ಅಬ್ದುಲ್ ರಜಾಕ್‌ನ ವಿಜಯನಗರವನ್ನು ನೋಡಿ ಆಶ್ಚರ್ಯಚಕಿತನಾಗಿ ಅಲ್ಲಿ ಏಳು ದುರ್ಗಗಳ ವರ್ಣನೆನ್ನು ನೀಡಿದ್ದಾನೆ. ಮೊದಲ ಸುತ್ತಿನ ಗೋಡೆಯು ಹೊಸಪೇಟೆ ಭಾಗದಿಂದ ಗುರುತಿಸುತ್ತಾನೆ. ಏಳನೇ ಸುತ್ತು ಅರಮನೆ ಭಾಗವೆಂದು ತಿಳಿಸುತ್ತಾನೆ.

"ಬಿಜನಗರ ನಗರ ಹೇಗಿದೆಯೆಂದರೆ ಕಣ್ಣು ಅಂಥ ಊರನ್ನು ಕಂಡರಿಯದು. ಇಡಿ ಪ್ರಪಂಚದಲ್ಲಿ ಅದಕ್ಕೆ ಸರಿಸಮಾನವಾದುದು ಎಲ್ಲಿಯಾದರೂ ಇದ್ದುದನ್ನು ಕಿವಿ ಕೇಳರಿಯದು. ಏಳು ದುರ್ಗಗಳು ಮತ್ತು ಅಷ್ಟೇ ಸಂಖ್ಯೆಯ ಗೋಡೆಗಳು ಒಂದನ್ನೊಂದು ಸುತ್ತುವರಿಯುವಂತೆ

ಅದನ್ನು ಕಟ್ಟಲಾಗಿದೆ. ಒಂದನೆಯ ದುರ್ಗದ ಸುತ್ತ ಒಬ್ಬ ಮನುಷ್ಯನಷ್ಟು ಎತ್ತರವಿರುವ ಕಲ್ಲುಗಳಿವೆ. ಅವುಗಳ ಅರ್ಧಭಾಗ ಭೂಮಿಯೊಳಗೆ ಹೂಳಲಾಗಿದ್ದು ಉಳಿದರ್ಧ ಮೇಲೆ ಹಾಯ್ದಿವೆ. ಇವುಗಳನ್ನು ಒಂದಕ್ಕೊಂದು ಯಾವ ರೀತಿ ನಿಲ್ಲಿಸಲಾಗಿದೆಯೆಂದರೆ ಯಾವ ಅಶ್ವಾರೋಹಿಯಾಗಲಿ ಕಾಲಾಳಾಗಲಿ ಧೈರ್ಯವಾಗಿ ಇಲ್ಲವೆ ಸುಲಭವಾಗಿ ದುರ್ಗದ ಹತ್ತಿರಕ್ಕೆ ಬರುವಂತಿರಲಿಲ್ಲ.

ಈ ಏಳು ಗೋಡೆಗಳ ಮತ್ತು ದ್ವಾರಗಳ ಸ್ಥಾನ ನನಗೆ ಬಹುಕಾಲದಿಂದ ಒಗಟಾಗಿವೆ. ಆದರೆ ನಾನು ಕೆಳಗಿನ ಸ್ಪಷ್ಟೀಕರಣವನ್ನು ಊಹಿಸುತ್ತೇನೆ. ಪ್ರವಾಸಿ ನೈರುತ್ಯದಿಂದ ಬಳಿ ಸಾರಿದನು ಮತ್ತು ಅವನು ನೋಡಿದ ಗೋಡೆಯ ಪ್ರಥಮ ಸುತ್ತು ಹೊಸಪೇಟೆಯ ನೈಋತ್ಯಕ್ಕಿರುವ ಎರಡು ಗುಡ್ಡಗಳ ಮಧ್ಯವಿರುವ ಭೂಕಂಠದ ಮೇಲಿರುವುದಾಗಿರಬೇಕು. ಈ ಬಾಹ್ಯ ರಕ್ಷಣಾ–ಕಟ್ಟಡವು ಕರಾವಳಿಯಿಂದ ಬಂದ ಪ್ರವಾಸಿಗರಿಗೆಲ್ಲ ಮೊಟ್ಟ ಮೊದಲು ಕಣ್ಣಿಗೆ ಬೀಳುವಂಥದೆಂದು ಪಾಯಸ್ ಕೂಡ ವರ್ಣಿಸಿದ್ದಾನೆ. ಈ ಪ್ರವೇಶದ್ವಾರದಲ್ಲಿ ಬರಮಾಡಿಕೊಳ್ಳಲಾದ ರಜಾಕ್ "ಸಾಗುವಳಿ ಮಾಡಿದ ಜಮೀನುಗಳು, ಮನೆಗಳು ಮತ್ತು ಕೋಟೆಯ ಎರಡನೆಯ ಸುತ್ತು ಅಡಗಟ್ಟಿತು. ಆ ಪಟ್ಟಣ ಆಗ ಜನಸಾಂದ್ರವಾಗಿದಿದ್ದರಿಂದ ಅವನು ನಗರದ ಉತ್ತರ ಬದಿಯಲ್ಲಿರುವ ಮೂರನೆಯ ಸುತ್ತಿನ ಗೋಡೆ ದಾಟುವವರೆಗೆ ಅದೇ ಲಕ್ಷಣಗಳು ಅವನ ಕಣ್ಣಿಗೆ ಬೀಳುತ್ತವೆ. ಇಲ್ಲಿಂದ ಮನೆಗಳು ಜನನಿಬಿಡವಾಗುತ್ತ ಬಹುಶಃ ಇಕ್ಕೆಲಗಳಲ್ಲಿ ಅಂಗಡಿಗಳುಳ್ಳ, ಅಲ್ಲಿಂದ ರಾಜಧಾನಿಗೆ ಸಾಗುವ ದೀರ್ಘ ಬೀದಿಯಾಗಿ ಮಾರ್ಪಡುತ್ತವೆ. ಗಟ್ಟಿಯಾದ ಹೆಬ್ಬಾಗಿಲಿರುವ ಸುತ್ತಿನ ಗೋಡೆ ಈಗಿನ ಮಲಪನಗುಡಿ ಗ್ರಾಮದ ದಕ್ಷಿಣದಕ್ಕೆ ಕಾಣಸಿಗುತ್ತದೆ. ಅಲ್ಲಿ ಪುರಾತನ ಕಟ್ಟಡಗಳ ಹಲವಾರು ಅವಶೇಷಗಳು ಇವೆ. ಅವುಗಳಲ್ಲಿ ಒಂದು ಸುಂದರ ಕಲ್ಲುಭಾವಿ ಗಮನ ಸೆಳೆಯುತ್ತದೆ. ಅದು ಬಹುಶಃ ಒಂದು ಕಾಲಕ್ಕೆ ಒಬ್ಬ ವರಿಷ್ಠ ಇಲ್ಲವೆ ಮುಖ್ಯಾಧಿಕಾರಿಯ ಹಳ್ಳಿಮನೆಗೆ ಸೇರಿದುದಾಗಿತ್ತು. ಐದನೆಯ ಸುತ್ತು ಮಾಲಪನಗುಡಿಯ ಉತ್ತರಕ್ಕಿದೆ ಮತ್ತು ಇಲ್ಲಿ ಅದರ ಗೋಡೆ ಬಹಳ ಭಗ್ನ ಹಾಗೂ ನಾಶವಾಗಿದ್ದರೂ ದೊಡ್ಡ ಹೆಬ್ಬಾಗಿಲು ಇನ್ನೂ ನಿಂತಿದೆ. ಆರನೆಯ ಸುತ್ತನ್ನು ಕಮಲಾಪುರ ಕೆರೆಯ ದಕ್ಷಿಣಕ್ಕೆ ಒಯ್ಯಲಾಗಿದೆ. ಏಳನೆಯ ಅಥವಾ ಒಳಗಿನ ಸುತ್ತು ಆ ಗ್ರಾಮದ ಉತ್ತರಕ್ಕೆ ತಕ್ಕಷ್ಟು ಉತ್ತಮ ಸ್ಥಿತಿಯಲ್ಲಿ ಇನ್ನೂ ಕಂಡುಬರುತ್ತಿರುವ ದೊಡ್ಡ ಗೋಡೆ. ಈ ಕೊನೆಯದು ಅರಮನೆ ಹಾಗೂ ಸರಕಾರಿ ಕಟ್ಟಡಗಳನ್ನು ಸುತ್ತುವರಿದಿತ್ತು. ಅದು ಸುತ್ತುವರಿದ ಕ್ಷೇತ್ರ ಸ್ಥೂಲವಾಗಿ ಉತ್ತರದಿಂದ ದಕ್ಷಿಣಕ್ಕೆ ಒಂದು ಮೈಲು ಹಾಗೂ ಪೂರ್ವದಿಂದ ಪಶ್ಚಿಮಕ್ಕೆ ಎರಡೂಕಾಲು ಮೈಲು ಇದೆ. ರಜಾಕ್

ಪ್ರಸ್ತಾಪಿಸಿದ ನೇರವಾಗಿ ನಿಂತಿರುವ ಕಲ್ಲುಗಳನ್ನು ಡೊಮಿಂಗೊ ಪ್ಯಾಸ್ ಕ್ರಿ.ಶ. ೧೫೨೦ರಲ್ಲಿ ನೋಡಿದ್ದ. ಅವು ಈಗ ಕಣ್ಮರೆಯಾಗಿವೆಯೆಂದು ನನಗೆನಿಸುತ್ತದೆ".

ಹಾಗೆಯೇ ಮುಂದುವರೆದು ರಜಾಕನು ಕೋಟೆಯ ಬಾಗಿಲುಗಳನ್ನು ಉಲ್ಲೇಖಿಸುತ್ತಾನೆ. ಏಳನೇ ಕೋಟೆಯಲ್ಲಿ ಅರಮನೆ ಪ್ರದೇಶವನ್ನು ಗುರುತಿಸುತ್ತ ಮೂರನೇ ಕೋಟೆಯಿಂದ ಒಳಗೆ ಏಳನೇ ಕೋಟೆವರೆಗೆ ಅಂಗಡಿ, ಪೇಟೆ, ಜನಸಮೂಹದಿಂದ ಕೂಡಿದ ಪ್ರದೇಶವೆಂದು ವರ್ಣಿಸುತ್ತಾನೆ.

"ದುಂಡಗಿನ ಆಕಾರದ ಕೋಟೆ. ಅದನ್ನು ಪರ್ವತದ ತುದಿಯ ಮೇಲೆ ಕಟ್ಟಲಾಗಿದೆ ಮತ್ತು ಕಲ್ಲು ಮತ್ತು ಸುಣ್ಣದಿಂದ ಕಟ್ಟಲಾಗಿದೆ. ಅದಕ್ಕೆ ಬದಲಾವ ಬಾಗಿಲುಗಳಿವೆ. ಅವುಗಳ ಕಾವಲುಗಾರರು ಯಾವಾಗಲೂ ತಮ್ಮ ಸ್ಥಾನದಲ್ಲಿರುತ್ತಾರೆ ಮತ್ತು ಎಲ್ಲವನ್ನೂ ಅತ್ಯಂತ ಕೂಲಂಕಷವಾಗಿ ಪರೀಕ್ಷಿಸುತ್ತಾರೆ" ಎಂದು ಮುಂತಾಗಿ ರಜಾಕ್ ಬಾಹ್ಯ ದುರ್ಗವನ್ನು ವರ್ಣಿಸುತ್ತಾನೆ. ಈ ಅವತರಣಿಕೆಯು ಗೋಡೆಯ ಹೊರಸುತ್ತಿಗೆ ಸಂಬಂಧಿಸಿದುದಾಗಿರಬೇಕು. ಏಕೆಂದರೆ, ರಜಾಕ್‌ನ "ಏಳನೆಯ ಕೋಟೆ" ಎಲ್ಲಕ್ಕಿಂತ ಒಳಗಿನದು, ಬಾಗಿಲುಗಳಲ್ಲಿದ್ದ ಕಾವಲುಗಾರರೇ ಸುಂಕ ವಸೂಲು ಮಾಡುವ ಕೆಲಸ ಒಪ್ಪಿಸಿದ ಅಧಿಕಾರಿಗಳಾಗಿದ್ದರೆಂಬುದು ನಿಸ್ಸಂದೇಹ. ಹೆನ್ರಿ ಈಲಿಯಟ್‌ನ ಅನುವಾದವು ಉದ್ಧರಿಸಲಾದ ಅವತರಣಿಕೆಗೆ ಇನ್ನೂ ಸೇರಿಸುತ್ತ ಹೀಗೆನ್ನುತ್ತದೆ.

"ಅವರು ಜಿಝಿಯಾತ್ ಅಥವಾ ಕರಗಳನ್ನು ವಸೂಲು ಮಾಡುತ್ತಾರೆ." ಪ್ರಮುಖ ನಗರಗಳ ದ್ವಾರಗಳಲ್ಲಿ ಸುಂಕ ವಸೂಲು ಮಾಡುವ ಈ ಪದ್ಧತಿ ಮೊನ್ನೆ ಮೊನ್ನೆಯವರೆಗೆ ಪ್ರಚಲಿತವಿದ್ದು ಬ್ರಿಟಿಶ್ ಸರಕಾರವೆ ಅದನ್ನು ರದ್ದುಗೊಳಿಸಿತು.

"ಏಳನೆಯ ಕೋಟೆ ಉತ್ತರಕ್ಕಿದೆ ಮತ್ತು ರಾಜನ ಅರಮನೆಯೂ ಆಗಿದೆ. ಉತ್ತರ ದಕ್ಷಿಣಗಳ ಬಾಹ್ಯ ಕೋಟೆಗಳ ಎದುರು ಬುರಿನ ದ್ವಾರಗಳ ನಡುವಣ ಅಂತರ ಎರಡು ಪರಸಂಗಗಳು, ಮತ್ತು ಪೂರ್ವದಿಂದ ಪಶ್ಚಿಮಕ್ಕೂ ಅಷ್ಟೇ.

"ಒಂದನೆಯ ಕೋಟೆಯನ್ನು ಎರಡನೆಯದರಿಂದ ಬೇರ್ಪಡಿಸುವ ಕ್ಷೇತ್ರ ಮತ್ತು ಮೂರನೆಯ ಕೋಟೆಯವರೆಗೆ ಸಾಗುವಳಿ ಮಾಡಿದ ಹೊಲಗಳು, ಮನೆಗಳು ಮತ್ತು ತೋಟಗಳಿಂದ ತುಂಬಿದೆ. ಮೂರನೆಯದರಿಂದ ಏಳನೆಯದವರೆಗಿನ ಕ್ಷೇತ್ರದಲ್ಲಿ ಅಸಂಖ್ಯ ಜನರ ಸಮೂಹ, ಅನೇಕ ಅಂಗಡಿಗಳು ಮತ್ತು ಪೇಟೆ ಕಾಣಸಿಗುತ್ತವೆ. ರಾಜನ ಅರಮನೆಯ ಹತ್ತಿರ ಎದುರುಬದುರಾಗಿ ನಾಲ್ಕು ಪೇಟೆಗಳಿವೆ. ಉತ್ತರಕ್ಕೆ ರಾಯನ ಅರಮನೆಯ ಮುಖಮಂಟಪವಿದೆ.

ಪ್ರತಿ ಪೇಟೆಯ ಮೇಲೆ ಭವ್ಯ ದ್ವಾರಮಂಟಪವುಳ್ಳ ಉನ್ನತ ಕಮಾನು ದಾರಿಯಿದೆ. ಆದರೆ ರಾಜನ ಅರಮನೆಯ ಓಲಗ ಎಲ್ಲಕ್ಕಿಂತ ಎತ್ತರವಾಗಿದೆ. ಪೇಟೆಗಳು ಅತ್ಯಂತ ಉದ್ದವೂ ಅಗಲವೂ ಆಗಿವೆ.

"ಗುಲಾಬಿ ಹೂಗಳನ್ನು ಎಲ್ಲೆಡೆಯೂ ಮಾರಲಾಗುತ್ತದೆ. ಈ ಜನರು ಗುಲಾಬಿಗಳಿಲ್ಲದೆ ಬಾಳರು, ಮತ್ತು ಅವರು ಅವುಗಳು ಆಹಾರದಷ್ಟೆ ಅವಶ್ಯಕವೆಂದು ಪರಿಭಾವಿಸುತ್ತಾರೆ... ಪ್ರತಿ ವೃತ್ತಿಗೆ ಸೇರಿದ ಪ್ರತಿ ವರ್ಗ ಒಂದಕ್ಕೊಂದು ಹೊಂದಿಕೊಂಡ ಅಂಗಡಿಗಳನ್ನು ಪಡೆದಿದೆ. ರತ್ನಾಭರಣ ವ್ಯಾಪಾರಿಗಳು ಪೇಟೆಗಳಿಲ್ಲಿ ಮುಕ್ತವಾಗಿ ಮುತ್ತು, ಮಾಣಿಕ್ಯ, ಪಚ್ಚೆ, ವಜ್ರಗಳನ್ನು ಮಾರುತ್ತಾರೆ. ಈ ಹಿತಕರ ಸ್ಥಳದಲ್ಲಿಯೂ ರಾಜನ ಅರಮನೆಯಲ್ಲಿಯೂ ಅನೇಕ ಹರಿಯುವ ನದಿಗಳು ಮತ್ತು ಮೆರುಗುಗೊಳಿಸಲಾದ ಮತ್ತು ನಯವಾಗಿ ಕಟೆದ ಕಲ್ಲುಗಳಿಂದ ಕಟ್ಟಲಾದ ಕಾಲುವೆಗಳಿವೆ".

ರಜಾಕ್‌ನು ಅರಮನೆ ಪ್ರದೇಶದ ವಿವಿಧ ಕಟ್ಟಡದಗಳ ಮತ್ತು ಅಲ್ಲಿನ ಪೇಟೆಗಳ ಅಳತೆ ಹಾಗು ಅಲಂಕಾರವನ್ನು ವರ್ಣಿಸಿದ್ದಾನೆ. (ಅದೇ ಪು ೯೨-೯೫)

"ಸುಲ್ತಾನನ ಮುಖಮಂಟಪದ ಎಡಕ್ಕೆ ದಿವಾನಖಾನೆ ನಿಂತಿವೆ. ಅದು ಅತ್ಯಂತ ದೊಡ್ಡದಾಗಿದ್ದು ಅರಮನೆಯಂತೆ ಕಾಣುತ್ತಿದೆ. ಅದರ ಮುಂದೆ ಒಂದು ಸಭಾಂಗಣವಿದೆ. ಅದರ ಎತ್ತರ ಮನುಷ್ಯನ ನಿಲುವಿಗಿಂತ ಹೆಚ್ಚಿದೆ, ಅದರ ಉದ್ದ ಮೂವತ್ತು ಮತ್ತು ಅಗಲ ಹತ್ತು ಘಜ ಇದೆ. ಅದರಲ್ಲಿ ದಫ್ತರ-ಖಾನೆ (ನ್ಯಾಯಾಲಯ)ವನ್ನು ಇರಿಸಲಾಗಿದೆ ಮತ್ತು ಇಲ್ಲಿ ಲಿಪಿಕಾರರು ಕೊಡುತ್ತಾರೆ. ಈ ಅರಮನೆಯ ಮಧ್ಯದಲ್ಲಿ ಎತ್ತರ ಜಗಲಿಯ ಮೇಲೆ ದಣಾಯಿಕ ಎಂದು ಕರೆಯಲಾದ ನಪುಂಸಕ ಕೂತಿರುತ್ತಾನೆ. ಅವನೇ ನ್ಯಾಯಸ್ಥಾನದ ಏಕೈಕ ಅಧಿಪತಿ. ಭವನದ ಕೊನೆಯಲ್ಲಿ ಸಾಲಾಗಿ ನಿಂತ ಜೋಬದಾರರು ಇರುವರು. ದಿವಾನ ಅಥವಾ ದಣಾಯಿಕ ಜನರ ವ್ಯಾಜ್ಯಗಳನ್ನು ತೀರ್ಮಾನಿಸುತ್ತಾನೆ. ಮೇಲ್ಮನವಿ ಇಲ್ಲ. ಕೆಲಸ ಮುಗಿಸಿ ದಣಾಯಿಕ ಏಳು ಬಾಗಿಲುಗಳ ಮೂಲಕ ಹಾಯ್ದು ಅರಮನೆ ಪ್ರವೇಶಿಸುತ್ತಾನೆ. ಮತ್ತು ಕೊನೆಯದನ್ನು ತಾನೊಬ್ಬನೆ ಪ್ರವೇಸಿಸಿ ರಾಜನಿಗೆ ವರದಿ ನೀಡುತ್ತಾನೆ.

"ರಾಜನ ಅರಮನೆಯ ಹಿಂದೆ ದಣಾಯಕನಿಗೆ ಕೊಡಲಾದ ಮನೆ ಮತ್ತು ಸಭಾಂಗಣಗಳಿವೆ. ಆ ಅರಮನೆಯ ಉತ್ತರಕ್ಕೆ ಟಂಕಸಾಲೆಯಿದೆ.

"ಈ ಸಾಮ್ರಾಜ್ಯ ಎಷ್ಟೊಂದು ಜನಸಂಖ್ಯೆ ಪಡೆದಿದೆಯೆಂದರೆ ವ್ಯಾಪಕ ವಿವರಗಳನ್ನು ಬಳಸದೆ ಅದರ ಕಲ್ಪನೆ ಮಾಡಿಕೊಡುವುದು ಅಸಾಧ್ಯ. ರಾಜನ ಅರಮನೆಯಲ್ಲಿ ಹೊಂಡಗಳನ್ನು

ಹೋಲುವ ಹಲವಾರು ಗೂಡುಗಳಿವೆ. ಅವುಗಳಲ್ಲಿ ತುಂಬಿಡಲಾದ ಬಂಗಾರದ ಗಟ್ಟಿಗಳು ಅವಿಚ್ಛಿನ್ನ ವಿಸ್ತಾರ ನಿರ್ಮಿಸಿವೆ."

ದಿವಾನಖಾನೆಯ ಎದುರಿಗೆ ಗಜಶಾಲೆಯಿದೆ ಎಂದು ಅವನು ಮುಂದುವರಿಸುತ್ತಾನೆ.

"ಪ್ರತಿಯೊಂದು ಆನೆಗೆ ಒಂದು ಪ್ರತ್ಯೇಕ ಅಂಕಣವಿದೆ. ಅದರ ಗೋಡೆಗಳು ಗಟ್ಟಿಯಾಗಿದ್ದು ಮಾಳಿಗೆಯನ್ನು ಕಟ್ಟಿಗೆಯ ಗಟ್ಟಿ ತುಂಡುಗಳಿಂದ ಮಾಡಲಾಗಿದೆ...ಟಂಕಸಾಲೆಯ ಎದುರಿಗೆ ಮಂಡಲಾಧಿಪತಿಯ ಮನೆಯಿದೆ. ಅಲ್ಲಿ ಹನ್ನೆರಡು ಸಾವಿರಕ್ಕೂ ಹೆಚ್ಚು ಸೈನಿಕರು ಸನ್ನದ್ಧರಾಗಿ ಇಡಲ್ಪಟ್ಟಿರುವರು... ಟಂಕಸಾಲೆಯ ಹಿಂದೆ ಒಂದು ತರಹದ ಪೇಟೆಯಿದೆ. ಅದು ಮುನ್ನೂರು ಘಜಕ್ಕಿಂತ ಹೆಚ್ಚು ಉದ್ದ, ಇಪ್ಪತ್ತಕ್ಕಿಂತ ಹೆಚ್ಚು ಅಗಲವಿದೆ. ಎರಡೂ ಬದಿಗಳಲ್ಲಿ ಮನೆಗಳು ಮತ್ತು ಅಂಗಡಿಗಳು ಸಾಲುಗಟ್ಟಿವೆ; ಅವುಗಳ ಮುಂದೆ ಬೆಂಚು (ಕುರ್ಸಿ)ಗಳ ಬದಲು ಸುಂದರ ಕಲ್ಲುಗಳಿಂದ ಕಟ್ಟಿದ ಹಲವಾರು ಉನ್ನತ ಆಸನಗಳಿವೆ. ಕೊಠಡಿಗಳಿಂದಾದ ಸಾಲು ಬೀದಿಯು ಎರಡೂ ಬದಿಗಳ ಮೇಲೆ ಸಿಂಹಗಳು, ಚಿರತೆಗಳು, ಹುಲಿಗಳು ಮತ್ತು ಇತರ ಪ್ರಾಣಿಗಳ ಆಕೃತಿಗಳನ್ನು ಬಿಡಿಸಲಾಗಿದೆ.[೧೭] ಜಗಲಿಗಳ ಮೇಲೆ ಸಿಂಹಾಸನಗಳು ಮತ್ತು ಕುರ್ಚಿಗಳನ್ನು ಇರಿಸಲಾಗಿದೆ, ಮತ್ತು ರತ್ನಗಳಿಂದ ಹಾಗೂ ಉತ್ಕೃಷ್ಟ ಬಟ್ಟೆಗಳಿಂದ ಅಲಂಕೃತರಾದ ವಾರಾಂಗನೆಯರು ಅವುಗಳ ಮೇಲೆ ಕುಳಿತುಕೊಳ್ಳುತ್ತಾರೆ",

ಅಬ್ದುಲ್ ರಜಾಕ್‌ನು ರಜಬ್ (ಕಾರ್ತಿಕ ಹುಣ್ಣಿಮೆ) ತಿಂಗಳಲ್ಲಿನ ಅರಮನೆ ಮತ್ತು ಸಿಂಹಾಸದ ಅಲಂಕಾರವನ್ನು ವರ್ಣಿಸುತ್ತಾನೆ. (ಅದೇ, ಪು. ೯೬–೯೭)

"ಬಿಜನಗರದ ರಾಜನು ಹೊರಡಿಸಿದ ಆಜ್ಞೆಗಳಿಗೆ ಅನುಗುಣವಾಗಿ ಅವನ ರಾಜ್ಯದ ಎಲ್ಲ ಭಾಗಗಳಿಂದ ದಂಡನಾಯಕರು ಮತ್ತು ಪ್ರಮುಖ ವ್ಯಕ್ತಿಗಳು. ಅರಮನೆಯಲ್ಲಿ ಉಪಸ್ಥಿತರಾದರು. ಅವರು ತಮ್ಮೊಂದಿಗೆ ಸಾವಿರ ಆನೆಗಳನ್ನು ತಂದರು. ಅವುಗಳನ್ನು ಹೊಳೆಯುವ ಕವಚಗಳಿಂದ ಮತ್ತು ಭವ್ಯವಾಗಿ ಅಲಂಕೃತವಾದ ಕೋಟೆ–ಮನೆಗಳಿಂದ ಹೊದಿಸಲಾಗಿತ್ತು. ರೆಜೆಬ್ ತಿಂಗಳಿನಲ್ಲಿ ಸತತ ಮೂರು ದಿನಗಳವರೆಗೆ ವಿಶಾಲ ಭೂಕ್ಷೇತ್ರವನ್ನು ಭವ್ಯವಾಗಿ ಅಲಂಕರಿಸಲಾಗಿತ್ತು. ಅಲ್ಲಿ ಒಟ್ಟಿಗೆ ಸೇರಿಸಲಾದ ಬೃಹದಾಕಾರದ ಆನೆಗಳು ಸಮುದ್ರದ ತೆರೆಗಳಂತೆ ಇಲ್ಲವೆ ಪುನರುಜ್ಜೀವನದ ದಿನದಂದು ಶೇಖರಿತವಾಗುವ ಸಾಂದ್ರ ರಾಶಿಯಂತೆ ತೋರುತ್ತಿದ್ದವು. ಈ ಭವ್ಯ ಕ್ಷೇತ್ರದ ಮೇಲೆ ತುದಿಯಿಂದ ಕೆಳತನಕ ಉಬ್ಬುಚಿತ್ರಗಳಿಂದ ತುಂಬಿದ ಮೂರು, ನಾಲ್ಕು ಅಥವಾ ಐದು ಅಟ್ಟಗಳ ಅಸಂಖ್ಯ ಮಂಟಪಗಳನ್ನು ನಿರ್ಮಿಸಲಾಗಿತ್ತು. ಈ ಮಂಟಪಗಳಲ್ಲಿ ಕೆಲವನ್ನು ಯಾವ ರೀತಿಯಲ್ಲಿ ಜೋಡಿಸಲಾಗಿತ್ತೆಂದರೆ ಅವುಗಳು ಶೀಘ್ರವಾಗಿ

31. Ghosh A., 1990, *The City in Early Historical India,* p. 45

32. Allchin F.R., 1995, *The Archaeology of Early Historic South Asia, The Emergence of Cities and States*, p. 114

33. Binode Behari Dutt., 1977, *Town Planning in Ancient India,* pp. 272-284.

34. ವಾಸುದೇವನ್ ಸಿ.ಎಸ್., ೨೦೦೬, "ವಿಜಯನಗರ ಪಟ್ಟಣದ ಪ್ರಮುಖರ ಮನೆಗಳು", ದೇವರಕೊಂಡಾರೆಡ್ಡಿ (ಸಂ), ಹಂಪಿ ಸಂಪುಟ, ಕಲೆ, ಕ್ರೀಡೆ ಮತ್ತು ಕೌಶಲ, ಪು. ೩೩೦.

35. ಸದಾನಂದ ಕನವಳ್ಳಿ (ಅನು) ರಾಬರ್ಟ್ ಸಿವೆಲ್ (ಮೂಲ)., ೨೦೦೮, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪು. ೯೪-೯೫

36. Binode Behari Dutt., *Op.cit,* p. 47

37. ಸದಾನಂದ ಕನವಳ್ಳಿ., ಪೂರ್ವೋಕ್ತ, ಪು. ೨೬೭

38. Krishan K.G., 1986, 'A Note on the Urbanisation of Vijayanagara', *Journal of the Andhra Historical Research Society* Venkataramanayya N. Commemoration Volume, Vol., XXXVIII, part II, Subrahamanyam R (Ed-in-chief), Krishna Sastry V.V., (G.Ed), p. 166

39. Basava Raja K.R., 1978, *The Vijayanagara Urbanity,* p. 17

40. ಸೋಮಶೇಖರ್ ಎಸ್.ವೈ., ಪೂರ್ವೋಕ್ತ, ಪು. ೩೬೧-೩೬೭

41. ಕೋತಿನ ಎಸ್.ಎಸ್., (ಗದ್ಯಾನುವಾದ), ೧೯೮೪, ಮೋಹನ ತರಂಗಿಣಿ, ಪು. ೪೬

42. ವಾಸುದೇವನ್ ಸಿ.ಎಸ್., ೨೦೦೬, "ವಿಜಯನಗರಪಟ್ಟಣ ಮತ್ತು ಅದರ ಉಪನಗರಗಳು", ದೇವರಕೊಂಡಾರೆಡ್ಡಿ (ಸಂ), ಹಂಪಿ ಸಂಪುಟ, ಕಲೆ ಕ್ರೀಡೆ ಮತ್ತು ಕೌಶಲ, ಪು. ೩೦೪

43. Kathleeen D Morrison, *Op.cit*, p. 33

44. ಮಹದೇವ ಸಿ, ಎ. ಸುಬ್ಬಣ್ಣ ರೈ ಮತ್ತು ಮಾಧವ ಪೆರಾಜೆ, ೨೦೦೨, ಹೊಸಪೇಟೆ ತಾಲ್ಲೂಕು ದರ್ಶನ, ಪು. ೧೩೩-೧೩೪

45. Krishnan K.G., *Op.cit*, p. 166

46. ಮಹದೇವ ಸಿ., ಎ. ಸುಬ್ಬಣ್ಣ ರೈ ಮತ್ತು ಮಾಧವ ಪೆರಾಜೆ., ಪೂರ್ವೋಕ್ತ, ಪು. ೧೬೨

47. ಅದೇ ಪು. ೮೧

48. Kathleen D. Morrison., *Op.cit*, p. 32

49. Channabasappa S. Patil., 1991, "Malige-Kupa-Arama at Malapanagudi", *Vijayanagara Progress of Research 1984-87,* pp. 177-179

50. ನಾಗರಾಜಪ್ಪ ಎಸ್., ೨೦೧೪, ಮಲಪನಗುಡಿಯ ಅಪ್ರಕಟಿತ ಶಿಲಾಶಾಸನ, ವಿಜಯನಗರ ಅಧ್ಯಯನ, ಸಂ. ೧೮, ಪು. ೭-೯

51. Basava Raja K.R. *Op.cit*, p. 22

52. ಮಹದೇವ ಸಿ, ಎ. ಸುಬ್ಬಣ್ಣ ರೈ ಮತ್ತು ಮಾಧವ ಪೆರಾಜೆ., ಪೂರ್ವೋಕ್ತ, ಪು. ೧೩೪

53. Basava Raja K.R., *Op.cit*, pp. 22-23

54. Agrawal R.C., 2010, 'Excavating Krsnadevaraya Palace at Hampi', Shrinivas Ritti, Subbarayalu Y., (Eds) *Vijayanagara and Krsnadevaraya,* p. 1

55. Basava Raja K.R. *Op.cit*, P. 22, Balasubramanya, 1991, 'Temples at Nagenahalli', *Vijayanagara Progress of Research 1984-87*, pp. 183-186

56. Kathleeen D. Morrison., *Op.cit*, pp. 32-33

57. Vasundhara Fillizat. 1988, 'Hampi-Vijayanagara', Dikshil G.S., (Ed) *Early Vijayanagara Studies in its Hisotry and Culture*, p. 179

58. Sundara A., 1988, 'New Light on Religious Treands in Anegondi Region During Vijayanagara Period', Dikshit G.S., (Ed) *Early Vijayanagara Studies in its Hisotry and Culture*, p.102

59. Bernard K. Means., 1991, 'A Small Settlement Near The City of Vijayanagara', *Vijayanagara Progress of Research 1987-88,* pp. 154-162

60. Prasanna Kumar Acharya., 1980, *Indian Architecutre, Manasara Silpasastra,* Vol-IV, pp. 5-6. Pande G.C., *Foundations of Indian Culture,* Vol-II, Motilal Banarsidass Publishers Private Limited Delhi, 1995, pp. 82-83.; ಜೈನ ಗ್ರಂಥದ ಪ್ರಕಾರ ಹಳ್ಳಿ ಎಂದರೆ ಹಸುಗಳನ್ನು ಹೊಂದಿದವರು, ಹುಲ್ಲು ಕಟ್ಟುವವರು, ಕಟ್ಟಿಗೆ ಒಡೆಯುವವರು ಮತ್ತು ಅಲ್ಲಿ ತೋಟ, ಬಾವಿ, ಸಭಾಭವನ ಗ್ರಾಮ ದೇವತೆ ಹೊಂದಿದರೆ ಇದನ್ನು ಹಳ್ಳಿ ಎಂದು ಕರೆಯುವರು; Ghosh A., *The city in Early Historical India,* Indian Institute of Advaned Studies, Shimla, Munshiram Manoharalal Publishers, Delhi, 1993, pp. 45-46; ಗ್ರಾಮವನ್ನು "ಗೋಸ" ಎಂದು ಕರೆಯುವರು. "ಪಾಲಿ" ಗ್ರಂಥದಲ್ಲಿ ಗ್ರಾಮಗಳ ವಿಧಗಳನ್ನು ಹೇಳಲಾಗಿದೆ. ಗೋನಿಸಾದಿ, ನಿವಿಸ್ತಾ, ಗ್ರಾಮ ಇವುಗಳಲ್ಲಿ ಹೆಚ್ಚು ಗೋವುಗಳನ್ನು ಹೊಂದಿರುವ ಜನರು ಇರುತ್ತಿದ್ದರು.

61. *Website, censusinda, govt.in 2011*

62. ಶರಣಬಸಪ್ಪ ಕೋಲ್ಕಾರ್., ೨೦೦೬, ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆ, ದೇವರಕೊಂಡಾರೆಡ್ಡಿ (ಸಂ.) ಹಂಪಿ ಸಂಪುಟ, ಕಲೆ, ಕ್ರೀಡೆ ಮತ್ತು ಕೌಶಲ, ಪು. ೪

63. *I.A.R., 1985-86*, p.40,; *1988-89*, p. 31

64. *Ibid,* 1975-76, p.20

65. ಶಿವಲೀಲಾ., ೨೦೦೩, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ) ಕಮಲಾಪುರದ ಶಾಸನಗಳು ಮತ್ತು ದೇವಾಲಯಗಳು, ಪು. ೫-೬

66. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೩, ೨೦೦೦, ಹಂಪಿ ಶಾಸನಗಳು, ಶಾಸನ ಸಂಖ್ಯೆ. ೩೨೨

67. ಶಿವಲೀಲಾ., ೨೦೦೩, ಪೂರ್ವೋಕ್ತ, ಪು. ೯-೧೦

68. ಅದೇ, ಪು. ೧೭-೧೮

69. ವಾಸುದೇವನ್ ಸಿ.ಎಸ್., ೨೦೦೧, ಹಂಪಿ ಪರಿಸರದ ಕೆರೆಗಳು, ಪು. ೫೮-೫೯

70. Vasudevan C.S., 2010, "Krsnadevaraya and His Contribution to the Capital City Vijayanagarapattana', Shrinivas Ritti, Subbarayalu Y, (Eds), *Vijayanagara and Krisnadevaraya*, p. 122

71. ಸದಾನಂದ ಕನವಳ್ಳಿ., (ಅನು), ರಾಬರ್ಟ್ ಸಿವೆಲ್., (ಮೂಲ), ೨೦೦೮, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪು. ೨೫೧

72. ಅದೇ ಪು. ೨೭೨

73. ಶಿವಲೀಲಾ, ೨೦೦೩, ಪೂರ್ವೋಕ್ತ, ಪು. ೧೬

74. ಸದಾನಂದ ಕನವಳ್ಳಿ., (ಅನು), ೨೦೦೮, ಪೂರ್ವೋಕ್ತ ಪು. ೨೮೮

75. ಶಶಿಕಲಾ ರಾ. ಇಂಜನಿ., ೨೦೧೬, "ವಿಜಯನಗರ ಸಾಮ್ರಾಜ್ಯದ ರಾಜಧಾನಿ ವಿಜಯನಗರಪಟ್ಟಣದ ಉಪನಗರ ಕಮಲಾಪುರ", ಇತಿಹಾಸ ದರ್ಶನ, ಸಂ, ೩೧, ಪು. ೩೩೯

76. ವಾಸುದೇವನ್ ಸಿ.ಎಸ್., ೨೦೧೧, "ಹಂಪಿ ಪರಿಸರದಲ್ಲಿ ವಿಜಯನಗರ ಕಾಲದ ಅಕ್ಕಿಪೇಠೆ", ಭಟ್‌ಸೂರಿ ಕೆ.ಜಿ. (ಸಂ.) ಶಾಸನ ಅಧ್ಯಯನ, ಸಂ. ೮, ಸಂಚಿಕೆ ೩. ಜುಲೈ-ಡಿಸೆಂಬರ್, ಪು. ೧೨೦-೧೨೧.

77. ವೀಣಾ ಎಂ.ಪಿ., ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫, ಮನೆ ಸಮಾಜ ಮತ್ತು ಸಂಸ್ಕೃತಿ, ಪು. ೩೩–೩೪.

78. ತಾರಿಹಳ್ಳಿ ಹನುಮಂತಪ್ಪ., ೨೦೧೩, ಕಮಲಾಪುರ ಬೇಡ ನಾಯಕರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳು, ಪು. ೧೦–೧೩

79. ಅದೇ, ಪು. ೫

80. John M. Fritz, 1991, "Elevated Platform Near Kamalapuram", *Vijayanagara Progress of Research 1987-88,* pp. 105-112

81. Dutta B.B., 1977, *Town Planning in Ancient India,* pp. 331-332

82. *Ibid,* pp. 334-335

83. ಶಶಿಕಲಾ ರಾ. ಇಂಜನಿ, ಪೂರ್ವೋಕ್ತ, ಪು. ೩೩೯–೩೪೦

84. ವಾಸುದೇವನ್ ಸಿ.ಎಸ್., ೨೦೦೬, "ವಿಜಯನಗರಪಟ್ಟಣ ಮತ್ತು ಅದರ ಉಪನಗರಗಳು", ದೇವರಕೊಂಡಾರೆಡ್ಡಿ (ಸಂ.), ಹಂಪಿ ಸಂಪುಟ, ಕಲೆ, ಕ್ರೀಡೆ ಮತ್ತು ಕೌಶಲ್ಯ, ಪು. ૩೦૩

85. Allchin F.R., 1995, *The Archeology of Early Historic South Asia, The Emergence of Cities and States,* p. 196

86. ಶಶಿಕಲಾ ರಾ. ಇಂಜನಿ., ಪೂರ್ವೋಕ್ತ, ಪು. ೩೩೮

87. Kathleen D. Morrision., 1991 , "Small-Scale Agricultural Features three Vijayangara Embankments", *Vijayanagara Progress of Research 1987-88,* p.18

88. ವಾಸುದೇವನ್ ಸಿ.ಎಸ್., ೨೦೧೦, "ಕಡೇಬಾಗಿಲು–ಪ್ರಾಗೀತಿಹಾಸ ಕಾಲದ ನೆಲೆ", ಗೋಪಾಲ್ ಆರ್, (ಸಂ.) ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೨೦–೨೧, ವಾಸುದೇವನ್ ಸಿ.ಎಸ್., ೨೦೧೧, "ಭೌಗೋಳಿಕತೆ ಮತ್ತು ಪ್ರಾಗಿತಿಹಾಸ",

ಬಸವರಾಜ ಆಕಳವಾಡಿ (ಸಂ.) ಆನೆಗೊಂದಿ: ಅವಲೋಕನ ಇತಿಹಾಸ ಮತ್ತು ಪರಂಪರೆ, ಪು. ೧೦-೧೨.

89. Matthew D. Gallon., September 2008, "The Political Economy of Iron in Late Prehistoric South India", *Antiquity*, Vol. 82, pp. 1-3

90. Radika Lu. Bauer., September 2008, 'Social Distributions and Animal Use in the South Indian Iron Age', Archaeological Evidence from Kadebekale, Northern Karnataka, *Antiquity,* Vol. *82,* pp. 4-5

91. Sundara A., *Op.cit*, pp. 101-102

92. Carla M. Sinopoli, Kathleen D. Morrison, Gopal R, September 2008, "Late Prehistoric and Early Historic South India: Recent Research along the Tungabhdra River, Karnataka", *Antiquity*, Vol. 82, pp. 7-9

93. Namita Sugandhi., September 2008, Networks of Intention in a Peripheral Landscape', *Antiquity*,Vol. 82, pp. 11-15

94. Sundara A., *Op.cit*, 1988, p. 101

95. ಶರಣಬಸಪ್ಪ ಕೋಲ್ಕಾರ., ೨೦೧೪, "ಆನೆಗೊಂದಿಯಲ್ಲಿಯ ವಿಜಯನಗರ ಕಾಲದ ಕಾರಾಗೃಹ", ವಿಜಯನಗರ ಅಧ್ಯಯನ, ಸಂ. ೧೮, ಪು. ೧೦೯

96. Kathleen D. Morrison., *Op.cit*, 1995, p. 35

97. Channabasappa S. Patill., 1991, 'Anegondi Copper Plates', *Vijayangara Progress of Research 1987-88,* p. 15

98. ಶರಣಬಸಪ್ಪ ಕೋಲ್ಕಾರ., ೨೦೧೪,ಪೂರ್ವೋಕ್ತ, ಪು. ೧೦೯-೧೧೩

100. Natalie Tobert., 2000, Illustrations by Graham Reed, *Anegondi Architectural Ethnography of a Royal Village,* pp. 1-17

101. *Ibid*, pp.21-24

102. *Ibid*, p. 156

103. *Ibid*, p. 67

104. *Ibid*,p. 156

105. ಶಿವತಾಕರ್ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪು. ೩೬೨–೬೩.

106. ಅದೇ, ಪು. ೭೩

107. ಅದೇ, ಪು. ೬೯–೭೪

108. ಕೇಶವ ಟಿ.ಎಂ, ನರಸಿಂಹನ್ ಜಿ.ಎಸ್, ವಿಶ್ವೇಶ್ವರ ಎಂ.ವಿ. ಮತ್ತು ಶೇಷಾದ್ರಿ ಸಿಎಸ್., ೨೦೧೦, 'ಚಿಕ್ಕರಾಮಪುರದಲ್ಲೊಂದು ಪ್ರಾಗ್ಯೈತಿಹಾಸಿಕ ನಕ್ಷೆಯೆ?', ಗೋಪಾಲ್ ಆರ್, (ಸಂ.) ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೨೩–೨೭

109. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೬೯–೭೪

## ಹೊಸಪೇಟೆ ತಾಲೂಕಿನ ಮೊದಲನೇ ಹಂತದ ವಸತಿ ನೆಲೆಗಳು

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ನೆಲೆಗಳು | ದೊರೆತ ಕುರುಹುಗಳು | ಕಾಲಮಾನ |
|---|---|---|---|---|
| 1 | ಮಲಪನಗುಡಿ * | ಹಳೇಶಿಲಾಯುಗ | ಕಲ್ಲಿನ ಆಯುಧ | ಕ್ರಿ.ಪೂ ೧೮,೦೦೦ ರಿಂದ ೧೭,೦೦೦ |
| 2 | ಡಾಣಾಪುರ | ನವಶಿಲಾಯುಗ | ಕಲ್ಲಿನ ಆಯುಧಗಳು | ಕ್ರಿ.ಪೂ ೨,೦೦೦ |
| 3 | ಗಾದಿಗನೂರು | ನವಶಿಲಾಯುಗ | ಮಡಿಕೆ ಚೂರುಗಳು | ಕ್ರಿ.ಪೂ ೨,೦೦೦ |
| 4 | ಕಾಕಬಾಳ | ನವಶಿಲಾಯುಗ | ಮಡಿಕೆ ಚೂರುಗಳು | ಕ್ರಿ.ಪೂ ೨,೦೦೦ |
| 5 | ಇಂಗಳಗಿ | ನವಶಿಲಾಯುಗ | ಮಡಿಕೆ ಚೂರುಗಳು | ಕ್ರಿ.ಪೂ ೨,೦೦೦ |
| 6 | ಬೆಳಗೊಡುಹಾಳು | ನವಶಿಲಾಯುಗ | ಮಡಿಕೆ ಚೂರುಗಳು | ಕ್ರಿ.ಪೂ ೨,೦೦೦ |
| 7 | ಹಂಪಿ ಮೊಸಳಯ್ಯನ ಗುಡ್ಡ * | ನವಶಿಲಾಯುಗ | ಆಯುಧಗಳು, ಮಡಿಕೆ ಚೂರುಗಳು, ಮಣಿಗಳ, ಗೀರು ಚಿತ್ರಗಳು ಇತ್ಯಾದಿಗಳು | ಕ್ರಿ.ಪೂ ೨,೦೦೦ |
| 8 | ಮತಂಗ ಪರ್ವತ* | ನವಶಿಲಾಯುಗ | ಮಡಿಕೆ ಚೂರುಗಳು | ಕ್ರಿ.ಪೂ ೨,೦೦೦ |
| 9 | ಕಮಲಾಪುರ * | ನವಶಿಲಾಯುಗ | ಗೀರುಚಿತ್ರ | ಕ್ರಿ.ಪೂ ೨,೦೦೦ |
| 10 | ವೆಂಕಟಾಪುರ * | ನವಶಿಲಾಯುಗ | ಕೆಂಪು ಬಣ್ಣದ ಗೀರುಚಿತ್ರ ಮತ್ತು ಬೂದಿದಿಬ್ಬ | ಕ್ರಿ.ಪೂ ೨,೦೦೦ |
| 11 | ಗಾದಿಗನೂರು | ಶಿಲಾತಾಮ್ರಯುಗ | ಬೂದಿದಿಬ್ಬ, ನೀಳಗೆರೆಯುಳ್ಳ ಶಿಲಾಗಟ್ಟಿ | ಕ್ರಿ.ಪೂ. ಎರಡನೇ ಸಹಸ್ರಮಾನ |
| 12 | ಗುಡಿಓಬಳಾಪುರ * | ಶಿಲಾತಾಮ್ರಯುಗ | ವರ್ಣಚಿತ್ರಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 13 | ವಿರೂಪಾಕ್ಷ ಬಜಾರ * | ಶಿಲಾತಾಮ್ರಯುಗ | ವರ್ಣಚಿತ್ರಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 14 | ವೆಕಂಟಾಪುರ * | ಶಿಲಾತಾಮ್ರಯುಗ | ವರ್ಣಚಿತ್ರಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 15 | ಬೆಳಗೋಡಹಾಳು | ಶಿಲಾತಾಮ್ರಯುಗ | ಗೀರುಚಿತ್ರ ಮತ್ತು ನೆಲೆ ದೊರಕಿವೆ | ಕ್ರಿ.ಪೂ. ಎರಡನೇ ಸಹಸ್ರಮಾನ |

| | | | | |
|---|---|---|---|---|
| 16 | ಹಂಪಿ ಹತ್ತಿರ ತುಂಗಭದ್ರಾ ಬಲದಂಡೆಯಲ್ಲಿ * | ಶಿಲಾತಾಮ್ರಯುಗ | ಕಂದು ಬಣ್ಣದ ಮಡಿಕೆಚೂರು ದೊರಕಿವೆ | ಕ್ರಿ.ಪೂ. ಎರಡನೇ ಸಹಸ್ರಮಾನ |
| 17 | ಹಂಪಿ ಚಕ್ರತೀರ್ಥ* | ಶಿಲಾತಾಮ್ರಯುಗ | ವರ್ಣಚಿತ್ರಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 18 | ನಿಂಬಾಪುರ * | ಶಿಲಾತಾಮ್ರಯುಗ | ಬೂದಿದಿಬ್ಬ ಮತ್ತು ನೆಲೆ ದೊರಕಿವೆ | ಕ್ರಿ.ಪೂ. ಎರಡನೇ ಸಹಸ್ರಮಾನ |

**ಹೊಸಪೇಟೆ ತಾಲೂಕಿನ ಎರಡನೇ ಹಂತದ ವಸತಿ ನೆಲೆಗಳು**

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ನೆಲೆಗಳು | ಕಾಲಮಾನ |
|---|---|---|---|
| 1 | ಕಮಲಾಪುರ * | ಮೌರ್ಯ ಕಾಲದ ಬುದ್ಧ ಫಲಕ | ಕ್ರಿ.ಪೂ. ಮೊದಲ ಸಹಸ್ರಮಾನ |
| 2 | ಕಮಲಾಪುರ * | ಶಾತವಾಹನರ ಕಾಲದ ಶಾಸನ | ಕ್ರಿ.ಪೂ. ಮೊದಲ ಸಹಸ್ರಮಾನ |
| 3 | ಹಂಪಿ * | ಬಾದಾಮಿ ಚಲುಕ್ಯರ ಶಾಸನ, ದೇವಾಲಯಗಳು | ಕ್ರಿ.ಶ. ೭–೮ನೇ ಶತಮಾನ |
| 4 | ಹಂಪಿ * | ರಾಷ್ಟ್ರಕೂಟರ ದೇವಾಲಯ, ಕೊಂಡ, ಕಟ್ಟಡ | ಕ್ರಿ.ಶ. ೯–೧೦ನೇ ಶತಮಾನ |

**ಹೊಸಪೇಟೆ ತಾಲೂಕಿನ ಮೂರನೇ ಹಂತದ ವಸತಿ ನೆಲೆಗಳು**

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ನೆಲೆಗಳು | ಕಾಲಮಾನ |
|---|---|---|---|
| 1 | ಹಂಪಿ * | ಕಲ್ಯಾಣ ಚಾಲುಕ್ಯರ ಶಾಸನ, ದೇವಾಲಯಗಳು | ಕ್ರಿ.ಶ. ೧೦–೧೧ನೇ ಶತಮಾನ |
| 2 | ಹಂಪಿ * | ಹೊಯ್ಸಳರ ಶಾಸನ, ದೇವಾಲಯಗಳು | ಕ್ರಿ.ಶ. ೧೨–೧೩ನೇ ಶತಮಾನ |
| 3 | ಹಂಪಿ * | ವಿಜಯನಗರ ಕಾಲದ ಶಾಸನಗಳು, ಸಾಮಾಜಿಕ ಕಟ್ಟಡ, ಧಾರ್ಮಿಕ ಕಟ್ಟಡಗಳು | ಕ್ರಿ.ಶ. ೧೪–೧೬ನೇ ಶತಮಾನ |
| 4 | ಕಮಲಾಪುರ * | ಶಾಸನಗಳು, ಸಾಮಾಜಿಕ ಕಟ್ಟಡ, ಧಾರ್ಮಿಕ ಕಟ್ಟಡಗಳು | ಕ್ರಿ.ಶ. ೧೪–೧೬ನೇ ಶತಮಾನ |

| | | | |
|---|---|---|---|
| 5 | ಕಡ್ಡಿರಾಂಪುರ * | ಶಾಸನ ಮತ್ತು ಕಟ್ಟಡಗಳು | ಕ್ರಿ.ಶ. ೧೪–೧೫ನೇ ಶತಮಾನ |
| 6 | ಮಲಪನಗುಡಿ * | ಶಾಸನಗಳು, ಸಾಮಾಜಿಕ, ಧಾರ್ಮಿಕ ಕಟ್ಟಡಗಳು | ಕ್ರಿ.ಶ. ೧೪–೧೫ನೇ ಶತಮಾನ |
| 7 | ನಾಗಲಾಪುರ * | ಶಾಸನಗಳು, ದೇವಾಲಯಗಳು | ಕ್ರಿ.ಶ. ೧೪–೧೫ನೇ ಶತಮಾನ |
| 8 | ಅನಂತಶನಗುಡಿ* | ಶಾಸನ ಮತ್ತು ದೇವಾಲಯಗಳು | ಕ್ರಿ.ಶ. ೧೪–೧೫ನೇ ಶತಮಾನ |
| 9 | ಕೃಷ್ಣಾಪುರ * | ಶಾಸನ, ದೇವಾಲಯಗಳು, ಮಾರುಕಟ್ಟೆ ಬೀದಿ | ಕ್ರಿ.ಶ. ೧೪–೧೫ನೇ ಶತಮಾನ |
| 10 | ವೆಂಕಟಾಪುರ * | ಧಾರ್ಮಿಕ, ಸಾಮಾಜಿಕ ಕಟ್ಟಡಗಳು, ದೇವಾಲಯಗಳು | ಕ್ರಿ.ಶ. ೧೪–೧೫ನೇ ಶತಮಾನ |
| 11 | ಬುಕ್ಕಸಾಗರ * | ಶಾಸನಗಳು | ಕ್ರಿ.ಶ. ೧೪–೧೫ನೇ ಶತಮಾನ |
| 12 | ನಿಂಬಾಪುರ * | ಶಾಸನ | ಕ್ರಿ.ಶ. ೧೪–೧೫ನೇ ಶತಮಾನ |

**ಗಂಗಾವತಿ ತಾಲೂಕಿನ ಮೊದಲನೇ ಹಂತದ ವಸತಿ ನೆಲೆಗಳು**

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ನೆಲೆಗಳು | ದೊರೆತ ಕುರುಹುಗಳು | ಕಾಲಮಾನ |
|---|---|---|---|---|
| 1 | ಮಲ್ಲಾಪುರ * | ಸೂಕ್ಷ್ಮಶಿಲಾಯುಗ | ಕಲ್ಲಿನ ಬ್ಲೇಡ್‌ಗಳು, ಚೆಕ್ಕೆಗಳು | ಕ್ರಿಪೂ ೫೦೦೦ ರಿಂದ ೨೮೦೦ |
| 2 | ಅರ್‍ನಾಳ | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೇಡ್–ಆಯುಧಗಳು | ಕ್ರಿ.ಪೂ ೨,೦೦೦ |
| 3 | ಗೋನಾಲ | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೇಡ್–ಆಯುಧಗಳು | ಕ್ರಿ.ಪೂ ೨,೦೦೦ |
| 4 | ಹೆಬ್ಬಾಳ | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೇಡ್ –ಆಯುಧಗಳು | ಕ್ರಿ.ಪೂ ೨,೦೦೦ |

| | | | | |
|---|---|---|---|---|
| 5 | ಹೆರೂರ | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೇಡ್–ಆಯುಧಗಳು | ಕ್ರಿ.ಪೂ ೨,೦೦೦ |
| 6 | ಹಿರೇಜಂತಕಲ್ | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೇಡ್–ಆಯುಧಗಳು | ಕ್ರಿ.ಪೂ ೨,೦೦೦ |
| 7 | ಹೊಸಕೆರೆ | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೇಡ್–ಆಯುಧಗಳು | ಕ್ರಿ.ಪೂ ೨,೦೦೦ |
| 8 | ಕುಂಟೋಜಿ | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೆಡ್–ಆಯುಧಗಳು | ಕ್ರಿ.ಪೂ ೨,೦೦೦ |
| 9 | ಸಿಂಗನಹಾಳ | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೇಡ್–ಆಯುಧಗಳು | ಕ್ರಿ.ಪೂ ೨,೦೦೦ |
| 10 | ತಿಪ್ಪನಹಾಳ | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೇಡ್–ಆಯುಧಗಳು | ಕ್ರಿ.ಪೂ. ೨,೦೦೦ |
| 11 | ಚಿಕ್ಕರಾಂಪುರ | ನವಶಿಲಾಯುಗ | ಕಲ್ಲಾಸರೆಯಲ್ಲಿ ವರ್ಣಚಿತ್ರಗಳು | ಕ್ರಿ.ಪೂ ೨,೦೦೦ |
| 12 | ಹರಲಾಪುರ | ನವಶಿಲಾಯುಗ | ಕಲ್ಲಾಸರೆಯಲ್ಲಿ ವರ್ಣಚಿತ್ರಗಳು | ಕ್ರಿ.ಪೂ ೨,೦೦೦ |
| 13 | ಮಲ್ಲಾಪುರ * | ನವಶಿಲಾಯುಗ | ಕಲ್ಲಾಸರೆಯಲ್ಲಿ ವರ್ಣಚಿತ್ರಗಳು | ಕ್ರಿ.ಪೂ ೨,೦೦೦ |
| 14 | ನಾರಾಯಣಪೇಟೆ | ನವಶಿಲಾಯುಗ | ಕಲ್ಲಾಸರೆಯಲ್ಲಿ ವರ್ಣಚಿತ್ರಗಳು | ಕ್ರಿ.ಪೂ ೨,೦೦೦ |
| 15 | ವೆಂಕಟಾಪುರ * | ನವಶಿಲಾಯುಗ | ನವಶಿಲಾಯುಗದ ನೆಲೆಗಳಿವೆ | ಕ್ರಿ.ಪೂ ೨,೦೦೦ |
| 16 | ಮುಸಲಾಪುರ * | ನವಶಿಲಾಯುಗ | ನವಶಿಲಾಯುಗದ ನೆಲೆಗಳಿವೆ | ಕ್ರಿ.ಪೂ ೨,೦೦೦ |
| 17 | ಆನೆಗೊಂದಿ * | ನವಶಿಲಾಯುಗ | ನವಶಿಲಾಯುಗದ ಬೂದು ಬಣ್ಣದ ಮಡಿಕೆ, ಬ್ಲೇಡ್–ಆಯುಧಗಳು | ಕ್ರಿ.ಪೂ ೨,೦೦೦ |

| | | | | |
|---|---|---|---|---|
| 18 | ಆನೆಗೊಂದಿ ಕಡೆಬಾಗಿಲು * | ನವಶಿಲಾಯುಗ | ಮಡಿಕೆಚೂರುಗಳು, ಆಯುಧಗಳು, ಮಣಿಗಳು | ಕ್ರಿ.ಪೂ ೨,೦೦೦ |
| 19 | ಅರಳಿಹಳ್ಳಿ | ಶಿಲಾತಾಮ್ರಯುಗ | ಗೀರುಚಿತ್ರಗಳು ಮತ್ತು ಕೆಂಪು ಬಣ್ಣದ ಚಿತ್ರಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 20 | ಅಂಜನಹಳ್ಳಿ | ಶಿಲಾತಾಮ್ರಯುಗ | ಗೀರುಚಿತ್ರಗಳು ಮತ್ತು ಕೆಂಪು ಬಣ್ಣದ ಚಿತ್ರಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 21 | ಚಿಕ್ಕರಾಮರ | ಶಿಲಾತಾಮ್ರಯುಗ | ಗೀರುಚಿತ್ರಗಳು ಮತ್ತು ಕೆಂಪು ಬಣ್ಣದ ಚಿತ್ರಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 22 | ಇಂದರ್ಗಿ | ಶಿಲಾತಾಮ್ರಯುಗ | ಗವಿ ವರ್ಣಚಿತ್ರ, ಬೂದಿ ದಿಬ್ಬ | ಕ್ರಿ.ಪೂ. ಎರಡನೇ ಸಹಸ್ರಮಾನ |
| 23 | ಮಲ್ಲಾಪುರ * | ಶಿಲಾತಾಮ್ರಯುಗ | ಗವಿ ವರ್ಣಚಿತ್ರ | ಕ್ರಿ.ಪೂ. ಎರಡನೇ ಸಹಸ್ರಮಾನ |
| 24 | ಹೊಸಕೆರೆ | ಶಿಲಾತಾಮ್ರಯುಗ | ಕಂದು ಬಣ್ಣದ ಮಡಿಕೆ ಚೂರುಗಳು, ನೀಳಚಕ್ಕೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 25 | ಹಿರೆಬೆಣಕಲ್ | ಶಿಲಾತಾಮ್ರಯುಗ | ಗವಿ ವರ್ಣಚಿತ್ರಗಳು, ಕಂದು ವರ್ಣದ ಚಿತ್ರಿತ ಮಡಿಕೆಚೂರುಗಳು, ನೀಳಚಕ್ಕೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 25 | ಆನೆಗೊಂದಿ * | ಶಿಲಾತಾಮ್ರಯುಗ | ಗೀರು ಚಿತ್ರಗಳು ಮತ್ತು ಕೆಂಪು ಬಣ್ಣದ ಚಿತ್ರಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 26 | ಆನೆಗೊಂದಿ ಕಡೆಬಾಗಿಲು * | ಶಿಲಾತಾಮ್ರಯುಗ | ಮಡಿಕೆಚೂರುಗಳು ಕಲ್ಲಿನ ಆಯುಧಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 27 | ಚಿಕ್ಕಬೆಣಕಲ್ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿ ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 28 | ಚಿಕ್ಕರಾಮಾಪುರ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿ ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 29 | ಜಂಗಮರಕಲ್ಲುಗುಡಿ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿ ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 30 | ತಿಮ್ಮಾಪುರ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿ ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 31 | ಬಿಳೇಬಾವಿ | ಬೃಹತ್ | ಬೃಹತ್ ಶಿಲಾಗೋರಿ | ಕ್ರಿ.ಪೂ. ಎರಡನೇ |

| | | | | |
|---|---|---|---|---|
| | | ಶಿಲಾಯುಗ | ಮತ್ತು ನೆಲೆಗಳು | ಸಹಸ್ರಮಾನ |
| 32 | ಬೆಣಕಲ್ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿ ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 33 | ಬಸರಿಹಾಳ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿ ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 34 | ಬಂಡರಹಾಳ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿ ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 35 | ಮಲ್ಲಾಪುರ * | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿ ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 36 | ಎಮ್ಮಿಗುಡ್ಡ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿ ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 37 | ಮರಕುಂಬಿ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿಗಳು ಮತ್ತು ನೆಲೆಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 38 | ಸಾಣಾಪುರ | ಬೃಹತ್ ಶಿಲಾಯುಗ | ಬೃಹತ್ ಶಿಲಾಗೋರಿಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 39 | ಹಿರೇಬೆಣಕಲ್ | ಬೃಹತ್ ಶಿಲಾಯುಗ | ವರ್ಣಚಿತ್ರ ಮತ್ತು ಶಿಲಾಗೋರಿಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |
| 40 | ಆನೆಗೊಂದಿ ಕಡೇಬಾಗಿಲು * | ಬೃಹತ್ ಶಿಲಾಯುಗ | ಮಡಕೆಚೂರುಗಳು, ಕಬ್ಬಿಣದ ವಸ್ತುಗಳು | ಕ್ರಿ.ಪೂ. ಎರಡನೇ ಸಹಸ್ರಮಾನ |

**ಗಂಗಾವತಿ ತಾಲೂಕಿನ ಎರಡನೇ ಹಂತದ ವಸತಿ ನೆಲೆಗಳು**

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ನೆಲೆಗಳು | ಕಾಲಮಾನ |
|---|---|---|---|
| 1 | ಆನೆಗೊಂದಿ – ಕಡೆಬಾಗಿಲು * | ಮೌರ್ಯರ ಕಾಲದ ಮಡಿಕೆ ಚೂರು, ಅರೆಪ್ರಶಸ್ತ ಮಣಿಗಳು | ಕ್ರಿ.ಪೂ. ಮೊದಲ ಸಹಸ್ರಮಾನ |
| 2 | ಆನೆಗೊಂದಿ – ಕಡೆಬಾಗಿಲು * | ಶಾತವಾಹನರ ಕಾಲದ ಮಡಿಕೆಚೂರುಗಳು | ಕ್ರಿ.ಪೂ. ಮೊದಲ ಸಹಸ್ರಮಾನ |

### ಗಂಗಾವತಿ ತಾಲೂಕಿನ ಮೂರನೇ ಹಂತದ ವಸತಿ ನೆಲೆಗಳು

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ನೆಲೆಗಳು | ಕಾಲಮಾನ |
|---|---|---|---|
| 1 | ಆನೆಗೊಂದಿ * | ಕಲ್ಯಾಣ ಚಾಲುಕ್ಯ ಶಾಸನ, ದೇವಾಲಯ, ವೀರಗಲ್ಲು, ಬಾವಿಗಳು | ಕ್ರಿ.ಶ. ೧೦-೧೧ನೇ ಶತಮಾನ |
| 2 | ಆನೆಗೊಂದಿ * | ಹೊಯ್ಸಳ ಕಾಲದ ಶಾಸನಗಳು, ತಾಮ್ರಪಟ ಶಾಸನಗಳು | ಕ್ರಿ.ಶ. ೧೨-೧೩ನೇ ಶತಮಾನ |
| 3 | ಆನೆಗೊಂದಿ * | ವಿಜಯನಗರ ಕಾಲದ ಶಾಸನ, ಧಾರ್ಮಿಕ, ಸಾಮಾಜಿಕ ಕಟ್ಟಡಗಳು | ಕ್ರಿ.ಶ. ೧೪-೧೬ನೇ ಶತಮಾನ |

* ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದ ಗ್ರಾಮಗಳು

# ಅಧ್ಯಾಯ: ೦೪

## ಹಂಪಿ ಪರಿಸರದ ವಸತಿ ನೆಲೆಗಳ ವಿಶ್ಲೇಷಣೆ

ಪ್ರಾಗಿತಿಹಾಸ ಕಾಲದಿಂದ ಇಂದಿನವರೆಗೆ ಹಂಪಿ ಪರಿಸರದಲ್ಲಿ ವಸತಿನೆಲೆಗಳು ಮುಂದುವರೆದುಕೊಂಡು ಬಂದಿದೆ. ಪ್ರಾಗಿತಿಹಾಸಿಕ ಕಾಲದಲ್ಲಿ ಮಾನವನು ಅಲೆಮಾರಿಯಾಗಿದ್ದನು. ಇಲ್ಲಿ ಹಳೇಶಿಲಾಯುಗ ಹಾಗೂ ಸೂಕ್ಷ್ಮಶಿಲಾಯುಗ ಕಾಲದ ನೆಲೆಗಳು ಕಡಿಮೆ ಸಂಖ್ಯೆಯಲ್ಲಿ, ನವಶಿಲಾಯುಗ ಮತ್ತು ಬೃಹತ್‌ಶಿಲಾಯುಗ ಕಾಲಘಟ್ಟದ ನೆಲೆಗಳು ಅಧಿಕವಾಗಿ ದೊರೆಯುತ್ತವೆ. ಆದಿಇತಿಹಾಸ ಕಾಲಘಟ್ಟದಿಂದ ಮಧ್ಯಯುಗೀನ ಹಾಗೂ ಅದರ ನಂತರ ಕಾಲಘಟ್ಟಗಳ ವಸತಿನೆಲೆಗಳು ಅಧಿಕ ಸಂಖ್ಯೆಯಲ್ಲಿವೆ. ಈ ಪ್ರದೇಶವು ಆದಿಇತಿಹಾಸ ಕಾಲದಿಂದ ನಿರಂತರವಾಗಿ ಜನವಸತಿ ಪ್ರದೇಶವಾಗಿ ಮುಂದುವರೆದಿರುವುದು ಗಮನಾರ್ಹ. ಈ ಪರಿಸರದಲ್ಲಿ ಪ್ರಾಕೃತಿಕವಾಗಿ ದೊರೆಯುವ ನೀರು ಆಹಾರ ಮತ್ತು ರಕ್ಷಣಾ ತಾಣಗಳು ಮಾನವನ ಜನವಸತಿ ನೆಲೆಯ ಸಾಂದ್ರತೆಗೆ ಕಾರಣವಾಗಿದೆ. ಅಧ್ಯಯನಕ್ಕೆ ಆಯ್ದುಕೊಂಡ ಪ್ರದೇಶವು ತುಂಗಭದ್ರಾ ನದಿಯ ಎಡ ಮತ್ತು ಬಲದಂಡೆಗಳಲ್ಲಿ ವ್ಯಾಪಿಸಿವೆ. ಇಂದಿನ ಹೊಸಪೇಟೆ ಮತ್ತು ಗಂಗಾವತಿ ತಾಲೂಕುಗಳಲ್ಲಿನ ೨೯ ಗ್ರಾಮಗಳಲ್ಲಿ ಮೇಲೆ ಉಲ್ಲೇಖಿಸಿದ ವಿವಿಧ ಕಾಲಘಟ್ಟಗಳ ಪ್ರಾಕ್ತನ ಅವಶೇಷಗಳು ದೊರಕಿದ್ದು ಇವು ಜನವಸತಿ ಪ್ರದೇಶವೆಂಬುದನ್ನು ದೃಢಪಡಿಸಿವೆ.

ಹಂಪಿಯ ವಿಠಲ ದೇವಾಲಯದ ಈಶಾನ್ಯಕ್ಕೆ ಇರುವ ಮೊಸಳಯ್ಯನ ಬೆಟ್ಟದಲ್ಲಿ ನವಶಿಲಾಯುಗ ಕಾಲದ ನೈಸರ್ಗಿಕ ಬಂಡೆಗಳಿಂದ ಉಂಟಾದ ಕಲ್ಲಾಸರೆಗಳನ್ನು ವಸತಿಯ ನೆಲೆಯಾಗಿ ಪರಿವರ್ತಿಸಿಕೊಂಡು ಜನ ವಾಸಿಸುತ್ತಿದ್ದರು. ಇದರೊಂದಿಗೆ ಆ ಪ್ರದೇಶದಲ್ಲಿ ನಡೆಸಲಾದ ಸಿಮೀತ ಪ್ರದೇಶದ ಉತ್ಖನನದಲ್ಲಿ ಮನೆಯ ನೆಲಹಾಸು ಮತ್ತು ಮಡಿಕೆಯಲ್ಲಿ ಶವ

(urnburial) ಮತ್ತು ಮಡಿಕೆ ಚೂರುಗಳು ದೊರೆತಿವೆ. ಸಮೀಪದಲ್ಲಿರುವ ಬಂಡೆಯ ಮೇಲೆ ವರ್ಣಚಿತ್ರಗಳಿವೆ. ಇದರ ಪಕ್ಕದಲ್ಲಿ ಸ್ವಾಭಾವಿಕವಾಗಿ ಉಂಟಾಗುವ ನೀರಿನ ಸಂಗ್ರಹಕ್ಕೆ ಒಡ್ಡು ಕಟ್ಟಿ ವ್ಯವಸಾಯವನ್ನು ಮಾಡಿರುವ ಕುರುಹುಗಳಿವೆ. ಬಂಡೆಗಳ ನಡುವಿರುವ ಪ್ರದೇಶದಲ್ಲಿ ಅಡಿಗೆ ಮಾಡಿರುವುದಕ್ಕೆ ಸಾಕ್ಷಿಯಾಗಿ ಮಡಿಕೆ ಚೂರುಗಳು, ಸುಟ್ಟಮಣ್ಣು ಹಾಗೂ ಪ್ರಾಣಿಗಳ ಎಲಬುಗಳು ಪತ್ತೆಯಾಗಿವೆ. ಅದು ಕಲ್ಲಿನ ಆಯುಧ ಮತ್ತು ಆಭರಣದ ಮಣಿಗಳನ್ನು ತಯಾರಿಸುವ ಪ್ರದೇಶವಾಗಿದೆ. ಅಲ್ಲಿ ವಿವಿಧ ಬಗೆಯ ಕಲ್ಲಿನ ಆಯುಧಗಳು ದೊರಕಿವೆ. ಇದೇ ಗುಹೆಯ ಮತ್ತೊಂದು ಭಾಗದಲ್ಲಿ ಮಣ್ಣಿನ ಗೋಡೆಯ ರಚನೆ ದೊರಕಿದ್ದು ಅವರ ಮನೆಯ ರಚನಾ ವಿನ್ಯಾಸವನ್ನು ಪರಿಚಯಿಸುತ್ತದೆ. ಅಂದಿನ ಜನರು ತಮ್ಮ ವಿಚಾರಗಳನ್ನು ಚಿತ್ರಗಳ ರೂಪದಲ್ಲಿ ಬಿಡಿಸುವ ಹವ್ಯಾಸ ಮಾಡಿಕೊಂಡಿದ್ದರು. ಗುಹೆಯ ಮೇಲಿನ ಬಂಡೆಯಲ್ಲಿ ಕಾಡು ಪ್ರಾಣಿಗಳ ಚಿತ್ರಗಳನ್ನು ಕೆಂಪು ಬಣ್ಣದಿಂದ ಬಿಡಿಸಿದ್ದಾರೆ. ಇಲ್ಲಿ ದೊರಕಿರುವ ನವಶಿಲಾಯುಗದ ನೆಲೆಗಳಲ್ಲಿಯೇ ವ್ಯವಸ್ಥಿತವಾಗಿರುವ ಒಂದು ನೆಲೆಯು ಇದಾಗಿದೆ.[೧]

ವೆಂಕಟಾಪುರ ಗ್ರಾಮದ ಹೊರವಲಯದ ಬೆಟ್ಟದ ಬಂಡೆಯ ಮೇಲೆ ನವಶಿಲಾಯುಗ ಕಾಲದಲ್ಲಿ ಬಿಡಿಸಿರುವ ಪ್ರಾಣಿಯ ಚಿತ್ರಗಳಿವೆ. ಬೆಟ್ಟದ ಮುಂಭಾಗವು ಜನವಸತಿಗೆ ಅನುಕೂಲಕರ ವಿಶಾಲವಾದ ಪ್ರದೇಶವಿದೆ. ಇಂದು ವ್ಯವಸಾಯದ ಭೂಮಿಯಾಗಿರುವುದರಿಂದ ಈ ನೆಲೆಯ ಬಹುತೇಕ ಅವಶೇಷಗಳು ನಶಿಸಿ ಹೋಗಿದೆ. ಈ ನೆಲೆಯಿಂದ ದೂರದ ಹೊಲದಲ್ಲಿ ವಾಲಿದಿಬ್ಬ ಎಂದು ಕರೆಯಲಾಗುವ ನವಶಿಲಾಯುಗದ ಬೂದಿದಿಬ್ಬವಿದೆ. ಅದರಲ್ಲಿ ಮಡಿಕೆ ಚೂರುಗಳು, ಕಲ್ಲಿನ ಆಯುಧಗಳು ಮತ್ತು ಮೂಳೆಗಳು ದೊರೆತಿವೆ. ಬೂದಿದಿಬ್ಬದ ಪಕ್ಕದಲ್ಲಿ ಇಂದು ವ್ಯವಸಾಯ ಮಾಡುತ್ತಿರುವುದರಿದ ಅದು ನಶಿಸಿ ಹೋಗಿವೆ.[೨] ನದಿ ಆಚೆಗಿನ ಆನೆಗೊಂದಿಯ ಕಡೇಬಾಗಿಲು ಪ್ರದೇಶದಲ್ಲಿ ನವಶಿಲಾಯುಗ ಕಾಲದ ನೆಲೆಯಿದೆ. ಬೆಟ್ಟದ ತಪ್ಪಲಿನಲ್ಲಿ ನೆಲೆಯ ವಸತಿ ಕುರುಹು ದೊರೆತಿದೆ. ಬೆಟ್ಟದಲ್ಲಿನ ಬಂಡೆಯ ಮೇಲೆ ಗೀರುಚಿತ್ರಗಳು, ಗುಹೆಗಳು, ಮಡಿಕೆ ಚೂರು ಮತ್ತು ಸುಟ್ಟ ಬೂದಿಯು ದೊರೆತಿದೆ. ಈ ದಿಬ್ಬದ ಬೂದಿಯು ಗದ್ದೆಯ ಅರ್ಧ ಭಾಗವನ್ನು ಆವರಿಸಿದೆ. ಅಲ್ಲಿ ನವಶಿಲಾಯುಗದ ಮಡಿಕೆ ಚೂರುಗಳು ಮತ್ತು ವಿವಿಧ ಬಗೆಯ ಆಯುಧಗಳು ದೊರತಿವೆ. ಈ ಪ್ರದೇಶದಲ್ಲಿ ಗುಡಿಸಲುಗಳ ಕುರುಹುಗಳು ಇದ್ದಿದ್ದು ಅವು ಸಂಪೂರ್ಣವಾಗಿ ನಶಿಸಿಹೋಗಿವೆ.[೩]

ನವಶಿಲಾಯುಗ ಕಾಲದ ನಂತರ ಕಾಲಘಟ್ಟವಾದ ಶಿಲಾತಾಮ್ರಯುಗದ ವಸತಿ ನೆಲೆಗಳು ದೊರೆತಿಲ್ಲವಾದರೂ ಅವರ ಕಾಲದ ಗೀರುಚಿತ್ರಗಳು ದೊರಕಿರುವುದರಿಂದ ಇಲ್ಲಿ ಆ ಸಾಂಸ್ಕೃತಿಕ ಕಾಲಘಟ್ಟದ ಜನರು ಇದ್ದರೆಂದು ಅಭಿಪ್ರಾಯಪಡಬಹುದು. ಪೂರ್ಣ ಪ್ರಮಾಣದ

ಉತ್ಖನನಗಳು ಇಲ್ಲಿ ನಡೆದಿಲ್ಲವಾದ್ದರಿಂದ ಆ ಕಾಲದ ವಿಷಯಗಳು ಅಜ್ಞಾತವಾಗಿದೆ. ಬೃಹತ್‌ಶಿಲಾಯುಗದ ನೆಲೆಯು ಆನೆಗೊಂದಿಯ ಕಡೇಬಾಗಿಲು ಪ್ರದೇಶದಲ್ಲಿ ದೊರೆತಿದ್ದು ಅದರ ಉತ್ಖನನದಲ್ಲಿ ದೊರೆತ ಲೋಹದ ವಸ್ತುಗಳ ಅಧ್ಯಯನದಿಂದ ಅಂದಿನ ಜನರ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆ ಹಾಗೂ ಪ್ರಗತಿಯನ್ನು ತಿಳಿಯಬಹುದಾಗಿದೆ. ಇಲ್ಲಿ ಮತ್ತು ಮಸ್ಕಿ–ಬ್ರಹ್ಮಗಿರಿ ಪ್ರದೇಶಗಳಲ್ಲಿ ದೊರೆತ ಲೋಹದ ವಸ್ತುಗಳಲ್ಲಿ ಸಾಮ್ಯತೆ ಇರುವುದರಿಂದ ಇವೆರಡೂ ಪ್ರದೇಶಗಳ ನಡುವೆ ಸಂಬಂಧ ಹೊಂದಿದ್ದತ್ತು ಎಂಬುದು ಗಮನಾರ್ಹ. ಪ್ರಕೃತಿಯ ವಿಕೋಪದಿಂದ ಹಾಗೂ ಮಾನವನ ಚಟುವಟಿಕೆಯಿಂದ ಇಲ್ಲಿನ ಪ್ರಾಚ್ಯಾವಶೇಷಗಳು ನಾಶವಾಗಿದೆ.[೪]

ಆದಿಇತಿಹಾಸ ಕಾಲದ ನೆಲೆಗಳು ನಮಗೆ ಕಡಿಮೆ ಪ್ರಮಾಣದಲ್ಲಿ ದೊರೆತರೂ ಅವು ನಮಗೆ ಉತ್ತಮವಾದ ಮಾಹಿತಿಯನ್ನು ಒದಗಿಸುತ್ತವೆ. ಮಹಾನವಮಿ ದಿಬ್ಬದ ಪಶ್ಚಿಮಕ್ಕೆ ಸುಣ್ಣದ ಕಲ್ಲಿನ ಬೌದ್ಧಫಲಕಗಳು ದೊರೆತಿವೆ.[೫] ಅದೇ ರೀತಿ ಆನೆಗೊಂದಿಯ ಕಡೇಬಾಗಿಲ ಪ್ರದೇಶದಲ್ಲಿ ಮಡಿಕೆ ಚೂರುಗಳು ಹಾಗೂ ಅರೆಪ್ರಶಸ್ತ ಕಲ್ಲುಗಳು ದೊರೆತಿವೆ. ಇದು ಮೌರ್ಯ–ಶಾತವಾಹನ ಕಾಲದಲ್ಲಿ ಜನವಸತಿ ಹೊಂದಿದ ಪ್ರದೇಶವಾಗಿತ್ತು. ಈ ಪ್ರದೇಶವು ಮೌರ್ಯ ಸಾಮ್ರಾಜ್ಯದ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದು ಜಿಲ್ಲೆಯಲ್ಲಿನ ಅಶೋಕನ ಶಾಸನಗಳು ದೃಢಪಡಿಸಿವೆ.[೬] ಹಂಪಿಯಿಂದ ೩೫ ಕಿ.ಮೀ. ದೂರದಲ್ಲಿರುವ ಕೊಪ್ಪಳದಲ್ಲಿ ಅವನ ಶಾಸನಗಳು ದೊರೆತಿವೆ. ಕೊಪ್ಪಳದಲ್ಲಿ ಮೌರ್ಯರ ಕಾಲದ ಕುರುಹುಗಳು ಇಂದಿಗೆ ಉಳಿದುಕೊಂಡು ಬಂದಿರುವುದು ವಿಶೇಷ. ಹಂಪಿ ಪರಿಸರದಲ್ಲಿ ಇನ್ನಷ್ಟು ಉತ್ಖನನಗಳು ನಡೆದರೆ ಹೆಚ್ಚಿನ ಮಾಹಿತಿ ದೊರೆಯುವ ಸಾಧ್ಯತೆಗಳಿವೆ.

ಮಹಾನವಮಿದಿಬ್ಬದ ಪೂರ್ವ ಭಾಗದಲ್ಲಿ ನಡೆಸಲಾದ ಉತ್ಖನನದಲ್ಲಿ ಶಾತವಾಹನರ ಕಾಲದ ಬೌದ್ಧ ಧರ್ಮದ ಶಾಸನಸಹಿತ ಶಿಲಾಫಲಕ ದೊರೆತಿದೆ.[೭] ಕಡೇಬಾಗಿಲ ಪ್ರದೇಶದಲ್ಲಿ ರಸ್ಸೆಟ್ ಲೇಪಿತ ಬಣ್ಣದ ಮಡಿಕೆಗಳು ದೊರೆತಿವೆ.[೮] ಹಂಪಿ ಪರಿಸರದಲ್ಲಿ ಬೌದ್ಧ ಧರ್ಮ ಇತ್ತೆಂಬುದುಕ್ಕೆ ಇದು ಸಾಕ್ಷಿಯಾಗಿದೆ. ಅಶೋಕನ (ಮೌರ್ಯರ) ಕಾಲದಿಂದ ಶಾತವಾಹನರ ಕಾಲದವರೆಗೆ (ಆದಿಇತಿಹಾಸ ಕಾಲ) ಈ ಪರಿಸರವು ಬೌದ್ಧ ಧರ್ಮದ ಕ್ಷೇತ್ರವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ.

ಚಾರಿತ್ರಿಕ ಕಾಲಘಟ್ಟಕ್ಕೆ ಸೇರಿದ ವಿವಿಧ ಅರಸುಮನೆತನಗಳನ್ನು ಈ ಪರಿಸರವು ಆಕರ್ಷಿಸಿತು. ಅದಕ್ಕೆ ಪುರಾವೆಯಾಗಿ ಬಾದಾಮಿ ಚಲುಕ್ಯರ ಕಾಲದಿಂದ ಹೊಯ್ಸಳರ ಕಾಲದವರೆಗೆ ಇಲ್ಲಿ ಅನೇಕ ಪ್ರಾಚ್ಯವಶೇಷಗಳು, ದೇವಾಲಯ, ಶಿಲ್ಪ, ಇತ್ಯಾದಿಗಳು ಹಾಗೂ ಅಲ್ಪ

ಪ್ರಮಾಣದಲ್ಲಿ ವಸತಿನೆಲೆಗಳ ಅವಶೇಷಗಳು ದೊರೆತಿವೆ. ಬಾದಾಮಿ ಚಲುಕ್ಯರ ಕಾಲದಲ್ಲಿ ವಿಜಯಸ್ಕಂದಾವರ ಎನ್ನುವವನು ಸೇನಾ ಶಿಬಿರದಲ್ಲಿ ಬೀಡುಬಿಟ್ಟಿದ್ದನು.[೯] ಸೇನಾ ಶಿಬಿರವು ತಾತ್ಕಾಲಿಕವಾಗಿದ್ದರೂ ವಸತಿನೆಲೆಯಲ್ಲಿ ದೊರೆಯುವ ಎಲ್ಲಾ ಅನುಕೂಲತೆಗಳಿದ್ದವು. ಹಂಪಿ ಪ್ರದೇಶದಲ್ಲಿ ಬೀಡು ಬಿಟ್ಟಿದ್ದರಿಂದ ಅವರ ಕಾಲದ ದೇವಾಲಯ ಮತ್ತು ಶಾಸನಗಳು ದೊರೆತಿವೆ. ವಸತಿನೆಲೆಗಳಿಗೆ ಸಂಬಂಧಿಸಿದ ಪ್ರಾಕ್ತನ ಅವಶೇಷಗಳಾದ ಮಡಿಕೆ ಚೂರುಗಳು ಮನೆಗಳು, ಇತ್ಯಾದಿಗಳು ದೊರೆತಿಲ್ಲ.

ಕಲ್ಯಾಣ ಚಾಲುಕ್ಯರ ಅರಸ ವಿಕ್ರಮಾದಿತ್ಯನ ಆಳ್ವಿಕೆಯ ಅವಧಿಯ ಶಾಸನವು ದೊರೆತಿವೆ. ಇಂದಿನ ಕೊಪ್ಪಳ ಜಿಲ್ಲೆಯ ಮುನಿರಾಬಾದ್ ಪ್ರದೇಶದಲ್ಲಿ ನೀರಾವರಿಗಾಗಿ ವಿಕ್ರಮಾದಿತ್ಯನು ತುಂಗಭದ್ರಾ ನದಿಯ ಉತ್ತರಕ್ಕೆ ೮ ಕಿ.ಮೀ. ಉದ್ದವಾದ ನಾಲೆಯನ್ನು ಕಟ್ಟಿಸಿದನೆಂದು ಕ್ಯಾಥಲೀನ್ ಅವರು ಗುರುತಿಸಿದ್ದಾರೆ. ಅದು ಇಂದಿಗೂ ಬಳಕೆಯಲ್ಲಿದ್ದು ಅವುಗಳನ್ನು ನಂತರ ವಿಜಯನಗರ ಕಾಲದಲ್ಲಿ ನಿರ್ಮಿಸಿದ ನಾಲೆಗಳಿಗೆ ಜೋಡಿಸಿಲ್ಲ. ಕ್ರಿ.ಶ. ೧೦೮೮ರ ಶಾಸನದ ಉಲ್ಲೇಖದಂತೆ ಈ ಪ್ರದೇಶದಲ್ಲಿ ಎರಡು ದೇವಾಲಯ ಮತ್ತು ನಾಲೆಗಳು[೧೦] ಇರುವುದರಿಂದ ಇದು ಜನವಸತಿಯಾಗಿರುವ ಸಾಧ್ಯತೆಗಳಿವೆ. ಆದರೆ ಇಂದು ಹೆಚ್ಚು ಕೃಷಿ ಚಟುವಟಿಕೆಯಿಂದ ಅವುಗಳು ನಾಶವಾಗಿವೆ. ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯ ಮತ್ತು ಶಾಸನ ದೊರೆತಿರುವುದರಿಂದ ಇವರ ಕಾಲದಲ್ಲಿ ಹಂಪಿ ಪರಿಸರವು ಒಂದು ಉತ್ತಮ ನಗರವಾಗಿ ಬೆಳವಣಿಗೆ ಹೊಂದಿತ್ತು. ನಾಲೆಯನ್ನು ಹೊರತುಪಡಿಸಿ ಅವರ ಕಾಲದ ಬೇರಾವ ಕಟ್ಟಡದ ಅವಶೇಷಗಳು ದೊರೆತಿಲ್ಲ.

ವಿಜಯನಗರ ಸ್ಥಾಪನೆಯ ಕಾಲದ ಕುರುಹುಗಳು ವ್ಯವಸ್ಥಿತವಾಗಿ ದೊರೆಯುತ್ತದೆ. ವಿಜಯನಗರ ಸಾಮ್ರಾಜ್ಯವು ಮೊದಲಿಗೆ ಆನೆಗೊಂದಿಯಲ್ಲಿ ಸ್ಥಾಪನೆಯಾಯಿತು. ಆನೆಗೊಂದಿಯನ್ನು ಹಸ್ತಿನಾವತಿ, ಆನೆಗೊಂದಿ, ಹಸ್ತಿನಾಪುರ ಎಂಬಿತ್ಯಾದಿ ಹೆಸರುಗಳಿಂದ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ನಂತರ ಈ ಸ್ಥಳವನ್ನು ವಿಜಯನಗರಪಟ್ಟಣ, ಭಾಸ್ಕರಕ್ಷೇತ್ರ, ಹಸ್ತಿಕೋಣಪುರ, ಗಜಗಹ್ವರ, ಕುಂಜಕೋಣಪುರ ಮುಂತಾದ ಹೆಸರುಗಳಿಂದ ಕರೆದಿರುವುದನ್ನು ಶಾಸನಗಳಿಂದ ತಿಳಿಯಬಹುದು. 'ಪುರ' ಎನ್ನುವ ಪದ ವಿಜಯನಗರದ ಪ್ರಾರಂಭದಿಂದಲೂ ಬಳಕೆಯಾಗಿದೆ.[೧೧] ಈ ಪುರದಲ್ಲಿ (ಹಸ್ತಿನಾಪುರ) ಮೊದಲು ಹರಿಹರ ಕ್ರಿ.ಶ. ೧೩೩೬–೧೩೫೬ ಬುಕ್ಕನು ಕೋಟೆ ಕಟ್ಟಿಸಿದನು. ನಂತರ ಹಸ್ತಿನಾಪುರ ಅಥವಾ ಆನೆಗೊಂದಿಯಿಂದ (ಎಡದಂಡೆಯಿದೆ) ಹಂಪಿಗೆ (ಬಲದಂಡೆಗೆ) ವಿಜಯನಗರಕ್ಕೆ ಸ್ಥಳಾಂತರಿಸಿದನು.

ರಾಜಧಾನಿಪಟ್ಟಣಕ್ಕೆ ಹೊಂದಿಕೊಂಡು ಪುರಗಳು ನಂತರ ಬೆಳವಣಿಗೆ ಹೊಂದಿದವು. ಈ ಪುರಗಳು ನಗರ, ಪಟ್ಟಣ, ಗ್ರಾಮ ಎನ್ನುವ ರೀತಿಯಲ್ಲಿಯೇ ಬೆಳದುಕೊಂಡವು. ಆದರೆ ಎಲ್ಲಾ ಪ್ರದೇಶಗಳಿಗೂ 'ಪುರ' ಎನ್ನುವ ಪದವನ್ನು ಬಳಕೆ ಮಾಡಲಾಗಿದೆ. ಮೊದಲು ರಾಜಧಾನಿ ಪಟ್ಟಣವನ್ನು ಗುರುತಿಸುವಾಗ ಗಡಿಯನ್ನು ಗುರುತಿಸಿ ಅಲ್ಲಿನ ವ್ಯವಸ್ಥಿತ ನೆಲೆಯನ್ನು ಕುರಿತು ವಿವರಿಸಲಾಗಿದೆ.

ರಾಜಧಾನಿಪಟ್ಟಣದ ಕೋಟೆಗೋಡೆಯು ಮಹಾನವಮಿ ದಿಬ್ಬದ ಅರಮನೆಗಳ ಪ್ರದೇಶ, ರಾಣಿಯರ ಸ್ನಾನಗೃಹ, ಆನೆಸಾಲಿನ ಹಿಂದಿನ ಜೈನ ದೇವಾಲಯ, ಭೂಮಿಯ ಕೆಳಮಟ್ಟದ ದೇವಾಲಯ ಮುಂತಾದವುಗಳನ್ನು ಸುತ್ತುವರೆದಿದ್ದು, ಅನೇಕ ಹೆಬ್ಬಾಗಿಲುಗಳನ್ನು ಒಳಗೊಂಡಿವೆ. ಶೃಂಗಾರದ ಹೆಬ್ಬಾಗಿಲು, ಸೋಮವಾರದ ಬಾಗಿಲು, ಗಾಣಗಿತ್ತಿ ಜೈನ ದೇವಾಲಯ ಉತ್ತರಕ್ಕಿರುವ (ಬೇಟೆಗಾರರ) ಬಾಗಿಲು, ಭೂಮಿಯ ಕೆಳಮಟ್ಟದ ದೇವಾಲಯದ ಉತ್ತರಕ್ಕಿರುವ (ಅರೆಶಂಕರ) ಬಾಗಿಲು, ಅದೇ ದೇವಾಲಯ ಆಗ್ನೇಯದ ಹೂವಿನಬಾಗಿಲು ಮತ್ತು ಪ್ರತಿಷ್ಠಿತರ ಅರಮನೆಯ ಉತ್ತರಕ್ಕಿರುವ ಬಾಗಿಲುಗಳು ಸೇರಿವೆ. ಶಾಸನದ ಉಲ್ಲೇಖದಂತೆ "ಶ್ರೀವೀರಬುಕ್ಕರಾಯನ ವಿಜಯನಗರಪಟ್ಟಣದ ಮೂಡಣ ಸಿಂಘಾರವ ಹೆಬ್ಬಾಗಿಲು, ಬಡಗಣ ಮೂಲೆಯ ಅರೆಯ ಮೇಲಣ ಆನೆಗೊಂದಿಯ ಕೊತ್ತಣಕ್ಕೆ ಮಂಗಳ ಮಹಾಶ್ರೀ" ಎಂದಿದೆ.[೧೨] ಈ ಪ್ರದೇಶವನ್ನು ಹೊಸಪಟ್ಟಣ ಎಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಈ ಹೊಸಪಟ್ಟಣ ಪ್ರದೇಶದಲ್ಲಿ ಪ್ರಸನ್ನ ವಿರೂಪಾಕ್ಷ ದೇವಾಲಯ, ಪಟ್ಟಣದ ಯಲ್ಲಮ್ಮ ದೇವಾಲಯ, ರಂಗ ದೇವಾಲಯಗಳು ನೆಲಮಟ್ಟಕ್ಕಿಂತ ಕೆಳಗೆ ಇದೆ. ಹೊಸಪಟ್ಟಣ ನಿರ್ಮಿಸುವಾಗ ಚಿಕ್ಕಪುಟ್ಟ ಕಂದಕಗಳನ್ನು ಮಣ್ಣಿನಿಂದ ಮುಚ್ಚಿ ಉತ್ತರಕ್ಕೆ ಇಳಿಜಾರು ಮಾಡಿಕೊಂಡಿದ್ದಾರೆ. ಮಹಾನವಮಿ ದಿಬ್ಬದ ಹತ್ತಿರ ಗೋಡೆಯ ಆವರಣದ ದ್ವಾರದ ಕೆಳಗಿರುವ ನೀರಿನ ಚರಂಡಿಯ ನಾಲೆಯು ಇಂದಿನ ನೆಲಮಟ್ಟದಿಂದ ಸುಮಾರು ೫.೦೦–೬.೦೦ ಮೀಟರ್ ಕೆಳಗಿದೆ. ಇದಕ್ಕೆ ನೀರು ಹರಿದು ಬರುತ್ತದೆ.

ಮೆಟ್ಟಿಲು ಪುಷ್ಕರಣಿಯ ತಳಭಾಗದಲ್ಲಿ ನೀರು ಹೊರ ಹಾಕುವ ವ್ಯವಸ್ಥೆಯು ಇದೆ. ಮಹಾನವಮಿ ದಿಬ್ಬದ ಹತ್ತಿರ ಇರುವ ನಾಲೆಯು ಸಂಪರ್ಕವನ್ನು ಹೊಂದಿದೆ. ಮೆಟ್ಟಿಲು ಪುಷ್ಕರಣಿಯ ಹಿಂದಿರುವ ಸಾರ್ವಜನಿಕ ನೀರಿನ ಕೊಳದಲ್ಲಿ ನೀರನ್ನು ಸಂಪೂರ್ಣವಾಗಿ ಖಾಲಿ ಮಾಡುವ ಹಾಗೆ ತಳದಲ್ಲಿ ತೂಬು ಇದೆ. ಹೀಗೆ ಈ ಪ್ರದೇಶದಲ್ಲಿ ಹೊಸ ನೀರಿನ ಕಾಲುವೆಯು ಹೊಲಸು ನೀರನ್ನು ಹೊರ ಹಾಕುವ ವ್ಯವಸ್ಥೆ ಇದೆ. ಹೊಸಪಟ್ಟಣದಲ್ಲಿ ವ್ಯವಸ್ಥಿತವಾದ ನೀರಿನ ಅನುಕೂಲತೆಯನ್ನು ಹೊಂದಿತ್ತು.[೧೩]

ಈ ಹೊಸಪಟ್ಟಣವು ಮುಂದಿನ ದಿನಗಳಲ್ಲಿ ರಾಜಧಾನಿಪಟ್ಟಣವಾಗಿ ಬೆಳವಣಿಗೆ ಹೊಂದಿತು. ರಾಜಧಾನಿಯಲ್ಲಿ ಅರಮನೆಗಳು, ಪ್ರತಿಷ್ಠಿತರ ಮನೆಗಳು, ಮಾರುಕಟ್ಟೆ ಬೀದಿ, ಕೈಗಾರಿಕಾಘಟಕ ಮತ್ತು ಸಾಮಾನ್ಯ ಜನರ ಮನೆಗಳು ಹೀಗೆ ಮುಂತಾದ ಕಟ್ಟಡಾವಶೇಷಗಳಿವೆ. ಅರಮನೆಯ ಉತ್ತರಕ್ಕಿರುವ ಕಟ್ಟಡಗಳು ಕೈಗಾರಿಕಾ ಘಟಕಗಳಾಗಿವೆ.

ಇಂದು ರಾಜ್ಯ ಪುರಾತತ್ವ ಇಲಾಖೆಯ ಕಟ್ಟಡದ ಎಡಭಾಗದಲ್ಲಿರುವ ಕಟ್ಟಡದ ಅವಶೇಷವನ್ನು ಕೈಗಾರಿಕಾ ಘಟಕ ಪ್ರದೇಶವೆಂದು, ಅಲ್ಲಿ ನಾಣ್ಯಗಳನ್ನು ಅಚ್ಚು ಹಾಕಲಾಗುತ್ತಿತ್ತು ಎಂದು ಗಣಿಸಲಾಗಿದೆ. ಕೈಗಾರಿಕೆಯ ದ್ವಾರದ ಹೊರ ಭಾಗದಲ್ಲಿ ಮತ್ತು ಒಳಭಾಗದಲ್ಲಿ ಕೈ ತೊಳೆಯುವ ಬಚ್ಚಲವಿದೆ. (Wash Basin) ಇಲ್ಲಿ ಬಂಗಾರ ಮತ್ತು ಬೆಳ್ಳಿ ನಾಣ್ಯಗಳನ್ನು ಅಚ್ಚು ಹಾಕಲು ಬರುವ ಕುಶಲಕರ್ಮಿಗಳು ಮೊದಲು ಹೊರ ದ್ವಾರದ ಪಕ್ಕದಲ್ಲಿರುವ ಚಿಕ್ಕ ಬಚ್ಚಲದಲ್ಲಿ (Wash Basin) ಕೈ ತೊಳೆದು ಕೈಗಾರಿಕಾ ಒಳಪ್ರದೇಶಕ್ಕೆ ಹೋಗಬೇಕು. ಕೈಗಾರಿಕಾ ಪ್ರದೇಶದಲ್ಲಿ ಕೆಲಸ ಮುಗಿದ ನಂತರ ಹೊರಬರುವ ವೇಳೆಯಲ್ಲಿ ದ್ವಾರ ಒಳಭಾಗದಲ್ಲಿರುವ ಚಿಕ್ಕ ಬಚ್ಚಲದಲ್ಲಿ ಕೈ ತೊಳೆದು (Wash Basin) ಹೊರ ಹೋಗಬೇಕು. ಏಕೆಂದರೆ ಕೈಗಾರಿಕೆ ಕೆಲಸದಲ್ಲಿ ಬಂಗಾರ ಮತ್ತು ಬೆಳ್ಳಿಯ ಕಣ ಅಥವಾ ಧೂಳು ಅಂಟಿಕೊಂಡಿರುವುದನ್ನು ಸ್ವಚ್ಛಗೊಳಿಸುವ ಸಲುವಾಗಿ ಇಲ್ಲಿ ತೊಳೆಯಬೇಕು ಹಾಗೂ ಆ ತೊಳೆದ ನೀರು ನಾಲೆಯಲ್ಲಿ ಹರಿದು ಒಂದು ಇಂಗು ಗುಂಡಿಯಲ್ಲಿ ಸಂಗ್ರಹವಾಗುವಂತೆ ರೂಪಿಸಲಾಗಿದೆ. ಈ ರೀತಿಯ ಒಂದು ಚಿಕ್ಕ ಗಾರೆಯ ನಾಲೆ ಹಾಗೂ ಗುಂಡಿಯನ್ನು ಉತ್ಖನನದಲ್ಲಿ ಹೊರತೆಗೆಯಲಾಗಿದೆ. ಈ ಪ್ರದೇಶದಲ್ಲಿ ದೊರೆತ ಲೋಹವನ್ನು ಕರಗಿಸುವ ಚಿಕ್ಕ ಚಿಕ್ಕ ಮೂಸೆಗಳು ಮತ್ತು ಕಲ್ಲಿನ ದೊಡ್ಡ ಪೆಟ್ಟಿಗೆ (ಪೆಟಾರಿ) ದೊರಕಿದೆ. ಇದರಲ್ಲಿ ಪ್ರಮುಖವಾದ ವಸ್ತುಗಳು ಹಾಗೂ ಚಿನ್ನ ಮತ್ತು ಬೆಳ್ಳಿಯ ಅಚ್ಚು ಹಾಕಿದ ನಾಣ್ಯಗಳನ್ನು ಸಂಗ್ರಹಿಸುತ್ತಿದ್ದರು. ಇದೇ ನೆಲೆಯಲ್ಲಿ ೪೫೪೮ ಬೆಳ್ಳಿಯ ಅಚ್ಚುಹಾಕಿದ ನಾಣ್ಯಗಳು ದೊರಕಿವೆ.

ನಾಣ್ಯಗಳ ಅಚ್ಚು ಹಾಕುವ ಕಟ್ಟಡಕ್ಕೆ ಹೊಂದಿಕೊಂಡು ಮತ್ತೊಂದು ಕಟ್ಟಡದಲ್ಲಿ ತಾಮ್ರದ ನಾಣ್ಯ, ಟಂಕಸಾಲೆ, ಒಂದೊಂದು ಕಟ್ಟಡಕ್ಕೆ ಹೊಂದಿಕೊಂಡು ವಿವಿಧ ವಸ್ತುಗಳನ್ನು ಉತ್ಪಾದಿಸುವ ಕಟ್ಟಡಗಳಿವೆ. ಕೈಬಳೆಗಳು, ಕವಡೆಗಳ, ಅಕ್ಷರ ಬರೆಯುವ ಬಳಪದಕಲ್ಲು, ಕಬ್ಬಿಣದ ಮೊಳೆಗಳು ಹಾಗೂ ಕಬ್ಬಿಣದ ವಸ್ತುಗಳನ್ನು ತಯಾರಿಸುವ ಕೈಗಾರಿಕೆ ಘಟಕಗಳಿವೆ. ಅದೇ ರೀತಿ ಪಿಂಗಾಣಿ ವಸ್ತುಗಳನ್ನು ತಯಾರಿಸುವ ಘಟಕಗಳಿವೆ. ಸಾಮಾನ್ಯವಾಗಿ ಎಲ್ಲಾ ಕೈಗಾರಿಕೆ ಘಟಕಗಳ ಕೈ ಬಳೆಗಳು ಮತ್ತು ಅಕ್ಷರ ಬರೆಯುವ ಬಳಪದ ಕಲ್ಲುಗಳನ್ನು ರೂಪಿಸುತ್ತಿದ್ದರು.

ಎಲ್ಲಾ ಕೈಗಾರಿಕಾ ಘಟಕದ ಕಟ್ಟಡದಲ್ಲಿ ಬಾವಿಯು ಸಾಮಾನ್ಯವಾಗಿದೆ. ಆರಂಭದಲ್ಲಿ ನಡೆಸಲಾದ ಉತ್ಖನನಗಳಲ್ಲಿ ದೊರೆತ ಆಧಾರಗಳಿಂದ ಉತ್ಖನನಕಾರರುಗಳು ಇದನ್ನು ಪ್ರಮುಖರ ಮನೆ ಎಂದು ಹೆಸರಿಸಲಾಗಿತ್ತು. ಈ ಪ್ರದೇಶಗಳಲ್ಲಿ ನಡೆಸಲಾದ ಉತ್ಖನನದಲ್ಲಿ ದೊರೆತ ವಸ್ತುಗಳ ಅಧ್ಯಯನದಿಂದ ಇಲ್ಲಿರುವ ಕಟ್ಟಡಾವಶೇಷಗಳು ಕೈಗಾರಿಕ ಘಟಕಗಳೆಂದು ಹಾಗೂ ಅವರ ೧೯೯೧-೨೦೧೦ರ ಉತ್ಖನನ ವರದಿಯ ಮೂಲಕ ಪ್ರಸ್ತುತಪಡಿಸಿದ್ದಾರೆ.[೧೪] ವಿದೇಶಿ ಪ್ರವಾಸಿಗರು ಇಲ್ಲಿ ಟಂಕಸಾಲೆ ಇದ್ದ ಮಾಹಿತಿ ನೀಡಿರುತ್ತಾರೆ. ಅಬ್ದುಲ್ ರಜಾಕ್‌ನು ತಾನು ನೋಡಿದ ಟಂಕಸಾಲೆಯ  ಅರಮನೆಯ ಉತ್ತರಕ್ಕೆ ಇತ್ತೆಂದು ದಾಖಲಿಸಿದ್ದಾನೆ.[೧೫]

ಡೊಮಿಂಗೊಸ್ ಪಯಾಸ್ ತನ್ನ ಪ್ರವಾಸ ಕಥಾನದಲ್ಲಿ "ರಾಜರ ಅರಮನೆಗಳು, ಉತ್ಕೃಷ್ಟರ ಮನೆಗಳ ಸಾಲು ಹಾಗೂ ಓಣಿಗಳುಳ್ಳ ವಿಶಾಲ ಸುಂದರ ಬೀದಿಯಿದೆ. ಈ ಬೀದಿಯಲ್ಲಿ ವರ್ತಕರಿದ್ದು ಅಲ್ಲಿ ಎಲ್ಲ ತರಹದ ಮಾಣಿಕ್ಯ ಮತ್ತು ವಜ್ರಗಳು, ಮುಂತಾದ ಬೆಲೆಯುಳ್ಳ ವಸ್ತುಗಳ ಬೀದಿಯ ಹೆಬ್ಬಾಗಿಲನ್ನು ದಾಟಿದರೆ ಅನೇಕ ಕುಶಲಕರ್ಮಿಗಳಿರುವ ಇನ್ನೊಂದು ಬೀದಿಯಿದೆ" ಎಂದು ದಾಖಲಿಸಿರುವನು.[೧೬] ಅವನು ಮುಂದುವರಿದು "ರಾಜರ ಅರಮನೆಗಳು ಒಂದೇ ಅಂತಸ್ತಿನವಿದ್ದು ಅವುಗಳಿಗೆ ಸ್ತಂಭಗಳಿವೆ. ಸಮತಲ ಮಾಳಿಗೆ ಪೂರ್ತಿ ಅನಾವೃತ್ತವಾಗಿರುವ ಅವುಗಳಲ್ಲಿ ಒಳಗೂ ಹೊರಗೂ ಮೊಗಸಾಲೆಗಳಿವೆ. ಪ್ರತಿಯೊಂದು ಮನೆಗೂ ಪ್ರತ್ಯೇಕವಾಗಿರುವ ತೋಟಗಳಿವೆ".[೧೭] ತೋಟಗಳಲ್ಲಿ ಅನೇಕ ಗಿಡಗಳಿವೆ ಮತ್ತು ಅದರ ಮಧ್ಯ ಹರಿಯುವ ನೀರಿನ ನಾಲೆಗಳಿವೆ ಎಂದು ವಿವರಿಸಿರುವನು.[೧೮]

ರಾಜನ ಅರಮನೆಯ ಹಿಂದೆ ಡಣಾಯಕನಿಗೆ ಕೊಡಲಾದ ಮನೆ ಮತ್ತು ಸಭಾಂಗಣಗಳಿವೆ. ಆ ಅರಮನೆಯ ಉತ್ತರಕ್ಕೆ ಟಂಕಸಾಲೆಯಿದೆ. ಟಂಕಸಾಲೆಯ ಎದುರಿಗೆ ಮಂಡಲಾಧಿಪತಿಯ ಅರಮನೆಯಿದೆ. ಟಂಕಸಾಲೆಯ ಹಿಂದೆ ಒಂದು ತರಹದ ಪೇಟೆಯಿದೆ. ಅದು ಮುನ್ನೂರು ಗಜಕ್ಕಿಂತ ಹೆಚ್ಚು ಉದ್ದ, ಇಪ್ಪತ್ತಕಿಂತ ಹೆಚ್ಚು ಅಗಲವಿದೆ. ಎರಡೂ ಬೀದಿಗಳಲ್ಲಿ ಮನೆಗಳು ಮತ್ತು ಅಂಗಡಿಗಳು ಸಾಲುಗಟ್ಟಿವೆ. ಮುಂದೆ ಬೆಂಚು (ಕುರ್ಸಿ)ಗಳ ಬದಲು ಸುಂದರ ಕಲ್ಲುಗಳಿಂದ ಕಟ್ಟಿದ ಉನ್ನತ ಆಸನಗಳಿವೆ.[೧೯] ಈ ರೀತಿ ಅರಮನೆ ಭಾಗಗಳನ್ನು ಉಲ್ಲೇಖಿಸಿದ್ದಾನೆ.

ರಾಜಧಾನಿಯಲ್ಲಿ ಮಾರುಕಟ್ಟೆ ಪ್ರದೇಶಗಳನ್ನು ಗುರುತಿಸಲಾಗಿದೆ. ರಾಮಚಂದ್ರ ದೇವಾಲಯದ ಮುಂಭಾಗದ ಬೀದಿಯು ಪಟ್ಟಣದ ಎಲ್ಲಮ್ಮ ದೇವಾಲಯದ ಭಾಗದವರೆಗೆ ಪಟ್ಟಣದ ಕೇಂದ್ರ ಭಾಗ ಹಜಾರರಾಮ ದೇವಾಲಯದಿಂದ ಸಾಗುವ ರಸ್ತೆಯು ಮುಂದೆ ರಂಗಾ ದೇವಾಲಯವನ್ನು ಸೇರುತ್ತದೆ. ಇದನ್ನು ಪೆದ್ದಅಂಗಡಿ ಬೀದಿ ಅಥವಾ ದೊಡ್ಡಪೇಟೆ ಎಂದು

ಶಾಸನದಲ್ಲಿ ಕರೆಯಲಾಗಿದೆ. ಕ್ರಿ.ಶ. ೧೫೪೦ರ ಶಾಸನದ ಪ್ರಕಾರ ಸದಾಶಿವರಾಯನ ಕಾಲದ ಮಹಾಮಂಡಳೇಶ್ವರ ತಿಮ್ಮರಾಜ ಪೆದ್ದಅಂಗಡಿ ಬೀದಿಯಲ್ಲಿರುವ ಮಾಧವ ದೇವಾಲಯಕ್ಕೆ ರಂಗಮಂಟಪವನ್ನು ಕಟ್ಟಿಸುತ್ತಾನೆ.

ಮುಂದೆ ಈ ರಸ್ತೆಯು ವಿಷ್ಣು ದೇವಾಲಯದಿಂದ ಕೃಷ್ಣ ದೇವಾಲಯವರೆಗೆ "ಪಾನ್ ಸುಪಾರಿ ಬಜಾರ್" ಹಜಾರರಾಮ ದೇವಾಲಯದಿಂದ ಮುಂದೆ ಕೃಷ್ಣ ದೇವಾಲಯವರೆಗೆ ಹರಡಿಕೊಂಡಿದೆ. ಶಾಸನದ ಪ್ರಕಾರ ರಂಗ ದೇವಾಲಯದ ಮುಂದಿನ ಪೆದ್ದಅಂಗಡಿ ಬೀದಿಯ ಒಂದು ಭಾಗವೇ "ಪಾನ್ ಸುಪಾರಿ ಬೀದಿ". ಮತ್ತೊಂದು ಭಾಗದ ಬೀದಿಯು ಜೈನ್ ದೇವಾಲಯದಿಂದ ವಿಷ್ಣು ದೇವಾಲಯದವರೆಗೆ ಸಾಗುತ್ತದೆ. ಪಾರ್ಶ್ವನಾಥ ಬಸದಿಯ ಉತ್ತರ ಭಾಗದ ಗೋಡೆಯಲ್ಲಿರುವ ಎರಡನೇ ದೇವರಾಯನ ಕ್ರಿ.ಶ. ೧೪೨೬ರಲ್ಲಿ ಹೊರಡಿಸಿದ ಶಾಸನದಲ್ಲಿ ಇದರ ಮಾಹಿಯು ನಮಗೆ ದೊರೆತಿದೆ. ಪಾನ್‌ಸುಪಾರಿ ಬಜಾರದಿಂದ ಪ್ರಾರಂಭವಾಗುವ ಬೀದಿಯು ಮುಂದೆ ಎರಡು ಬೆಟ್ಟಗಳ ಮಧ್ಯ ಸಾಗಿ ತಳಾರಘಟ್ಟದ ತುಂಗಭದ್ರಾ ನದಿಯನ್ನು ದಾಟಿ ಮುಂದೆ ಸಾಗಿದೆ. ಎರಡನೇ ದೇವರಾಯನ ಕಾಲದಲ್ಲಿ ಭೇಟಿ ನೀಡಿದ ವಿದೇಶಿ ಪ್ರವಾಸಿಗರಾದ ಅಬ್ದುಲ್ ರಜಾಕ್‌ನು ನೀಡುವ ಮಾಹಿತಿಯಂತೆ ಉತ್ತರ ಭಾಗದಲ್ಲಿ ರಾಜರ ಅರಮನೆಗಳಿದ್ದವು. ಅದರ ಮುಂಭಾಗದಲ್ಲಿ ನಾಲ್ಕು ಬಜಾರಗಳ ಬೀದಿಗಳಿದ್ದವು. ಸಿವೆಲ್ ಅವರು ಪಾನ್‌ಸುಪಾರಿ ಬೀದಿಯು ಮುಂದೆ ವಿಷ್ಣು ದೇವಾಲಯದವರೆಗೆ ಸಾಗಿ ಕೋಟೆಬಾಗಿಲು ಮತ್ತೆ ಮುಂದೆ ಕೃಷ್ಣ ದೇವಾಲಯವರೆಗೆ ತಲುಪುತ್ತದೆ. ಅದಕ್ಕೆ ರಾಜ ಬೀದಿ ಎಂದು ರಜಾಕ್ ವಿವರಿಸಿದ್ದಾರೆ.[೨೦] ಅದೇ ರೀತಿ ಪಟ್ಟಣದಲ್ಲಿ ಹರಡಿಕೊಂಡಿರುವ ರಸ್ತೆಗಳನ್ನು ಮುಖ್ಯ ರಸ್ತೆ, ವರ್ತುಲ ರಸ್ತೆ ಮತ್ತು ಕಿರು ರಸ್ತೆಯೆಂದು ವಿಂಗಡಿಸಲಾಗಿದೆ.[೨೧]

ವಿಜಯನಗರಪಟ್ಟಣದಲ್ಲಿ ಎಲ್ಲಾ ರೀತಿಯ ಸವಲತ್ತುಗಳು ಇದ್ದವು. ರಾಜಧಾನಿಪಟ್ಟಣಕ್ಕೆ ಹೊಂದಿಕೊಂಡು ನಿಂಬಾಪುರ, ಕಡ್ಡಿರಾಮಪುರ, ಕಮಲಾಪುರ, ಮುಂತಾದ ಪುರಗಳನ್ನು ಹೊಂದಿಕೊಂಡು ಮಾರುಕಟ್ಟೆಗಳನ್ನು ಕಟ್ಟಲಾಗಿದೆ. ಒಂದೊಂದು ಪುರದಲ್ಲಿ ವಾರದಲ್ಲಿ ಒಂದೊಂದು ದಿನ ಸಂತೆಯಿರುತ್ತಿತ್ತು.[೨೨] ಪುರಗಳ ನಿರ್ಮಾಣದೊಂದಿಗೆ ಮಾರುಕಟ್ಟೆಗಳು ಸಹ ನಿರ್ಮಾಣವಾದವು.

ಉದಾಹರಣೆಗೆ ಪ್ರೌಢದೇವರಾಯನ ಕಾಲದಲ್ಲಿ ವಿರುಪಾಕ್ಷಪುರ, ಪಂಪಾರಥಬೀದಿ, ಹಂಪಿ ಬಜಾರ್ ಇತ್ತೆಂದು ಪ್ರೌಢದೇವರಾಯನು ಈ ಬೀದಿಯಲ್ಲಿದ್ದ ಕಲ್ಲು ಮುಳ್ಳುಗಳನ್ನು ತೆಗೆದು ಸ್ವಚ್ಛಗೊಳಿಸಿದನು ಎಂದು ಲಕ್ಕಣ್ಣದಂಡೇಶನು "ಶಿವತತ್ವ ಚಿಂತಾಮಣಿ"ಯಲ್ಲಿ

ಉಲ್ಲೇಖಿಸುತ್ತಾನೆ.[೨೩] ರಾಜಧಾನಿಪಟ್ಟಣದಲ್ಲಿ ಪ್ರೌಢದೇವರಾಯ ಕ್ರಿ.ಶ. ೧೪೨೯ರಲ್ಲಿ "ಪಾನ್ ಸುಪಾರಿ" ಬಜಾರ್ ನಿರ್ಮಾಣ ಮಾಡಿದನು.[೨೪] ರಾಜಧಾನಿಪಟ್ಟಣವು ಒಂದನೇ ಸುತ್ತಿನ ಕೋಟೆ ಗೋಡೆಗೆ ಸೇರಿದೆ. ಎರಡನೇ ಸುತ್ತಿನ ಕೋಟೆಯಲ್ಲಿ ಭೀಮನ ಬಾಗಿಲು ಇದೆ.[೨೫]

ಕ್ರಿ.ಶ. ೧೫೪೫ರ ಶಾಸನದ ಉಲ್ಲೇಖದಂತೆ ಎರಡನೇ ಸುತ್ತಿನ ಕೋಟೆಯಲ್ಲಿ ಕೃಷ್ಣದೇವರಾಯನು ರಾಜಧಾನಿಪಟ್ಟಣಕ್ಕೆ ಹತ್ತಿರ ಹಿರಿಯ ಕಾಲುವೆ ಛತ್ರ ಮತ್ತು ಕೃಷ್ಣಾಪುರವನ್ನು ನಿರ್ಮಿಸಿದನು. ಈ ಪುರದಲ್ಲಿ ಉದಯಗಿರಿಯಿಂದ ಗೆದ್ದು ತಂದ ಬಾಲಕೃಷ್ಣ ವಿಗ್ರಹವನ್ನು ದೇವಾಲಯವನ್ನು ಕಟ್ಟಿ ಪ್ರತಿಷ್ಠಾಪಿಸಿದ. ಅದರ ಮುಂಭಾಗದಲ್ಲಿ ಮಾರುಕಟ್ಟೆಯನ್ನು ನಿರ್ಮಿಸಿದನು. ಮಾರುಕಟ್ಟಗೆ ಬರುವ ಎಲ್ಲಾ ಜನರ ಉಪಯೋಗಕ್ಕೆ ಕಾಲುವೆ ಬಳಿ ಛತ್ರವನ್ನು ನಿರ್ಮಿಸಿರುವನು.[೨೬] ಅಚ್ಯುತರಾಯನು ತಿರುವೇಂಗಳನಾಥ ದೇವಾಲಯದ ಮುಂಭಾಗದಲ್ಲಿ ಅಚ್ಯುತಪೇಟೆಯನ್ನು ಕಟ್ಟಿಸಿದ. ಈ ಪೇಟೆಯ ಉದ್ದ ಸುಮಾರು ಒಂದು ಕಿಲೋಮೀಟರ್, ಅಗಲ ೩೭ ಮೀಟರ್ ಇದೆ. ತೇರುಬೀದಿಯ ಇಕ್ಕೆಲಗಳಲ್ಲಿರುವ ಮಂಟಪಗಳನ್ನು ಎತ್ತರದ ಜಗಲಿಯ ಮೇಲೆ ಕಟ್ಟಿದ್ದಾರೆ. ಪುರಂದರದಾಸರು ಒಂದು ಹಾಡಿನಲ್ಲಿ "ರಾಮಟಂಕಿ" ಕೊಳ್ಳಲು ಅಚ್ಯುತಾಪೇಟೆಗೆ ಬನ್ನಿರಿ ಎಂಬ ಸಾಲಿದೆ. ದಾಸರು ಈ ಪೇಟೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಹಾಡಿದ್ದಿರಬೇಕು. ತಿರುವೇಂಗಳನಾಥನ ಉತ್ಸವದಲ್ಲಿ ತೇರನ್ನು ಎಳೆಯುತ್ತಿದ್ದರು. ಉತ್ತರದ ಮುಖ್ಯ ಗೋಪುರದ ಮುಂಭಾಗದ ಪಕ್ಕದಲ್ಲಿ ಎರಡು ಎತ್ತರ ಜಗಲಿಗಳಿವೆ. ಅಂದರೆ ಈ ತೇರು ಎತ್ತರವಾಗಿತ್ತು ರಾಜ ಅಥವಾ ಪ್ರತಿಷ್ಠಿತರು ಈ ಜಗಲಿಯ ಮೇಲೆ ನಿಂತು ನೋಡುತ್ತಿದ್ದರು. ಚೋರಮನೂರು ಎಂದು ಮೊದಲು ಈ ಪ್ರದೇಶದ ಹೆಸರು. ನಂತರ ತಿರುವೇಂಗಳನಾಥನ ದೇವಾಲಯ ನಿರ್ಮಿಸಿದಾಗಿನಿಂದ ಅಚ್ಯುತಾಪುರ ಎಂಬ ಹೆಸರು ಚಾಲ್ತಿಗೆ ಬಂದಿತು.[೨೭] ವಿಶೇಷವಾಗಿ ಮತ್ತೊಂದು ಪುರವಾದ ಕಮಲಾಪುರವು ವಿಜಯನಗರ ಕಾಲದಿಂದ ಇಂದಿನವರೆಗೂ ಜನವಸತಿಯ ಪ್ರದೇಶವಾಗಿ ಬೆಳವಣಿಗೆ ಹೊಂದಿ ಮುಂದುವರಿದುಕೊಂಡು ಬಂದಿದೆ.

ಕಮಲಾಪುರದಲ್ಲಿ ಅನೇಕ ಬಡಾವಣೆಗಳಿವೆ. ಅವುಗಳಲ್ಲಿ ನಾಯಕರ ಕೇರಿಗಳು ಪೂರ್ವ-ಪಶ್ಚಿಮವಾಗಿ ಬೆಳೆದಿವೆ. ಚೌಡಕೇರಿ, ಮನ್ಮತ್ಕೇರಿ, ಹೀರೆಕೇರಿ, ಬಂಡೆಕೇರಿ, ತಿನ್ಮತ್‌ಕೇರಿ, ಗೌನಲ್‌ಕೇರಿ ಮತ್ತು ಪಾಮಳಕೇರಿ ಈ ಏಳು ಕೇರಿಗಳಲ್ಲಿ ಆರು ಕೇರಿಗಳು ಇಂದಿಗೂ ಉಳಿದುಕೊಂಡಿವೆ. ಆದರೆ ಪಾಮಳಕೇರಿಯನ್ನು ಬೇರೆ ಕೇರಿಯಲ್ಲಿ ಸೇರಿಸಿಕೊಂಡು ಆ ಹೆಸರಿನಿಂದ ಇಂದು ಕರೆಯುವುದಿಲ್ಲ. ಶಾಸನದಲ್ಲಿ ದೊರೆತ ಆಧಾರಗಳಂತೆ ಕುಂಮರಗುಟೆ, ಬೆಸ್ತರ ಓಣಿಯ ಮಾಹಿತಿಯು ದೊರೆತಿದೆ. ಶಾಸನದಲ್ಲಿ ಮೀನವಗುಂದಿ[೨೮] ಎಂದು

ಉಲ್ಲೇಖವಾದ ಪ್ರದೇಶವನ್ನು (ಓಣಿ) ನಾವು ಇಂದಿಗೂ ಕಾಣಬಹುದು. ಕಮ್ಮಾರದಿಮ್ಮಿ ಎಂದು ಕರೆಯುವ ಪ್ರದೇಶದಲ್ಲಿ ಬಡಿಗೇರ, ಕಮ್ಮಾರ, ಅಕ್ಕಸಾಲಿಗ, ಶಿಲ್ಪಿಗ ಮತ್ತು ಕಂಚುಗಾರ ಜನಾಂಗದವರು ಇರುವರು. ಈ ಪ್ರದೇಶವು ಇಂದಿಗೂ ಅದೇ ರೀತಿ ಉಳಿದುಕೊಂಡು ಬಂದಿದೆ. ಆದರೆ ಇಂದು ಕಮಲಾಪುರದಲ್ಲಿ ಕಂಚುಗಾರರ ಜನಾಂಗದರು ಇಲ್ಲ. ಹೀಗೆ ವಿವಿಧ ರೀತಿಯ ಬಡಾವಣೆಗಳನ್ನು ನಾವು ನೋಡುತ್ತೇವೆ.

ಕಮಲಾಪುರದಲ್ಲಿ ಅಹಮದ್‌ಖಾನ್‌ನು ಪ್ರವಾಸಿಗರಿಗೆ ಮತ್ತು ವ್ಯಾಪಾರಿಗಳ ಅನುಕೂಲಕ್ಕೆ ಅವರ ತಂಗುವುದಕ್ಕೆ ಛತ್ರವನ್ನು ನಿರ್ಮಿಸಿದ್ದನು. ಇಲ್ಲಿ ಬಂದ ಜನರಿಗೆ ಊಟ ಮತ್ತು ವಸತಿ ವ್ಯವಸ್ಥೆಯನ್ನು ಕಲ್ಪಿಸಿಕೊಡಲಾಗುತ್ತಿತ್ತು.[೨೯] ಅದೇ ರೀತಿ ಹಂಪಿಯ ಕೃಷ್ಣಾ ದೇವಾಲಯದ ಈಶಾನ್ಯಕ್ಕೆ ಅರ್ಧ ಕಿಲೋಮಿಟರ್ ದೂರದಲ್ಲಿ ಅಹಮದ್ ಖಾನ್‌ನು ಧರ್ಮಶಾಲೆಯನ್ನು ಕಟ್ಟಿಸಿದನು. ಚಿಕ್ಕ ಕಂಬಗಳ ಕಟ್ಟಡವು ಪೂರ್ವಕ್ಕೆ ಮುಖ ಮಾಡಿಕೊಂಡಿದೆ.[೩೦]

ಕ್ರಿ.ಶ. ೧೩೭೭–೧೪೦೪ರಲ್ಲಿ ಆಳುತ್ತಿದ್ದ ಮೂರನೇ ಹರಿಹರನು ತನ್ನ ಕಾಲದಲ್ಲಿ ಕೋಟೆಶಂಕರ ದೇವರಬಾಗಿಲು, ಜಡೆಯ ಶಂಕರ ದೇವರದಿಡ್ಡಿ, ಹಂಪಾದೇವಿಯ ದಿಡ್ಡಿ, ಹೊದೆಯ ಬಾಗಿಲು, ಅರೆಶಂಕರ ಬಾಗಿಲು, ರೆಮ್ಮ ದಿಡ್ಡಿ, ಉದಯಗಿರಿಯ ಬಾಗಿಲು, ಬೇಟೆಗಾರರ ಬಾಗಿಲು, ಗುಮ್ಮಟ ಬಾಗಿಲಗಳನ್ನು ಮೂರನೇ ಸುತ್ತಿನ ಕೋಟೆಯ ಒಳಗೆ ನಿರ್ಮಿಸಿದನು.[೩೧] ಎರಡನೇ ಹರಿಹರನ ಕಾಲದಲ್ಲಿ ವಿಠಲಾಪುರ ನಿರ್ಮಾಣವಾಗಿದೆ. ವಿಠಲ ಬಜಾರಕ್ಕೆ ಸರಕು ಸಾಮಗ್ರಿಗಳನ್ನು ಬೇರೆ ಬೇರೆ ಕಡೆಯಿಂದ ತರಲಾಗುತ್ತಿತ್ತು. ಅದಕ್ಕಾಗಿ ಬಜಾರದ ವಾಯವ್ಯಕ್ಕೆ ತುಂಗಭದ್ರಾ ನದಿಯಲ್ಲಿ ಕಲ್ಲು ಕಂಬದ ಸೇತುವೆಯನ್ನು ಎರಡನೇ ಹರಿಹರನ ಸಹೋದರ ಕಂಪಭೂಪನು ಕಟ್ಟಿಸಿದನು. ಉತ್ತರ ದಿಕ್ಕಿನ ಪ್ರದೇಶಗಳಿಗೆ ನೇರ ಸಂಪರ್ಕವನ್ನು ಕಲ್ಪಿಸುವುದರೊಡನೆ ವಿಠಲ ಬಜಾರು ಹಾಗೂ ಹಂಪೆಯ ಇತರ ಬಜಾರುಗಳಿಗೆ ಸರಕು ಸಾಮಗ್ರಿಗಳ ಸಾಗಾಣಿಕೆಗಾಗಿ ನಿರ್ಮಿಸಲಾಗಿದೆ. ಮಹಾನವಮಿ, ಮಕರಸಂಕ್ರಾಂತಿ, ಗೋಕುಲಾಷ್ಟಮಿ ಹಬ್ಬದಂದು ಈ ಬಜಾರ್‌ನ ಬೀದಿಯಲ್ಲಿ ವಿಠಲದೇವರ ರಥೋತ್ಸವ ನಡೆಯುತ್ತಿತ್ತು. ಕ್ರಿ.ಶ. ೧೫೧೩ರ ಶಾಸನದಲ್ಲಿ ಉಲ್ಲೇಖವಾಗಿರುವ ಹಾಗೆ ಕೃಷ್ಣದೇವರಾಯನ ಪಟ್ಟದರಸಿಯರಾದ ತಿರುಮಲಾದೇವಿ ಮತ್ತು ಚಿನ್ನಾದೇವಿ ಈ ದೇವಾಲಯಕ್ಕೆ ಮೂರು ಗೋಪುರಗಳನ್ನು ಕಟ್ಟಿಸಿದರು.[೩೨]

ಮತ್ತೊಂದು ವಿಶೇಷವಾದ ಉಪನಗರವೆಂದರೆ ಅದು ವೆಂಕಟಾಪುರ. ಇಲ್ಲಿ ನಡೆಸಿದ ಉತ್ಖನನದಲ್ಲಿ ಕೃಷಿಗೆ ಸಂಬಂಧಿಸಿದ ಅವಶೇಷಗಳು ದೊರೆತಿವೆ. ಅದರನ್ವಯ ಇಲ್ಲಿ ಹೆಚ್ಚು

ವ್ಯವಸಾಯ ಮಾಡುವ ಜನರು ಇಲ್ಲಿ ವಾಸವಾಗಿದ್ದರು. ಸಾಕು ಪ್ರಾಣಿಗಳಾದ ಎತ್ತು, ಹಸು, ಎಮ್ಮೆ, ಕುರಿ, ಮೇಕೆ, ಇತ್ಯಾದಿ ವ್ಯವಸಾಯಕ್ಕೆ ಉಪಯೋಗಿಸುವ ಪ್ರಾಣಿಗಳನ್ನು ಸಾಕುತ್ತಿದ್ದರು. ಇಂದಿಗೂ ಸಹ ಹೆಚ್ಚಾಗಿ ವ್ಯವಸಾಯ ಮಾಡುವ ಜನರು ಇಲ್ಲಿ ವಾಸವಾಗಿದ್ದಾರೆ.[೩೩]

ಕ್ರಿ.ಶ. ೧೫೪೦ರ ಶಾಸನದ ಉಲ್ಲೇಖದಂತೆ ಅಚ್ಯುತರಾಯನ ಪೆನಗೊಂಡೆ ಬಾಗಿಲು ಅಥವಾ ನಾಲ್ಕನೇ ಸುತ್ತಿನ ಕೋಟೆಯನ್ನು ಕಟ್ಟಿಸಿದನು.[೩೪] ಈ ಕೋಟೆಯಲ್ಲಿ ಅಚ್ಯುತರಾಯನು ತನ್ನ ರಾಣಿಯಾದ ವರದಾದೇವಿಯ ಹೆಸರಿನಲ್ಲಿ ಪಟ್ಟಣವನ್ನು ನಿರ್ಮಿಸಿದನು. ಈ ಪಟ್ಟಣವು ಕಮಲಾಪುರ ಬಳಿಯಿರುವ ಪಟ್ಟಾಭಿರಾಯ ದೇವಾಲಯ ಪ್ರದೇಶವಾಗಿದೆ. ಅದರ ಮುಂಭಾಗದ ಪ್ರದೇಶವನ್ನು ವರದಾದೇವಿಅಮ್ಮನವರ ಪಟ್ಟಣವೆಂದು ಕರೆಯುವರು. ರಘುನಾಥ ದೇವಾಲಯದ ಪೂರ್ವ ಗೋಪುರದ ಮುಂದೆ ಸಾಗಿದರೆ ವರದರಾಜಮ್ಮನಪಟ್ಟಣವನ್ನು ನಿರ್ಮಿಸಲಾಗಿದೆ. ಪಟ್ಟಣದಲ್ಲಿ ಒಂದು ದೇವಾಲಯ, ಅದರ ಮುಂಭಾಗದಲ್ಲಿ ವ್ಯಾಪಾರ ಮಳಿಗೆಗಳ ಮಂಟಪಗಳನ್ನು ಕಟ್ಟಲಾಗಿತ್ತು. ಇಂದು ಎಲ್ಲಾ ಮಂಟಪಗಳ ನಾಶವಾಗಿ ಹೊಸ ಮನೆಗಳನ್ನು ನಿರ್ಮಿಸಲಾಗಿದೆ.[೩೫]

ನಾಲ್ಕು–ಐದು ಸುತ್ತಿನ ಕೋಟೆಯ ಮಧ್ಯದಲ್ಲಿ ಒಂದನೇ ದೇವರಾಯನ ಕಾಲದಲ್ಲಿ ಬುಳ್ಳನಾಯಕನ ಮಗ ಹೆಗ್ಗಡೆ ಸೋಮಣ್ಣನು ಮಾಳಿಗೆ–ಕೂಪ–ಆರಾಮ ಎನ್ನುವ ಬಾವಿ ಮತ್ತು ಅರವಟ್ಟಿಗೆಯನ್ನು ಕಟ್ಟಿಸಿದನು. ಇದು ಒಂದು ತಂಗುದಾಣವಾಗಿದೆ. ಈ ತುಂಗುದಾಣವನ್ನು ಎರಡು ಕಣಿವೆಗಳ ನಡುವೆ ನಿರ್ಮಿಸಲಾಗಿದೆ. ವಿಜಯನಗರಕ್ಕೆ ಹೊರಗಿನಿಂದ ಬರುವ ಪ್ರವಾಸಿಗರಿಗೆ ಮತ್ತು ವ್ಯಾಪಾರಿಗಳಿಗಾಗಿ ತನಿಖಾ ಕೇಂದ್ರ ಹಾಗೂ ತಂಗುದಾಣವನ್ನು ನಿರ್ಮಿಸಲಾಗಿದೆ.[೩೬]

ಐದನೇ ಸುತ್ತಿನ ಕೋಟೆಯ ಒಳಗೆ ಕೃಷ್ಣದೇವರಾಯನು ತನ್ನ ತಾಯಿಯ ಹೆಸರಿನಲ್ಲಿ ನಾಗಲಾಪುರವನ್ನು ನಿರ್ಮಿಸುತ್ತಾನೆ ಅದನ್ನು ಇಂದು ನಾಗೇನಹಳ್ಳಿ ಎಂದು ಕರೆಯುತ್ತಾರೆ.[೩೭] ನಂತರ ಕೃಷ್ಣದೇವರಾಯನು ತನ್ನ ರಾಣಿ ತಿರುಮಲಾದೇವಿಯ ಹೆಸರಿನಲ್ಲಿ ತಿರುಮಲಾದೇವಿಪಟ್ಟಣವನ್ನು ನಿರ್ಮಾಣ ಮಾಡಿದ.[೩೮] ಹಾಗೆಯೇ ತನ್ನ ಮಗನ ಹೆಸರಿನಲ್ಲಿ ಸಾಲೆ–ತಿರುಮಲಮಹಾರಾಯ ಪುರಂ ಎಂಬ ಪುರವನ್ನು ನಿರ್ಮಿಸಿ ಅಲ್ಲಿ ಅನಂತಶಯನ ದೇವಾಲಯವನ್ನು ಕಟ್ಟಿಸುತ್ತಾನೆ. ಈ ಉಲ್ಲೇಖವು ಕ್ರಿ.ಶ. ೧೫೨೪ರ ಶಾಸನದಲ್ಲಿ ದಾಖಲಾಗಿದೆ.[೩೯] ಈ ಎಲ್ಲಾ ಪುರಗಳು ಐದನೇ ಸುತ್ತಿನ ಕೋಟೆಯಲ್ಲಿದೆ.

ಆರನೇ ಸುತ್ತಿನ ಕೋಟೆಯಲ್ಲಿ ಕೃಷ್ಣದೇವರಾಯ ತನ್ನ ಇನ್ನೋರ್ವ ರಾಣಿಯಾದ ಪಟ್ಟದರಸಿಯಾದ ಚಿನ್ನಾದೇವಿಯ ಹೆಸರಿನಲ್ಲಿ ಚಿನ್ನಾದೇವಿವಾಡ ಎನ್ನುವ ಪುರವನ್ನು ನಿರ್ಮಿಸಿದ. ಇದನ್ನು ಶಾಸನದಲ್ಲಿ ಚಿಕ್ಕವಾಡಿ ಎಂದು ಕರೆಯಲಾಗಿದೆ. ನಂತರ ಜನರ ಉಚ್ಚಾರಣೆಯಲ್ಲಿ ಚಿನ್ನದೇವಿವಾಡ, ಚಿಕ್ಕದೇವಿವಾಡ, ಚಿಕ್ಕವಾಡ ಇತ್ಯಾದಿಯಾಗಿ ಕರೆಸಿಕೊಂಡು ಇಂದು ಚಿತ್ತವಾಡಗಿಯಾಗಿದೆ. ಇದು ಇಂದು ಹೊಸಪೇಟೆಯ ಒಂದು ಬಡಾವಣೆಯಾಗಿ ಬೆಳೆದುಕೊಂಡಿದೆ.[೪೦]

ವಿಜಯನಗರದ ರಾಜಧಾನಿಪಟ್ಟಣವು ಒಟ್ಟು ಏಳು ಸುತ್ತಿನ ಕೋಟೆಗೋಡೆಯಿಂದ ಸುತ್ತುವರೆದಿತ್ತು. ಆದರೆ ಇಂದು ಯಾವುದೇ ಸುತ್ತಿನ ಕೋಟೆಗೋಡೆ ಸಂಪೂರ್ಣವಾಗಿ ದೊರೆಯುವುದಿಲ್ಲ. ಕೇವಲ ಅಲ್ಪ ಪ್ರಮಾಣದಲ್ಲಿ ಅವಶೇಷಗಳಾಗಿ ಮಾತ್ರ ಕಾಣಬಹುದಾಗಿದೆ. ಎಲ್ಲಾ ಪುರಗಳು ಮತ್ತು ಕೋಟೆಗಳು ಆಯಾ ರಾಜರ ಆಳ್ವಿಕೆಯ ಕಾಲಘಟ್ಟದಲ್ಲಿ ಬೆಳೆದುಬಂದಿವೆ. ಹಂಪಿ ಪರಿಸರದಲ್ಲಿ ಪ್ರಾಗಿತಿಹಾಸಿಕ ಕಾಲದಿಂದ ವಿಜಯನಗರ ಕಾಲದವರೆಗೆ ವಸತಿನೆಲೆಗಳು ಬೆಳೆಯಲು ಮೊದಲು ಈ ಪ್ರದೇಶದಲ್ಲಿ ದೊರೆಯುವ ನೀರಿನ ಸೌಕರ್ಯ ಮತ್ತು ಕಡಿದಾದ ಬೆಟ್ಟಗಳ ಸಾಲುಗಳಿಂದ ಪ್ರಾಗಿತಿಹಾಸ ಕಾಲದ ನೆಲೆಗಳು ಬೆಟ್ಟಗಳಲ್ಲಿ ದೊರೆತಿವೆ. ಹೀಗೆ ಬೆಟ್ಟವನ್ನು ಅಂದಿನ ಜನರು ತಮ್ಮ ವಾಸಸ್ಥಾನವಾಗಿ ಮಾಡಿಕೊಂಡರು. ನಂತರ ಮಾನವನು ಬೆಳವಣಿಗೆ ಹೊಂದುತ್ತ ಈ ಬೆಟ್ಟ ಪ್ರದೇಶವನ್ನು ಕೋಟೆಗೋಡೆಯ ರೀತಿ ಉಪಯೋಗಿಸಿ ಸಾಮ್ರಾಜ್ಯವನ್ನು ಸ್ಥಾಪಿಸಲು ಪ್ರಾರಂಭಿಸಿದರು. ಸಾಮ್ರಾಜ್ಯಗಳು ಬೆಳೆದಂತೆ ಆಯಾ ಕಾಲಘಟ್ಟದಲ್ಲಿ ಒಂದೊಂದಾಗಿ ಹೊಸ ಅನುಕೂಲತೆಗಳನ್ನು ಮಾಡಿಕೊಳ್ಳಲು ಪ್ರಾರಂಭಿಸಿದರು.

## ಕೊನೆಟಿಪ್ಪಣಿ

1. *Indian Archaeology - A Revew 1976-77,* p. 24.

2. Kathleen D Morrison., 1995, *Field of Victory, Vijayanagara and the Course of Intensififcation, No. 53*, pp. 32-33.

3. ವಾಸುದೇವನ್ ಸಿ. ಎನ್., ೨೦೧೦, "ಕಡೇಬಾಗಿಲು ಪ್ರಾಗಿತಿಹಾಸ ಕಾಲದ ನೆಲೆ", ಗೋಪಾಲ ಆರ್ (ಸಂ.) ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೨೦-೨೧.

4. Matthew D. Gallon., 2008, "The Political Economy of Iron in Late Prehistoric South India", *Antiquity,* Vol. 82, pp. 1-3.

5. *I.A.R. 1985-86*, p. 40.

6. Carla M. Sinopoli, Kathleen D. Morrison, Gopal R., 2008, "Late Prehistoric and Early Historic South India Recent Research along the Tungabhadra River, Karnataka", *Antiquity*, Vol. 82, pp. 7-9.

7. *I.A.R. 1975-76,* p.20.

8. Namita Sugandhi., 2008, "Networks of Intention in a Peripheral Landscape", *Antiquity*, Vol. 82, pp.11-13.

9. Sundara A., 1997, "*The Ancient Kishkindha-Vanaras Capital*", *'Hampi'*, p.3.

10. Kathleen D. Morrison., 1995, *Op.cit*, p. 34.

11. ಕೃಷ್ಣಮೂರ್ತಿ ಪಿ.ವಿ., ೨೦೦೬, "ಹಸ್ತಿನಾವತಿ ವಳತಿ," ವಿಜಯನಗರ ಸಾಮ್ರಾಜ್ಯದ ಒಂದು ವಿಶಿಷ್ಟ ಪ್ರಾದೇಶಿಕ ವಿಭಾಗ, ವಿಜಯನಗರ ಅಧ್ಯಯನ, ಸಂ. ೧೧ ಪು. ೩೩.

12. ಚನ್ನಬಸಪ್ಪ ಎಸ್. ಪಾಟೀಲ್., ೨೦೦೬, "ವಿಜಯನಗರ ಕೋಟೆ," ದೇವರಕೊಂಡಾರೆಡ್ಡಿ (ಸಂ.), ಹಂಪಿ ಸಂಪುಟ ಕಲೆ, ಕ್ರೀಡೆ ಮತ್ತು ಕೌಶಲ, ಪು. ೨೪.

13. ಜಗದೀಶ., ೨೦೧೭, "ಹಂಪೆಯ ಹೊಸಪಟ್ಟಣ ಒಂದು ಟಿಪ್ಪಣಿ", ವಿಜಯನಗರ ಅಧ್ಯಯನ ಸಂ. ೨೦, ಪು. ೨೭೦-೨೭೨.

14. Vasudevan C.S., 2014, *Report on the Excavations at Hampi 1991-2010,* Vol. I

15. ರಾಬರ್ಟ್ ಸಿವೆಲ್ (ಮೂಲ) ಸದಾನಂದ ಕನವಳ್ಳಿ (ಅನುವಾದ), ೨೦೦೮, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪು. ೯೭.

16. ಅದೇ. ಪು. ೨೬೧

17. ಅದೇ. ಪು. ೨೫೪

18. ಅದೇ. ಪು. ೨೬೨

19. ಅದೇ. ಪು. ೯೪-೯೫

20. Nagaraja Rao M.S., "Nomenclature of a Royal Road of Vijayanagara", *Vijayanagara Progress of Research 1979-83*, pp.57-59.

21. John M. Fritz., "The Roads of Vijayanagara: A Preliminary Study", *Vijayanagara Progress of Research 1979-83*, pp. 51-56.

22. ಸದಾನಂದ ಕನವಳ್ಳಿ, ೨೦೦೮, ಪೂರ್ವೋಕ್ತ ಪು. ೨೬೧

23. ಸೋಮಶೇಖರ್ ಎಸ್.ವೈ. ೨೦೦೬, "ಹಂಪೆಯ ಬಜಾರಗಳು", ದೇವರಕೊಂಡಾರೆಡ್ಡಿ (ಸಂ.), ಹಂಪಿ ಸಂಪುಟ ಕಲೆ, ಕ್ರೀಡೆ ಮತ್ತು ಕೌಶಲ, ಪು. ३५೦-३५१

24. ಅದೇ. ಪು-३५३

25. ಚನ್ನಬಸಪ್ಪ ಎಸ್. ಪಾಟೀಲ್., ೨೦೦೬, ಪೂರ್ವೋಕ್ತ, ಪು. ೨೪೦-೨೪೧

26. Anila Verghes., "The Tiruvengalanath Temple in Krishnapura", *Vijayanagara Progress of Research 1988-1991,* p. 179.

27. ವಸುಂಧರಾ ಫಿಲಿಯೋಜಾ., ೧೯೯೨, ಅಳಿದುಳಿದ ಹಂಪೆ, ಪು. ೬೦-೬೧.

28. ವಾಸುದೇವನ್ ಸಿ.ಎಸ್., ೨೦೧೧, "ಹಂಪಿ ಪರಿಸರದಲ್ಲಿ ವಿಜಯನಗರ ಕಾಲದ ಅಕ್ಕಿಪೇಠೆ", ಭಟ್‌ಸೂರಿ ಕೆ.ಜಿ, (ಸಂ.) ಶಾಸನ ಅಧ್ಯಯನ, ಸಂ. ೮ ಸಂಚಿಕೆ. ೨, ಪು. ೧೨೦-೧೨೧.

29. ಶಿವಲೀಲಾ., ೨೦೦೩, ಕಮಲಾಪುರ ಶಾಸನಗಳು ಮತ್ತು ದೇವಾಲಯಗಳು, ಅಪ್ರಕಟಿತ ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೫.

30. Nagaraja Rao M.S., "Ahmad Khan's Dharmasala", *Vijayanagara Progress of Research 1979-83,* pp. 30-32.

31. ಚನ್ನಬಸಪ್ಪ ಎಸ್. ಪಾಟೀಲ್., ೨೦೦೬, ಪೂರ್ವೋಕ್ತ, ಪು. ೨೪೦-೨೪೧.

32. ಸೋಮಶೇಖರ್ ಎಸ್.ವೈ. ಪೂರ್ವೋಕ್ತ, ೨೦೦೬, ಪು. ೩೫೭-೩೫೮.

33. Bernard K. Means., "A Small Settlement Near the city of Vijayanagara", *Vijayanagara Progress of Research 1987-88*, pp. 154-162

34. ಅದೇ, ಪು. ೨೪೦-೨೪೧

35. ಸೋಮಶೇಖರ್ ಎಸ್.ವೈ. ೨೦೦೬, ಪೂರ್ವೋಕ್ತ, ಪು. ೨೪೦-೨೪೧

36. Channabasappa S. Patil., "Malige-Kupa- Arama At Malapanagudi", *Vijayanagara Progress of Research 1984-87*, pp. 177-179.

37. Balasubramanya., "Temples at Nagenahalli", *Vijayanagara Progress of Research 1983-87*, p. 183

38. Basava Raja K.R., 1978, *The Vijayanagara Urbanity*, p. 22

39. ಮಹದೇವ ಸಿ., ಸುಬ್ಬಣ್ಣ ಎ.ರೈ. ಮಾಧವ ಪೆರಾಜೆ., ೨೦೦೨, ಹೊಸಪೇಟೆ ತಾಲೂಕು ದರ್ಶನ, ಪು. ೧೩೪

40. ತುಕಾರಾಮರಾವ್ ಹೆಚ್., ೧೯೯೭, ಹೊಸಪೇಟೆ ಚಾರಿತ್ರಿಕ ವಿವೇಚನೆ: ಐತಿಹ್ಯ ಪರಿಶೀಲನೆ, ಪು. ೮

# ಅಧ್ಯಾಯ ೫

## ಸಮಾರೋಪ

ಭಾರತದ ಇತಿಹಾಸದಲ್ಲಿ ಮಾನವನು ಒಂದೆಡೆ ವಾಸಿಸಲು ಪ್ರಾರಂಭಿಸಿದ ದಿನಗಳಂದಲೂ ವಸತಿ ನೆಲೆಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಅವನು ತನ್ನ ಗ್ರಾಮೀಣ ಜೀವನದಿಂದ ಪ್ರಗತಿ ಹೊಂದುತ್ತಾ ನಗರೀಕರಣಕ್ಕೆ ಒಳಗಾಗಿ ಪ್ರಗತಿ ಸಾಧಿಸಿದ. ಮಾನವನ ಅಲೆಮಾರಿ ಜೀವನ ಕ್ರಮದಿಂದ ಒಂದಡೆ ನಿರಂತರವಾಗಿ ವಾಸಿಸುವ ಮತ್ತು ತನಗೆ ಬೇಕಾದ ಎಲ್ಲಾ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾ ನಾಗರೀಕತೆಗೆ ಬುನಾದಿಯನ್ನು ಹಾಕಿದನು. ವಿಶ್ವದ ಪ್ರಾಚೀನ ನಾಗರೀಕತೆಗಳ ಸಾಲಿನಲ್ಲಿ ಭಾರತದ ನಾರೀಕತೆಯು ಗಮನ ಸೆಳೆಯುವಷ್ಟು ಪ್ರಗತಿ ಸಾಧಿಸಿದೆ.

ಭಾರತದ ಇತಿಹಾಸವನ್ನು ಪ್ರಮುಖವಾಗಿ ಸಿಂಧೂ ಬಯಲಿನ ನಾಗರೀಕತೆಯಿಂದ ಗುರುತಿಸಲಾಗುತ್ತದೆ. ಈ ನಾಗರೀಕತೆಯು ವಾಯವ್ಯ ಭಾರತದಲ್ಲಿ ತಲೆ ಎತ್ತಿ ನಂತರ ವಿಸ್ತಾರಗೊಳ್ಳುತ್ತಾ ಭಾರತದ ಬಹುಭಾಗಗಳನ್ನು ಆಕ್ರಮಿಸಿಕೊಂಡಿತು. ಇವರ ಕಾಲಘಟ್ಟದ ನಂತರ ಸಿಂಧೂ ನಾಗರೀಕತೆಯ ಕೆಲವು ಲಕ್ಷಣಗಳನ್ನು ಹೊಂದಿದ ನಗರಗಳಾಗಿ ಇಲ್ಲದಿದ್ದರೂ, ಗ್ರಾಮೀಣ ಸಂಸ್ಕೃತಿಗಳಾಗಿ ತಲೆ ಎತ್ತಿದವು. ಅವುಗಳು ಸಹ ತನ್ನದೇ ಆದ ವಿಶೇಷತೆಗಳನ್ನು ಹೊಂದಿ ವಸತಿನೆಲೆಗಳೆಂದು ಗುರುತಿಸಿಕೊಂಡವು. ನಂತರ ಕಾಲಘಟ್ಟದಲ್ಲಿ ಬೃಹತ್‌ಶಿಲಾಯುಗ ಕಾಲಘಟ್ಟ ಮತ್ತು ಕೆಲವು ಸ್ಥಳೀಯ ಸಂಸ್ಕೃತಿಗಳು ತಲೆ ಎತ್ತಿದವು. ಪ್ರಾಗಿತಿಹಾಸ ಕಾಲದ ನಂತರ ಆದಿಇತಿಹಾಸ ಕಾಲಕ್ಕೆ ಕಾಲಿಡುತ್ತಿದ್ದಂತೆ ಮೌರ್ಯ ಸಾಮ್ರಾಜ್ಯವು ಇಡೀ ಭಾರತವನ್ನು ಆಕ್ರಮಿಸಿತು. ಅಂದಿನಿಂದ ಆರಂಭವಾದ ಮಾನವನ ಚಟುವಟಿಕೆಗಳನ್ನು ಅವರ ಕಾಲದ ಅರಮನೆಗಳು, ಲೌಕಿಕ ಕಟ್ಟಡಗಳು, ಆಭರಣಗಳು, ಮಡಿಕೆಗಳು, ನಾಣ್ಯಗಳು, ಶಾಸನಗಳು, ದೇವಾಲಯಗಳ,

ಇತ್ಯಾದಿಗಳ ಮೂಲಕ ಕಾಣಬಹುದಾಗಿದೆ. ಅವುಗಳ ಪುರಾವೆಗಳು ನಮಗೆ ಇಂದಿಗೂ ದೊರಕುತ್ತಲಿವೆ. 'ಹಂಪಿ ಪರಿಸರದ ವಸತಿನೆಲೆಗಳು' ಎಂಬ ಅಧ್ಯಯನ ವಿಷಯವನ್ನು ಐದು ಅಧ್ಯಾಯಗಳಲ್ಲಿ ಪ್ರಸ್ತುತ ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ. ಮೊದಲನೇ ಅಧ್ಯಾಯದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಪ್ರಕಟಿತ ಗ್ರಂಥ ಮತ್ತು ಲೇಖನಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಎಲ್ಲವುಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಅಧ್ಯಯನದ ಉದ್ದೇಶವನ್ನು ದೃಢಪಡಿಸಿಕೊಂಡು ಹಂಪಿ ಪರಿಸರದಲ್ಲಿ ದೊರೆತ ವಸತಿನೆಲೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನದ ವ್ಯಾಪ್ತಿಯಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ೧೪ ಗ್ರಾಮಗಳಾದ ಹಂಪಿ, ಕಡ್ಡಿರಾಂಪುರ, ಕಮಲಾಪುರ, ಮಲಪನಗುಡಿ, ಕೊಂಡನಾಯಕನಹಳ್ಳಿ, ಕಾಳಘಟ್ಟ, ಸಿಂಗನಾಯಕನ ಹಳ್ಳಿ, ನಾಗೇನಹಳ್ಳಿ, ಗುಡಿಓಬಳಾಪುರ, ಡಾಣಾಪುರ, ಕೃಷ್ಣಾಪುರ, ನಿಂಬಾಪುರ, ವೆಂಕಟಾಪುರ, ಬುಕ್ಕಸಾಗರ ಮತ್ತು ಕೊಪ್ಪಳ ಜಿಲ್ಲೆ ಗಂಗಾವತಿ ತಾಲೂಕಿನ ೧೫ ಗ್ರಾಮಗಳಾದ ಗಂಗಾವತಿ ತಾಲೂಕಿನ ಆನೆಗೊಂದಿ, ಅಂಜನಹಳ್ಳಿ, ಬಸವನದುರ್ಗ, ಚಿಕ್ಕರಾಂಪುರ, ಸಿಂಗನಗೊಂಡ, ಸಾಣಾಪುರ, ತಿರುಮಲಾಪುರ, ಹನುಮನಹಳ್ಳಿ, ಕೃಷ್ಣಾಪುರ, ಲಕ್ಷ್ಮೀಪುರ, ಮಲ್ಲಾಪುರ, ರಾಂಪುರ, ರಾಮದುರ್ಗ, ರಂಗಾಪುರ, ಹಾಗೂ ವಿರುಪಾಪುರಗಡ್ಡೆಗಳನ್ನು ಸೇರಿಸಿಕೊಳ್ಳಲಾಗಿದೆ. ಇದರೊಂದಿಗೆ ಅಧ್ಯಯನಕ್ಕೆ ಪೂರಕವಾಗಿ ಹೊಸಪೇಟೆ ತಾಲೂಕಿನ ಮುನಿರಾಬಾದ್, ಹೊಸಪೇಟೆಯ ಚಿತ್ತವಾಡಿಗೆ, ಅನಂತಶಯನಗುಡಿ ಪ್ರದೇಶಗಳನ್ನು ಸೇರಿಸಿಕೊಳ್ಳಲಾಗಿದೆ. ಪ್ರಾಥಮಿಕ ಆಕರಗಳನ್ನು ಕ್ಷೇತ್ರಕಾರ್ಯದ ಮೂಲಕ ನೆಲೆಗಳ ವಿನ್ಯಾಸ ಹಾಗೂ ಲಕ್ಷಣಗಳನ್ನು ಛಾಯಾಚಿತ್ರ, ನಕ್ಷೆಗಳ ಮೂಲಕ ದಾಖಲಿಸಿಕೊಳ್ಳಲಾಗಿದೆ. ಆನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ.

ಎರಡನೇ ಅಧ್ಯಾಯದಲ್ಲಿ 'ವಸತಿ ನೆಲೆಗಳ ಹುಟ್ಟು ಮತ್ತು ಬೆಳವಣಿಗೆ' ಭಾರತ ಮತ್ತು ಕರ್ನಾಟಕದ ನೆಲೆಗಳನ್ನು ಕುರಿತು ಚರ್ಚಿಸಲಾಗಿದೆ. ಭಾರತದ ಪ್ರಾಗಿತಿಹಾಸಿಕ ಕಾಲದ ಪ್ರಮುಖ ನೆಲೆಗಳಾದ ಶ್ರೀನಗರದ ಬೂರ್ಜಹೋಮ್, ಗುಫಕ್ರಾಲ್, ವಿಂಧ್ಯಾಕಣಿವೆ, ಚಿರಾಂದ್, ರಾಜಸ್ಥಾನದ ಭಾಗೋರ್, ಪಶ್ಚಿಮ ಬಂಗಾಲದ ಬಿರ್‌ಬಾನ್‌ಪುರ್, ಮಧ್ಯಪ್ರದೇಶದ ಭೀಮ್‌ಬೇಟ್ಕಾ, ಅಲಹಾಬಾದ್-ಪ್ರಥಾಪ್‌ಘರ್, ಮಹಾರಾಷ್ಟ್ರದ ನೇವಾಸ, ಆಂಧ್ರಪ್ರದೇಶ ಕರ್ನೂಲ್ ಜಿಲ್ಲೆಯ-ಚಿತ್ತೂರು, ಪ್ರಕಾಶಂ ಜಿಲ್ಲೆಯ-ನಾಗಾರ್ಜುನಕೊಂಡ, ಮಧುರಾವಾಡ, ಪರದೇಸಿಪಾಲೆಂ, ತಮಿಳುನಾಡಿನ ಅತ್ತಿರಂಪಾಕ್ಕ, ಪಯ್ಯಂಪಳ್ಳಿ, ತಿರುನೆಲ್‌ವೇಲಿ, ಮಂತಾದ

ವಸತಿನೆಲೆಗಳ ಗುಣಲಕ್ಷಣಗಳನ್ನು ವಿವರಿಸಲಾಗಿದೆ. ಇವುಗಳು ವಿವಿಧ ಕಾಲಘಟ್ಟಕ್ಕೆ ಸೇರಿರುವುದರಿಂದ ವಸತಿನೆಲೆಗಳ ಬೆಳವಣಿಗೆಯನ್ನು ಅರಿಯಲು ಸಹಾಕಾರಿಯಾಗಿದೆ.

ಕರ್ನಾಟಕದ ಪ್ರಮುಖ ನೆಲೆಗಳಾದ ಹುಣಸಗಿ, ಯಡಿಯೂಪುರ, ಫತೇಪೂರ, ಅನಗವಾಡಿ, ಜಾಲಹಳ್ಳಿ, ಕಿಬ್ಬನಹಳ್ಳಿ, ಕೊಡೇಕಲ್, ತೆಕ್ಕಲಕೋಟೆ, ಮಸ್ಕಿ, ತೆರದಾಳು, ಟಿ.ನರಸಿಪುರ, ಸಂಗನಕಲ್ಲು, ಕಪಗಲ್, ಹಳ್ಳೂರು, ಬ್ರಹ್ಮಗಿರಿ, ಹೆಮ್ಮಿಗೆ, ಬ್ರಹ್ಮಗಿರಿ, ಬಿಳೇಬಾವಿ, ಇಂಗಳಗಿರಿ, ಕಲ್ಲಿದೇವನಹಳ್ಳಿ, ಕುಮಶಿ, ಪಿಕ್ಲಿಹಾಳು, ಹಳ್ಳೂರು, ಕಲ್ಲೂರು, ಮುದಗಲ್, ಗವಿಮಠ, ಬೇವಿನಹಾಳ ಶಿವಪುರ, ಇಂದರ್ಗಿ ಮುಂತಾದ ನೆಲೆಗಳನ್ನು ವಿವರಿಸಲಾಗಿದೆ.

ವಸತಿನೆಲೆಗಳು ಹುಟ್ಟಲು ಇದ್ದ ಪ್ರೇರಕ ಅಂಶಗಳನ್ನು ಪರಿಗಣಿಸುತ್ತಾ ಮಾನವನು ಭೂಮಿಯ ಮೇಲೆ ಹುಟ್ಟಿದಾಗಿನಿಂದ ಹೇಗೆ ಪ್ರಕೃತಿಯನ್ನು ಬಳಸಿಕೊಂಡು ಬದುಕಲು ಪ್ರಾರಂಭಿಸಿದನು ಎಂಬುದನ್ನು ವಿವರಿಸಲಾಗಿದೆ. ಉದಾಹರಣೆಗೆ ಮೊದಲು ಕಲ್ಲಾಸರೆಗಳು, ನಂತರ ಗುಹೆಗಳಲ್ಲಿ ಅವನು ನೆಲೆಸಿದನು. ನಂತರ ಬೆಳವಣಿಗೆ ಹೊಂದುತ್ತಾ ಗುಡಿಸಲುಗಳನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ. ಹಾಗೆಯೇ ಮುಂದುವರೆದು ಮಣ್ಣು, ಗಾರೆ, ಕಟ್ಟಿಗೆಯನ್ನು ಮುಂತಾದ ವಸ್ತುಗಳನ್ನು ಉಪಯೋಗಿಸಿಕೊಂಡು ವಸತಿನೆಲೆಯ ರಚನಾ ವಿನ್ಯಾಸದಲ್ಲಿ ಮಾರ್ಪಾಡು ಮಾಡಿಕೊಂಡನು. ಮಾನವನು ಮೊದಲು ಗುಹೆಗಳಲ್ಲಿ ವಾಸಮಾಡಲು ಪ್ರಾರಂಭಿಸಿದ. ನಂತರ ಬಂಬೂಗಳ ಮೂಲಕ ತ್ರಿಕೋನ ಆಕಾರದಲ್ಲಿ ವಾಸದ ಮನೆಗಳನ್ನು ಕಟ್ಟಿಕೊಂಡು ಅದರ ಮುಂದೆ ಅರ್ಧಭಾಗ ಮಣ್ಣಿನ ಗೋಡೆಯನ್ನು ಕಟ್ಟಿ ಅದರ ಮೇಲೆ ಬಂಬೂಗಳನ್ನು ನೆಟ್ಟು ಛತ್ತಿನ ಭಾಗಕ್ಕೆ ಹುಲ್ಲಿನಿಂದ ಹೊಂದಿಸುತ್ತಿದ್ದ. ವೃತ್ತಾಕಾರದ ಹಾಗೂ ಚೌಕಾಕಾರದ ಗುಡಿಸಲುಗಳನ್ನು ಕಟ್ಟಿಕೊಳ್ಳುತ್ತಿದ್ದ. ನಂತರ ಕಾಲಘಟ್ಟದಲ್ಲಿ ಮಣ್ಣಿನ ಇಟ್ಟಿಗೆಯನ್ನು ಬಳಸಿಕೊಂಡು ಮನೆಯನ್ನು ಕಟ್ಟಲು ಆರಂಭಿಸಿದ. ಚಿಕ್ಕ ಗಾತ್ರದ ಮನೆಗಳನ್ನು ಕಟ್ಟಲು ಪ್ರಾರಂಭಿಸಿ ನಂತರ ಸುಟ್ಟ ಇಟ್ಟಿಗೆಯನ್ನು ಬಳಸಲು ಪ್ರಾರಂಭವಾದಾಗಿನಿಂದ ದೊಡ್ಡ ಮನೆಗಳನ್ನು ಕಟ್ಟಿಕೊಳ್ಳಲಾರಂಭಿಸಿದ. ನಂತರ ಕಾಲಘಟ್ಟದಲ್ಲಿ ಕಲ್ಲು, ಇಟ್ಟಿಗೆಯನ್ನು ಬಳಸಲು ಪ್ರಾರಂಭಿಸಿ ಅವುಗಳನ್ನು ಇಂದಿನವರೆಗೂ ಮುಂದುವರೆಸಿಕೊಂಡು ಬಂದಿರುವನು. ಮಾನವನ ವಸತಿಗಳಲ್ಲಿ ಯಾವಾಗಲೂ ಗುಡಿಸಿಲಿನ ಹೊರಭಾಗದಲ್ಲಿ ಮೊದಲಿಗೆ ಒಲೆಯಿರಿಸುತ್ತಿದ್ದನು. ನಂತರ ಮನೆಯನ್ನು ವಿಸ್ತಾರಗೊಳಿಸಿದ ನಂತರ ಮನೆಯ ಹಿಂಭಾಗದಲ್ಲಿ ಒಲೆಯನ್ನು ಇರಿಸಿಕೊಳ್ಳುತ್ತಿದ್ದನು. ಹಸುವಿನ ಕೊಟ್ಟಿಗೆ ಅಥವಾ ವಿವಿಧ ಸಾಕು ಪ್ರಾಣಿಗಳ ಕೊಟ್ಟಿಗೆಯನ್ನು ಮನೆಯ ಪಕ್ಕದಲ್ಲಿ ಕಟ್ಟಿಕೊಳ್ಳಲು ಪ್ರಾರಂಭಿಸಿದ.

ಹೀಗೆ ಮುಂದುವರೆದು ಮನೆ ಬಳಕೆಯ ವಸ್ತುಗಳನ್ನು ತಯಾರಿಸಿ ಮನೆಯಲ್ಲಿಯೇ ಉತ್ಪಾದಕ ಘಟಕಗಳನ್ನು ಸ್ಥಾಪಿಸತೊಡಗಿದ. ಉದಾಹರಣೆಗೆ ಮಡಿಕೆ ಹಾಗೂ ಮಣಿಗಳನ್ನು ತಯಾರಿಸುವುದು, ಕುಂಬಾರಿಕೆ, ಆಯುಧಗಳು ಇತ್ಯಾದಿ.

ಮೂರನೆಯ ಅಧ್ಯಾಯವು 'ಹಂಪಿ ಪರಿಸರದ ವಸತಿ ನೆಲೆಗಳು.' ಇದರಲ್ಲಿ ಹಂಪಿ ಪರಿಸರಕ್ಕೆ ಪ್ರಾಮುಖ್ಯತೆಯನ್ನು ಕೊಡಲಾಗಿದ್ದು, ಇಲ್ಲಿನ ವಸತಿನೆಲೆಗಳು ಕುರಿತು ವಿಸ್ತೃತವಾಗಿ ಚರ್ಚಿಸಲಾಗಿದೆ. ಹಂಪಿ ಪರಿಸರವು ಭೌಗೋಳಿಕವಾಗಿ ಸಂಪತ್ಭರಿತವಾಗಿದೆ. ನದಿ, ಬೆಟ್ಟ, ಕಣಿವೆ, ಖನಿಜ ಸಂಪತ್ತು, ವಿವಿಧ ಸಂಪನ್ಮೂಲಗಳಿರುವ ಪರಿಸರವಾಗಿದೆ. ಈ ಪರಿಸರದಲ್ಲಿ ಮೊದಲು ಮಾನವನು ಪ್ರಾಗಿತಿಹಾಸ ಕಾಲದಿಂದ ವಾಸಿಸತೊಡಗಿದ. ಪ್ರಾಗಿತಿಹಾಸ ಕಾಲದ ನೆಲೆಗಳು ಮೊದಲು ಗುಹೆಗಳಲ್ಲಿ ಇದ್ದವೆಂಬುದನ್ನು ಅಲ್ಲಿ ದೊರಕಿರುವ ಬಂಡೆಯ ಮೇಲಿನ ವರ್ಣಚಿತ್ರಗಳು ಪುರಾವೆಯನ್ನು ಒದಗಿವೆ. ನಂತರ ಆದಿಇತಿಹಾಸ ಕಾಲದಲ್ಲಿ ಹಂಪಿಯಲ್ಲಿ ದೊರೆತ ಶಾಸನ ಸಹಿತ ಬೌದ್ಧ ಫಲಕ ಮತ್ತು ಕಬ್ಬಿಣದ ವಸ್ತುಗಳ ಆಧಾರಗಳಿಂದ ಇವರ ಆರ್ಥಿಕ, ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಅರಿಯಬಹುದು. ಆದರೆ ಅವರ ಕಾಲದ ವಸತಿನೆಲೆಗಳು ದೊರಕಿಲ್ಲ. ಆದಿಇತಿಹಾಸ ಕಾಲಘಟ್ಟದ ವಿಷಯಗಳನ್ನು ಅಧ್ಯಾಯದಲ್ಲಿ ವಿವರಿಸಲಾಗಿದೆ. ಚಾರಿತ್ರಿಕ ಕಾಲಘಟ್ಟದ ಅವಶೇಷಗಳು ಇಲ್ಲಿ ಅಧಿಕವಾಗಿ ದೊರಕದಿದ್ದರೂ, ಕೆಲವು ಶಾಸನ ಮತ್ತು ಧಾರ್ಮಿಕ ಕಟ್ಟಡಗಳು ಈ ಪ್ರದೇಶವು ಜನವಸತಿ ಪ್ರದೇಶವೆಂದು ತಿಳಿಸಿಕೊಡುತ್ತವೆ.

ವಿಜಯನಗರ ಸಾಮ್ರಾಜ್ಯದ ಎಲ್ಲಾ ಧಾರ್ಮಿಕ ಮತ್ತು ಲೌಕಿಕ ಕಟ್ಟಡಗಳು ಹಂಪಿ ಪರಿಸರದಲ್ಲಿ ಇರುವುದನ್ನು ಕಾಣಬಹುದು. ವಿಜಯನಗರೋತ್ತರ ಕಾಲದಲ್ಲಿಯೂ ಹಂಪಿ ಪರಿಸರ ಸಮೃದ್ಧವಾಗಿ ಬೆಳೆಯಿತು. ಅದೇ ರೀತಿ ಇಂದಿಗೂ ಮುಂದುವರಿದುಕೊಂಡು ಬಂದಿದೆ. ಹಂಪಿ ಪರಿಸರದಲ್ಲಿರುವ ೨೯ ಗ್ರಾಮಗಳ ವಿವರಣೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ನೀಡಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಹಂಪಿ ಪರಿಸರದ ವಸತಿನೆಲೆಗಳ ವಿಶ್ಲೇಷಣೆಯನ್ನು ಮಾಡಲಾಗಿದೆ. ಹಂಪಿ ಪರಿಸರದ ವಸತಿ ನೆಲೆಗಳ ವಿಶೇಷತೆಯನ್ನು ಈ ಅಧ್ಯಾಯದಲ್ಲಿ ನೀಡುವ ಪ್ರಯತ್ನ ಮಾಡಲಾಗಿದೆ. ಐದನೆಯ ಅಧ್ಯಾಯವು ಸಮರೋಪವಾಗಿದೆ. ಇದರಲ್ಲಿ ಅಧ್ಯಯನದ ಫಲಿತಗಳನ್ನು ಹಾಗೂ ಮಹಾಪ್ರಬಂಧದಲ್ಲಿ ಚರ್ಚಿಸಿರುವ ಅಧ್ಯಾಯಗಳ ಕುರಿತು ಅವಲೋಕಿಸಲಾಗಿದೆ. ಮಹಾಪ್ರಬಂಧದಲ್ಲಿ ಛಾಯಚಿತ್ರಗಳನ್ನು ಮತ್ತು ಹಂಪಿ ಪರಿಸರದ ಉಪಗ್ರಹ ಆಧಾರಿತ ನಕ್ಷೆಗಳನ್ನು ವಸತಿನೆಲೆಗಳನ್ನು ವಿವರಿಸುವಾಗ ಸಾಂದರ್ಭಿಕವಾಗಿ

ನೀಡಲಾಗಿದೆ. ಅವುಗಳು ವಸತಿನೆಲೆಗಳ ವಿಸ್ತಾರ ಮತ್ತು ಭೌಗೋಳಿಕ ಮಾಹಿತಿಯನ್ನು ನೀಡುತ್ತವೆ.

**ಅಧ್ಯಯನದ ಫಲಿತಗಳು**

ಪ್ರಾಗಿತಿಹಾಸ ಕಾಲದಿಂದ ಮಧ್ಯಯುಗೀನ ಕಾಲದವರೆಗಿನ ನೆಲೆಗಳು ಹಂಪಿ ಪರಿಸರದಲ್ಲಿ ವ್ಯಾಪಕವಾಗಿ ಹರಡಿದೆ. ವಿಜಯನಗರ ಪೂರ್ವ ಕಾಲದ ಪೂರ್ಣಪ್ರಮಾಣದ ನೆಲೆಯು ಈ ಪರಿಸರದಲ್ಲಿ ದೊರೆತಿಲ್ಲ. ಚದುರಿದಂತೆ ವ್ಯಾಪಿಸಿರುವ ವಿವಿಧ ಕಾಲಘಟ್ಟಗಳ ನೆಲೆಗಳನ್ನು ಒಂದು ವ್ಯವಸ್ಥಿತ ಚೌಕಟ್ಟಿನ ಒಳಗೆ ಕೊಡಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ವಿವಿಧ ಕಾಲಘಟ್ಟಗಳ ನೆಲೆಗಳ ಕುರಿತು ಅಧ್ಯಯನಗಳು ಅಷ್ಟಾಗಿ ನಡೆದಿಲ್ಲ. ಬಿಡಿ ಲೇಖನಗಳ ಮೂಲಕ ವಸತಿನೆಲೆಗಳನ್ನು ಪರಿಚಯಿಸಲಾಗಿದೆ. ಅವುಗಳನ್ನು ಒಂದೆಡೆ ಸೇರಿಸಿ ಸಮಗ್ರವಾಗಿ ಇಲ್ಲಿ ವಿಶ್ಲೇಷಿಸಿ ನೀಡುವ ಪ್ರಯತ್ನ ಮಾಡಲಾಗಿದೆ. ವಸತಿನೆಲೆಗಳಲ್ಲಿ ಪ್ರಮುಖವಾದದ್ದು ಮಧ್ಯಯುಗೀನ ಕಾಲಕ್ಕೆ ಸೇರಿದ ವಿಜಯನಗರ ಕಾಲಾವಧಿಯದ್ದು. ಇದನ್ನು ಕುರಿತು ವಿವಿಧ ಮಜಲುಗಳಲ್ಲಿ ಅಧ್ಯಯನಗಳಾಗಿವೆ. ಆದರೆ ಇದುವರೆಗೆ ನೆಲೆಗಳ ಕುರಿತ ಸಮಗ್ರ ಅಧ್ಯಯನ ಆಗಿಲ್ಲ. ಇದು ಜನಸಾಮಾನ್ಯರ ಇತಿಹಾಸವಾಗಿದೆ.

೧. ಅಂದಿನ ಜನರು ನೈಸರ್ಗಿಕ ಬೆಟ್ಟ ನದಿ, ಬಂಡೆ ಇತ್ಯಾದಿಗಳನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳಲಾಗಿದೆ. ಬೆಟ್ಟವನ್ನು ಕೋಟೆಗೋಡೆ ರೀತಿಯಲ್ಲಿ ಬಳಸಿಕೊಳ್ಳುತ್ತಾ ಮತ್ತು ಅಲ್ಲಲ್ಲಿ ಬೆಟ್ಟದ ಮೇಲೆ ಕೋಟೆಯನ್ನು ನಿರ್ಮಿಸಿಕೊಂಡು ವಸತಿನೆಲೆಯನ್ನು ಸ್ಥಾಪಿಸಿದ್ದಾರೆ. ರಾಜಧಾನಿಪಟ್ಟಣದಲ್ಲಿ ಅರಮನೆಗಳು, ಶ್ರೀಮಂತರ ಮನೆಗಳು ಅಷ್ಟೇ ಅಲ್ಲದೆ ಸಾಮಾನ್ಯ ಜನರ ಮನೆಗಳು ಇದ್ದವು. ಇಲ್ಲಿ ಎಲ್ಲಾ ವಸ್ತುಗಳನ್ನು ಉತ್ಪಾದಿಸುವ ಕೈಗಾರಿಕಾ ಘಟಕಗಳಿದ್ದವು. ದೊಡ್ಡ ಮಾರುಕಟ್ಟೆ ಕೂಡಾ ರಾಜಧಾನಿಪಟ್ಟಣದಲ್ಲಿತ್ತು.

೨. ಎಲ್ಲಾ ರಾಜರು ತಮ್ಮ ಆಳ್ವಿಕೆಯ ಸಮಯದಲ್ಲಿ ಪುರಗಳು ಅದರೊಂದಿಗೆ ಪೇಟೆ ಅಥವಾ ಬಜಾರ್‌ನ್ನು ನಿರ್ಮಿಸಿದ್ದರು. ವಿಜಯನಗರ ಪೂರ್ವದಲ್ಲಿ ಆಳಿದ ಸಾಮ್ರಾಜ್ಯಗಳು ತಮ್ಮ ಆಳ್ವಿಕೆಯ ಅವಧಿಯಲ್ಲಿ ವಿವಿಧ ಗಾತ್ರದ ನಗರ, ಪಟ್ಟಣ, ಪುರ, ಗ್ರಾಮ, ಎಂಬ ವಸತಿನೆಲೆಗಳನ್ನು ನಿರ್ಮಿಸಿಕೊಂಡರು. ಆದರೆ ವಿಜಯನಗರ ಸಾಮ್ರಾಜ್ಯದಲ್ಲಿ ಎಲ್ಲಾ ಪ್ರದೇಶಗಳಿಗೆ 'ಪುರ' ಎನ್ನುವ ಪದವನ್ನು

ಬಳಕೆ ಮಾಡಿಕೊಂಡು ವಿಜಯನಗರ ಸ್ಥಾಪನೆಯ ಕಾಲದಿಂದ ಅಂತ್ಯದವರೆಗೆ ಒಂದೇ ರೀತಿಯಾದ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಬಂದಿರುವರು. 'ಪುರ'ದಲ್ಲಿ ದೇವಾಲಯ ಅದರ ಮುಂದೆ ಬಜಾರ್‌ಗಳು ಇದ್ದವು. ಈ ಬಜಾರ್‌ನ ಸುತ್ತಲೂ ಮನೆಗಳು ಬೆಳೆದುಬಂದವು. ಎಲ್ಲಾ ಪುರಗಳಲ್ಲಿಯೂ ಒಂದೇ ರೀತಿಯ ವ್ಯವಸ್ಥೆಯನ್ನು ಮಾಡಿಕೊಂಡಿರುವರು.

೩. ಆಯಾ ರಾಜರ ಆಡಳಿತ ಕಾಲದಲ್ಲಿ ನಿರ್ಮಾಣವಾದ ಪುರಗಳು ಇಂದಿಗೆ ಕೆಲವೊಂದು ಜನವಸತಿಯಿಲ್ಲದ ಹಾಳು ಪ್ರದೇಶವಾಗಿದೆ. ಕೆಲವೊಂದು ಅಂದಿನಿಂದ ಇಂದಿನವರೆಗೆ ಜನವಸತಿ ಹೊಂದಿದ ಪ್ರದೇಶಗಳಾಗಿ ಮುಂದುವರೆದುಕೊಂಡು ಬಂದಿದೆ. ರಾಜಧಾನಿಪಟ್ಟಣದಲ್ಲಿ ಜನವಸತಿಗಳಿಲ್ಲದ ಪ್ರದೇಶಗಳಾಗಿ ಇಂದು ಅವುಗಳ ಅವಶೇಷಗಳನ್ನು ಮಾತ್ರ ನೋಡುತ್ತೇವೆ. ಆದರೆ ಅಂದು ನಿರ್ಮಾಣವಾದ ನೆಳಲಹುಣಸೆ ಅಗ್ರಹಾರ, ನಿಂಬಾಪುರ, ಕೃಷ್ಣಾಪುರ, ಅಚ್ಯುತಾಪುರ, ಹೀಗೆ ಮುಂತಾದ ಪ್ರದೇಶದಲ್ಲಿ ಜನವಸತಿ ಮುಂದುವರೆಯದೆ ಆಯಾ ರಾಜರ ವೇಳೆಯಲ್ಲಿ ಮಾತ್ರ ಬೆಳೆದು ನಂತರ ನಶಿಸಿಹೋಗಿವೆ.

೪. ವಿರೂಪಾಕ್ಷಪುರದಲ್ಲಿ ಇಂದಿಗೂ ಅಲ್ಲಲ್ಲಿ ಜನವಸತಿಗಳು ಇವೆ. ದೇವಾಲಯ ಇರುವುದರಿಂದ ಮಾತ್ರ ವಸತಿಗಳು ಉಳಿದುಕೊಂಡಿದೆ. ಆದರೆ ನಾಗಲಾಪುರ, ತಿರುಮಲಾಪುರ, ಸಾಲೆ-ತಿರುಮಲರಾಯಪುರ, ಚಿನ್ನಾದೇವಿಪುರ, ಬುಕ್ಕಾಪುರ, ವೆಂಕಟಾಪುರ, ವರದರಾಜಮ್ಮನಪಟ್ಟಣ ಕಮಲಾಪುರ ಮುಂತಾದವುಗಳು ಇಂದಿಗೂ ಜನವಸತಿ ಹೊಂದಿದ ಪ್ರದೇಶಗಳಾಗಿ ಮುಂದುವರೆದುಕೊಂಡು ಬಂದಿದೆ. ಅಂದಿನ ನಾಗಲಾಪುರವು ಇಂದು ನಾಗೇನಹಳ್ಳಿಯಾಗಿ, ತಿರುಮಲಾಪುರ, ಸಾಲೆ-ತಿರುಮಲಾಪುರ ಹಾಗೂ ಚಿನ್ನಾದೇವಿಪುರವು ಇಂದು ಹೊಸಪೇಟೆಯ ಒಂದೊಂದು ಭಾಗವಾಗಿ ಬೆಳೆದುಕೊಂಡು ಬಂದಿವೆ. ಬುಕ್ಕಾಪುರವು ಬುಕ್ಕಾಸಾಗರವಾಗಿದೆ, ವೆಂಕಟಾಪುರ, ರಾಮಸಾಗರ, ಕಣವಿ ತಿಮಲಾಪುರ, ಹಾಗೆಯೇ ಜನವಸತಿ ಮುಂದುವರೆದುಕೊಂಡು ಬಂದು ಚಿಕ್ಕ ಚಿಕ್ಕ ಗ್ರಾಮಗಳಾಗಿ ಬೆಳೆದುಕೊಂಡು ಬಂದಿವೆ.

೫. ಕಮಲಾಪುರವು ವಿಜಯನಗರ ಕಾಲದಿಂದ ವಿಜಯನಗರೋತ್ತರ ಕಾಲದವರೆಗೂ ತನ್ನ ವಿಶೇಷ ಸ್ಥಾನವನ್ನು ಬೆಳಿಸಿಕೊಂಡು ಇಂದಿಗೂ ಜನವಸತಿಯನ್ನು ಉಳಿಸಿಕೊಂಡು ಬಂದಿದೆ. ವಿಜಯನಗರ ಕಾಲದಲ್ಲಿ ನಾಯಕರಿಗೆ ವಿಶೇಷವಾದ

